ಸ್ಕಾಲರ್‌ಶಿಪ್ ಮತ್ತು ಮುಲ್ಕೀ ಪರೀಕ್ಷೆಯ ವಿದ್ಯಾರ್ಥಿಗಳಿಗಾಗಿ

ಹೊಸ ಅಭ್ಯಾಸ ಪತ್ರಿಕೆಯಂತೆ ಬರೆದ

# ಪ್ರಶ್ನೋತ್ತರ ದೀಪಿಕೆ.

# ಇತಿಹಾಸ



ಲೇಖಕರು: ಪಿ. ಎ. ಗದಗಿನಮಠ.



ಪ್ರಕಾಶಕರು:

ಮೀನಾ ಬುಕ್ ಡಿಪ್ಪೋ,

ಮಾರುತಿ ಬೀದಿ,

ಬೆಳಗಾವಿ.

೧೯೫೨

[ ಬೆಲೆ. ೦—೧೪—೦

# ಪರಿವಿಡಿ.

# ಪ್ರಶ್ನೋತ್ತರ ದೀಪಿಕೆ.

# ಇತಿಹಾಸ



## ಮುಸಲ್ಮಾನರ ಆಳಿಕೆಯ ಕಾಲ.

### ಕ್ರಿ. ಶ. ೧೨೦೬ — ಕ್ರಿ. ಶ. ೧೭೬೧.

**ಪ್ರಶ್ನೆ:—** ಭಾರತದಲ್ಲಿ ಮುಸಲ್ಮಾನರ ಪ್ರವೇಶ ಮತ್ತು ರಾಜ್ಯಸ್ಥಾಪನೆಯ ಬಗ್ಗೆ ಸಂಕ್ಷಿಪ್ತವಾಗಿ ಬರೆಯಿರಿ.

**ಉತ್ತರ:—** ಭಾರತದ ಮೇಲೆ ಮಹಮ್ಮದೀಯರ ಮೊದಲನೇ ದಾಳಿ ಕ್ರಿ. ಶ. ೭೧೨ ರಲ್ಲಿ **ಮಹಮ್ಮದ್ ಕಾಶೀಂ** ಎಂಬುವನಿಂದ ಮಾಡಲ್ಪಟ್ಟಿತು. ಅವನು ಸಿಂಧದ ರಜಪೂತ್ ಅರಸ **ದಾಹರ**ನನ್ನು ಸೋಲಿಸಿದನು. ಮುಂದೆ **ಮುಲತಾನ**ದಮೇಲೆ ಸಾಗಿ ಹೋಗಿ ಅದನ್ನು ವಶಪಡಿಸಿಕೊಂಡನು. ಆದರೆ **ಚಿತ್ತೂರಿನ** ಮುತ್ತಿಗೆಯಲ್ಲಿ ಕಾಶಿಮನು ಚಿತ್ತೂರಿನ ಶೂರ ಸೇನಾನಿ **ಬಪ್ಪಾರಾವಳ**ನಿಂದ ಸೋಲಿಸಲ್ಪಟ್ಟು ಹಿಂತಿರುಗಿದನು. ಕಾಶೀಮನು ಹಿಂದೂಗಳಮೇಲೆ "ಜಜಿಯಾ" ಕರವನ್ನು ಹೊರಿಸಿದನು. ಹಲವರನ್ನು ಬಲಾತ್ಕರಿಸಿ ಮತಾಂತರಿಸಿದನು. ಅಲ್ಲದೆ ದಾಹರನ ಇಬ್ಬರು ಹೆಣ್ಣು ಮಕ್ಕಳನ್ನು, ಅಪಾರ ಸಂಪತ್ತನ್ನು ದೋಚಿಕೊಂಡು ಹೋದನು. ಇದರಿಂದ ಮಹಮ್ಮದೀಯರ ದಾಳಿಯು ಧರ್ಮ ಪ್ರಸಾರ ಮತ್ತು ಭಾರತವನ್ನು ಸುಲಿಯುವುದಾಗಿತ್ತೆನ್ನಬಹುದು. ಮುಂದೆ ಸಿಂಧ ಪ್ರಾಂತವು ಅರಬರ ಆಳಿಕೆಯಿಂದ ಸ್ವತಂತ್ರವಾಯಿತು. ಮೇಲಿನ ಘಟನೆಯಿಂದ ಹಿಂದುಸ್ಥಾನದಲ್ಲಿ ಮಹಮ್ಮದೀಯ ಧರ್ಮವು ಮೊದಲು ಸಿಂಧಪ್ರಾಂತವನ್ನು ಹೊಕ್ಕಿತು ಎನ್ನಬಹುದು.

ಮುಂದೆ ಸುಮಾರು ೧೦ ನೇ ಶತಮಾನದವರೆಗೆ ಭಾರತದಮೇಲೆ ಮುಹಮ್ಮದೀಯರ ದಾಳಿಗಳಾಗಲಿಲ್ಲ. ನಂತರ ಹಿಂದುಸ್ತಾನದಲ್ಲಿಯ ಹಿಂದೂ ಅರಸರು ತಮ್ಮತಮ್ಮಲ್ಲಿ ಕಲಹ ನಡೆಯಿಸಿದ್ದರಿಂದ ಹಿಂದುಸ್ತಾನದ ಭದ್ರತೆಯು ಕೆಟ್ಟಿತು. ಇದನ್ನು ಸಾಧಿಸಿ ಕ್ರಿ. ಶ. ೧೦೦೧ ರಲ್ಲಿ ಸುಲ್ತಾನ ಮಹಮೂದನು ಪಂಜಾಬದ ಅರಸ ಜಯಪಾಲನನ್ನು ಸೋಲಿಸಿದನು. ಮಹಮೂದನು ಒಟ್ಟು ೧೭ ಸಾರೆ ದೌಡು ಮಾಡಿದ ಘಟನೆಗಳೂ ಇತಿಹಾಸ ಪ್ರಸಿದ್ಧ ಇವೆ. ಇವನ ಉದ್ದಿಶ್ಯ ಧರ್ಮ ಪ್ರಸಾರ ಮತ್ತು ಲೂಟಿಯಾಗಿತ್ತು. ಕ್ರಿ. ಶ. ೧೧೯೨ ರಲ್ಲಿ ಮಹಮ್ಮದ್ ಘೋರಿಯು ಪೃಥ್ವಿರಾಜನನ್ನು ಸೋಲಿಸಿದನು. ಪೃಥ್ವಿರಾಜನ ಸೋಲಿಗೆ ಮುಖ್ಯ ಕಾರಣ ಜಯಚಂದನೇ ಆಗಿದ್ದನು. ಹೀಗೆ ಹಿಂದೂ ಅರಸರು ತಮ್ಮ ತಮ್ಮಲ್ಲಿ ಒಡಕು ಹುಟ್ಟಿಸಿಕೊಂಡು ಪರಕೀಯರ ಪ್ರವೇಶಕ್ಕೆ ಆಸ್ಪದವಿತ್ತರು. ಮುಂದೆ ಮಹಮ್ಮದ್ ಘೋರಿಯು ಹಿಂದೂ ಅರಸರನ್ನು ಒಬ್ಬೊಬ್ಬರನ್ನೇ ಸೋಲಿಸಿ ರಾಜ್ಯವನ್ನು ವಶಪಡಿಸಿಕೊಂಡು ತನ್ನ ರಾಜ್ಯ ಸ್ಥಾಪಿಸಿದನು. ರಾಜ್ಯದ ಆಡಳಿತೆಗೆ ತನ್ನ ಗುಲಾಮರನ್ನು ನೇಮಿಸಿದನು. ಹೀಗೆ ಸ್ಥಾಪಿಸಲ್ಪಟ್ಟ ಮುಸಲ್ಮಾನರ ಅಧಿಕಾರವು ಸುಮಾರು ೬೦೦ ವರ್ಷಗಳವರೆಗೂ ಇತ್ತು. ಆದ್ದರಿಂದ ಈ ಕಾಲಕ್ಕೆ ಮುಸಲ್ಮಾನರ ಆಳಿಕೆಯ ಕಾಲ ಎಂದು ಹೆಸರು ಬಂದಿದೆ.

**ಪ್ರಶ್ನೆ :—ಕೆಳಗೆ ಕೊಟ್ಟವರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.**

(೧) ಮಹಮ್ಮದ್ ಪೈಗಂಬರ. (೨) ಸುಲ್ತಾನ ಮಹಮೂದ್.
(೩) ಮಹಮ್ಮದ್ ಘೋರಿ. (೪) ಪೃಥ್ವೀರಾಜ.

**ಉತ್ತರಗಳು :—೧. ಮಹಮ್ಮದ್ ಪೈಗಂಬರ್ :**

ಇವರು ಅರಬಸ್ತಾನದ ಮಕ್ಕಾದಲ್ಲಿ ಕ್ರಿ. ಶ. ೫೭೦ರಲ್ಲಿ ಜನಿಸಿದರು. ಇವರ ತಂದೆಯ ಹೆಸರು **ಅಬ್ದುಲ್ಲಾ,** ತಾಯಿಯ ಹೆಸರು **ಅಮೀನಾ.** ಚಿಕ್ಕಂದಿನಲ್ಲಿಯೇ ತಂದೆತಾಯಿಗಳು ಸತ್ತಿದ್ದರಿಂದ ಇವನ ಕಕ್ಕ **ಅಬೂ ತಾಲೀಬನು** ಇವರನ್ನು ಸಾಕಿದ. ಇವರು ತನ್ನ ೪೦ನೇ ವಯಸ್ಸಿನಲ್ಲಿ ದೇವರ ಬಗ್ಗೆ ತನ್ನದೇ ಆದ ಒಂದು ಸಿದ್ಧಾಂತಕ್ಕೆ ಬಂದರು. ಅಲ್ಲದೆ ಆ ಸಿದ್ಧಾಂತದ ಆಧಾರದ ಮೇಲೆ **ಇಸ್ಲಾಂ** ಧರ್ಮವನ್ನು ಸ್ಥಾಪಿಸಿದರು. ಮೊದಲು ಇವರ ಕೆಲಸಕ್ಕೆ ವಿರೋಧ ಹೆಚ್ಚಾಗಿ ಕ್ರಿ. ಶ. ೬೨೨ರಲ್ಲಿ ಮದೀನಾಕ್ಕೆ

ಓಡಿ ಹೋದರು. ಇಲ್ಲಿಂದಲೇ ಮಹಮ್ಮದೀಯರು **ಹಿಜರೀ** ಶತಕವನ್ನು ಎಣಿಸುವರು. ಮುಂದೆ ಇವರು ಧರ್ಮ ಪ್ರಸಾರಕ್ಕಾಗಿ ಕೆಲವೇಳೆ ಯುದ್ಧ ಮಾಡಿದರು. ಇವರು ತನಗಿಂತಲೂ ಹಿರಿಯಳಾದ ಓರ್ವ ಶ್ರೀಮಂತ ವಿಧವೆಯನ್ನು ಮದುವೆಯಾಗಿದ್ದರು. ಇವರು ಕ್ರಿ. ಶ. ೬೩೨ರಲ್ಲಿ ಮದೀನಾದಲ್ಲಿ [illegible]ರು.

**೨. ಸುಲ್ತಾನ ಮಹಮೂದ** :—ಮಹಮೂದನು ತುರ್ಕಸ್ಥಾನದ ಅರಸ ಸಬಕ್ತಗೀನನ ಮಗ. ತಂದೆಯ ತರುವಾಯ ಕ್ರಿ. ಶ. ೯೯೭ರಲ್ಲಿ ಪಟ್ಟಕ್ಕೆ ಬಂದು ಕ್ರಿ. ಶ. ೧೦೩೦ರ ವರೆಗೂ ಆಳಿದನು. ಇವನು ಮಹಾ ಕ್ರೂರಿಯೂ, ಲೋಭಿಯೂ, ಶೂರನೂ ಆಗಿದ್ದನು. ಇವನು ಹಿಂದುಸ್ಥಾನದ ಮೇಲೆ ಒಟ್ಟು ೧೭ ಸಾರೆ ದಂಡೆತ್ತಿ (ದೌಡು) ಬಂದು, ಅಸನ್ನಿತ ಅತ್ಯಾಚಾರಮಾಡಿ ಅಪಾರ ಸಂಪತ್ತಿಯನ್ನು ದೋಚಿಕೊಂಡು ಹೋದುದು ಇತಿಹಾಸ ಪ್ರಸಿದ್ಧವಿದೆ. ಮಹಮೂದನು ವಿದ್ಯಾಭಿಮಾನಿಯೂ, ಕಲಾಭಿಮಾನಿಯೂ ಆಗಿದ್ದನು. ಆದ್ದರಿಂದಲೇ ಅನೇಕ ಹಿಂದೂ ಕಲಾವಿದರಿಂದ ಗಿಝನಿಯಲ್ಲಿ ಎಷ್ಟೋ ಸುಂದರವಾದ ಕಟ್ಟಡಗಳನ್ನು ಕಟ್ಟಿಸಿದನು. ಇವನು ಕ್ರಿ. ಶ. ೧೦೩೦ರಲ್ಲಿ ಕಾಲವಾದನು.

**೩. ಮಹಮದ್ ಘೋರಿ** :—ಇವನ ಮೊದಲಿನ ಹೆಸರು ಮಹಮ್ಮದ್ ಶಹಾಬುದ್ದೀನ ಕ್ರಿ. ಶ. ೧೧೭೩ರಲ್ಲಿ ಗಿಝನಿಯ ಪಟ್ಟವನ್ನು ವಶಪಡಿಸಿಕೊಂಡು ಸುಲ್ತಾನನಾದನು. ನಂತರ ಕ್ರಿ. ಶ. ೧೧೯೧ರಲ್ಲಿ ಹಿಂದುಸ್ತಾನದ ಮೇಲೆ ಏರಿಬಂದು ಪೇಶಾವರ, ಮುಲ್ತಾನ, ಲಾಹೋರಗಳ ಸುಬೇದಾರರನ್ನು ಸೋಲಿಸಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಇವನು ತರಾಯನದಲ್ಲಿ ಪೃಥ್ವಿರಾಜನಿಂದ ಸೋಲಿಸಲ್ಪಟ್ಟಿದ್ದನು. ಆದರೆ ಕ್ರಿ. ಶ. ೧೧೯೨ರಲ್ಲಿ ಮತ್ತೆ ಪೃಥ್ವಿರಾಜನ ಮೇಲೆ ಯುದ್ಧಕ್ಕೆ ಬಂದನು. ಈ ಸಾರೆ ಮ. ಘೋರಿಗೆ ಜಯಚಂದನ ಸಹಾಯ ಸಿಕ್ಕಿದ್ದರಿಂದ ಪೃಥ್ವಿರಾಜನು ಸೋಲಿಸಲ್ಪಟ್ಟು ಯುದ್ಧದಲ್ಲಿ ಮಡಿದನು. ಮುಂದೆ ಇವನು ಜಯಚಂದನ ಮೇಲೆ ಏರಿಹೋಗಿ ಸುಂದರವಾದ ಕನೋಜ ಪಟ್ಟಣವನ್ನು ಸುಲಿದು ಹಾಳುಗೆಡವಿದನು. ಘೋರಿಯು ಗುಜರಾತ, ರೋಹಿಲಖಂಡ, ಬಿಹಾರ, ಅಯೋಧ್ಯಾಗಳನ್ನು ವಶಪಡಿಸಿಕೊಂಡು ಅಲ್ಲಿ ತನ್ನ ಗುಲಾಮರನ್ನು ಆಡಳಿತಗಾರರನ್ನಾಗಿ ನೇಮಿಸಿದನು. ಇಲ್ಲಿಂದಲೇ ಹಿಂದುಸ್ತಾನದಲ್ಲಿ ಮುಸಲ್ಮಾನರ

ಅರಸೊತ್ತಿಗೆ ಪ್ರಾರಂಭವಾಯಿತು. ಮಹಮುದ್ ಘೋರಿಯು ಶೂರನೂ, ಮಹತ್ವಾಂಕ್ಷಿಯೂ, ಕ್ರೂರಿಯೂ ಆಗಿದ್ದನು. ಇವನು ಖೋಖರರೆಂಬ ಗುಡ್ಡಗಾಡುಜನರ ದಂಗೆಯನ್ನು ಅಡಗಿಸಲು ಹೋದಾಗ ಅಲ್ಲಿ ಕೊಲ್ಲಲ್ಪಟ್ಟನು.

**ಪ್ರಶ್ನೆ :—ಕೆಳಗೆ ಕೊಟ್ಟ ಐತಿಹಾಸಿಕ ಸಂಗತಿಗಳು ತಪ್ಪೋ ಒಪ್ಪೋ ಎಂಬುದನ್ನು ಹೇಳಿರಿ :—**

೧. ಮಹಮ್ಮದ್ ಪೈಗಂಬರನಿಂದ ಇಸ್ಲಾಂ ಧರ್ಮವು ಸ್ಥಾಪಿಸಲ್ಪಟ್ಟಿತು.

೨. ದಾಹರನು ಕ್ರಿ. ಶ. ೭೧೨ರಲ್ಲಿ ಅರಬ ಸರದಾರ ಕಾಶೀಮನನ್ನು ಸೋಲಿಸಿದನು.

೩. ಚಿತ್ತೂರಿನ ಬಾಪ್ಪಾರಾವಳನಿಂದ ಕಾಶೀಮನು ಸೋಲಿಸಲ್ಪಟ್ಟು ಹಿಂತಿರುಗಿದನು.

೪. ಹಿಜರೀ ಶತಕವು ಕ್ರಿ. ಶ. ೫೭೦ರಿಂದ ಪ್ರಾರಂಭವಾಗಿದೆ.

೫. ಸುಲ್ತಾನ ಮಹಮೂದನು ಕ್ರಿ. ಶ. ೧೦೦೧ರಲ್ಲಿ ಪೇಷಾವರದ ಹತ್ತಿರ ಜಯಪಾಲನನ್ನು ಸೋಲಿಸಿದನು.

೬. ಸು. ಮಹಮೂದನು ೪ನೇ ಬಾರಿ ದಾಡು ಮಾಡಿದಾಗ (೧೦೦೮) ಹಿಂದೂ ಅರಸರೆಲ್ಲಾ ಒಟ್ಟುಗೂಡಿ ಎದುರಿಸಿದರು

೭. ಸು. ಮಹಮೂದನು ೧೭ನೇ ಬಾರಿ ಕ್ರಿ. ಶ. ೧೦೨೪ರಲ್ಲಿ ಕಾಠೇವಾಡದ ಸೋಮನಾಥ ದೇವಾಲಯದ ಮೇಲೆ ದಾಳಿಮಾಡಿದನು.

೮. ಸು. ಮಹಮೂದನಿಂದ ಹಿಂದುಸ್ತಾನದಲ್ಲಿ ಮಹಮ್ಮದೀಯರ ಆಳಿಕೆ ಆರಂಭವಾಯಿತು.

೯. ಮಹಮ್ಮದ್ ಘೋರಿಯು ೨ನೇ ಬಾರಿಯ ಯುದ್ಧದಲ್ಲಿ ಪೃಥ್ವೀರಾಜನನ್ನು ಸೋಲಿಸಲು ಜಯಚಂದನು ಮಾಡಿದ ಆತ್ಮಘಾತಕವೇ ಕಾರಣ.

೧೦. ಕುತುಬುದ್ದೀನನು ಮ. ಘೋರಿಯ ಮಗ.

**ಉತ್ತರ :**—(೧) ಹೌದು. (೨) ಅಲ್ಲ. (೩) ಹೌದು. (೪) ಅಲ್ಲ (೫) ಹೌದು. (೬) ಹೌದು. (೭) ಹೌದು. (೮) ಅಲ್ಲ (೯) ಹೌದು. (೧೦) ಅಲ್ಲ.

**ಪ್ರಶ್ನೆ :—ಕೆಳಗೆ ಕೊಟ್ಟವುಗಳ ಬಗ್ಗೆ ಒಂದೇ ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಗುಲಾಮೀ ಮನೆತನವೆಂದು ಹೆಸರು ಬರಲು ಕಾರಣವೇನು?

೨. ಕುತುಬುದ್ದೀನನಿಗೆ ದಿಲ್ಲೀ ಸುಬೇದಾರಿಕೆಯು ಏಕೆ ದೊರೆಯಿತು?

೩. ಸುಲ್ತಾನಾ ರಜಿಯಾಳು ತನ್ನ ಅಣ್ಣ ರುಕ್ನುದ್ದೀನನನ್ನು ತಳ್ಳಿ ತಾನೇ ಏಕೆ ಪಟ್ಟಕ್ಕೆ ಕುಳಿತಳು?

೪. ರಜಿಯಾಳು ಬಂಡುಗಾರರ ಮುಖಂಡ ಅಲ್ತೋನಿಯನ್ನು ಏಕೆ ಮದುವೆಯಾದಳು.

೫. ನಾಸಿರುದ್ದೀನ ಮಹಮೂದನಿಗೆ "ರಾಜಋಷಿ'' ಎಂದು ಏಕೆ ಕರೆಯಬಹುದು?

೬. ಬಲ್ಬನನು ವಿಯೋಗ ದುಃಖದಿಂದ ಏಕೆ ಸತ್ತನು?

೭. ಬಲ್ಬನನಲ್ಲಿ ಕಂಡು ಬಂದ ಗುಣಗಳಾವುವು?

೮. ಚಂಗೀಝ ಖಾನನನ್ನು ನರರಕ್ಕಸನೆಂದು ಕರೆಯುತ್ತಿದ್ದರು ಯಾಕೆ?

೯. ಕುತುಬುದ್ದೀನ ಐಬಕನ ತರುವಾಯ ಪಟ್ಟಕ್ಕೆ ಬಂದ ಆರಾಮನನ್ನು ಅಲ್ತಮಶನು ತಳ್ಳಿ ತಾನೇ ಯಾಕೆ ಪಟ್ಟಕ್ಕೆ ಕುಳಿತನು?

೧೦. ಗುಲಾಮೀ ಮನೆತನದ ಆಳಿಕೆಯು ಕೊನೆಗೊಳ್ಳಲು ಕಾರಣವೇನು?

**ಉತ್ತರಗಳು :**— ೧. ಈ ಮನೆತನದ ಅರಸರೆಲ್ಲರೂ ಮೊದಲು ಗುಲಾಮರಾಗಿದ್ದು, ಮುಂದೆ ತಮ್ಮ ಕರ್ತೃತ್ವಶಕ್ತಿಯಿಂದ ಉಚ್ಚ ಪದವಿಗೇರಿ ಕೊನೆಗೆ ಅರಸರಾದದ್ದರಿಂದ ಇದಕ್ಕೆ ಗುಲಾಮೀ ಮನೆತನವೆಂದು ಹೆಸರು ಬಂದಿದೆ.

೨. ಕುತುಬುದ್ದೀನ ಐಬಕನು ಪ್ರಾಮಾಣಿಕನೂ, ಶೂರನೂ ಆಗಿದ್ದು ತನ್ನನ್ನು ಕೊಂಡುಕೊಂಡಿದ್ದ ಘೋರೀ ಮಹಮ್ಮದನ ಮೆಚ್ಚಿಗೆ ಪಡೆದು ದಿಲ್ಲಿಯ ಸುಬೇದಾರನಾಗಿದ್ದನು.

೩. ಅಲ್ತಮಶನ ಮಗ ರುಕ್ನುದ್ದೀನನು ಅಯೋಗ್ಯನೂ ವಿಲಾಸಿಯೂ ಆಗಿದ್ದುದರಿಂದ ಅವನನ್ನು ಅವನತಂಗಿ ರಜಿಯಾಳು ತಳ್ಳಿ, ತಾನೇ ಪಟ್ಟವೇರಿದಳು.

೪. ರಜಿಯಾಳು ಮಹತ್ವಾಕಾಂಕ್ಷಿಣಿಯೂ, ಶೂರಳೂ, ಚತುರಳೂ ಆಗಿದ್ದು ಹೇಗಾದರೂ ರಾಜ್ಯವನ್ನು ಆಳುವ ಆಶೆಯಿಂದ ತನ್ನ ವಿರುದ್ಧ ಬಂಡೆದ್ದ ಬಂಡುಗಾರರ ಮುಖಂಡ ಅಲ್ತೋನಿಯನ್ನು ಮದುವೆಯಾದಳು.

೫. ನಾಸಿರುದ್ದೀನ ಮಹಮೂದನು ಶೂರನೂ, ಸದಾಚಾರಿಯೂ ಧಾರ್ಮಿಕ ಪ್ರವೃತ್ತಿಯವನೂ ಆಗಿದ್ದನಾದ್ದರಿಂದ ಇವನಿಗೆ "**ರಾಜರ್ಷಿ**" ಎನ್ನಬಹುದು.

೬. ಶೂರ ಮಗನಾದ **ಮುಹಮ್ಮದನು** ಮೊಗಲರೊಡನೆ ಯುದ್ಧದಲ್ಲಿ ಸತ್ತನಾದ್ದರಿಂದ ೮೦ ವರ್ಷದ ವೃದ್ಧ ತಂದೆ ಬಲ್ಬನನು ಪುತ್ರವಿಯೋಗ ದುಃಖದಿಂದ ಸತ್ತನು.

೭, ಬಲ್ಬನನು ಕುರೂಪಿಯಾದರೂ ಶೂರನೂ, ಚತುರನೂ, ವೈಭವ ಪ್ರಿಯನೂ, ವಿದ್ಯಾಭಿಮಾನಿಯೂ ಆಗಿದ್ದನು.

೮. ಹಿಂದುಸ್ತಾನದಲ್ಲಿ ಅಲ್ತಮಶನು ಆಳುತ್ತಿದ್ದಕಾಲದಲ್ಲಿ ಮಧ್ಯ ಏಶಿಯಾದಲ್ಲಿ ಹೆಸರಿಗೆ ಬಂದ ಚಂಗೀಝುಖಾನನೆಂಬ ನರ ಪಿಶಾಚಿಯು ೨೦ ವರ್ಷಗಳಲ್ಲಿ ಸುಮಾರು ೧ ಕೋಟಿ ೨೦ ಲಕ್ಷ ಜನರನ್ನು ಸಂಹರಿಸಿದ್ದನಂತೆ, ಆದ್ದರಿಂದ ಇವನಿಗೆ ನರರಕ್ಕಸ ಎಂದು ಕರೆಯುತ್ತಿದ್ದರು.

೯. ಕುತುಬುದ್ದೀನ ಐಬಕನ ತರುವಾಯ ಪಟ್ಟಕ್ಕೆ ಬಂದ ಆರಾಮನು ಅಯೋಗ್ಯನಿದ್ದುದರಿಂದ ಇವನನ್ನು ಕುತಬುದ್ದೀನನ ಅಳಿಯ ಶಮಶುದ್ದೀನ ಅಲ್ತಮಶನು ತಳ್ಳಿ ತಾನೇ ಪಟ್ಟಕ್ಕೆ ಕುಳಿತನು.

೧೦. ಸುರೂಪಿಯೂ ಸೌಮ್ಯನೂ ಆಗಿದ್ದ ಮುಅಜದ್ದೀನ ಕೈಕುಅಬಾದನು ವಿಲಾಸಿಯೂ, ವ್ಯಸನಿಯೂ ಆಗಿದ್ದುದರಿಂದ ಜಲಾಲುದ್ದೀನ ಖಿಲಜಿ ಎಂಬುವನು ಇವನ ಕೊಲೆಮಾಡಿ ಗುಲಾಮಿ ಮನೆತನವನ್ನು ಕ್ರಿ. ಶ. ೧೨೮೮ ರಲ್ಲಿ ಕೊನೆಗಾಣಿಸಿದನು.

**ಪ್ರಶ್ನೆ :— ಕೆಳಗಿನ ಸಂಗತಿಗಳು ತಪ್ಪಿದ್ದರೆ ತಿದ್ದಿ ಬರೆಯಿರಿ.**

೧. ಅಲ್ಲಾವುದ್ದೀನ ಖಿಲಜಿಯು ಗುಲಾಮಿ ಮನೆತನದ ಕೊನೆಯ ದೊರೆ ಮುಅಜುದ್ದೀನ ಕೈಕುಅಬಾದನನ್ನು ಕೊಂದು ತಾನೇ ಕ್ರಿ. ಶ. ೧೨೯೦ ರಲ್ಲಿ ಪಟ್ಟವೇರಿದ್ದನು.

೨. ಜಲಾಲುದ್ದೀನನು ಖಿಲಜಿಯು ಅಲ್ಲಾವುದ್ದೀನನನ್ನು ಕ್ರಿ. ಶ. ೧೨೯೬ ರಲ್ಲಿ ಮೋಸದಿಂದ ಕೊಲ್ಲಿಸಿದನು.

೩. ಅಲ್ಲಾವುದ್ದೀನನು ಗುಜರಾತದ ಅರಸ ಕರ್ಣರಾಯನನ್ನು ಓಡಿಸಿ ಅವನ ಹೆಂಡತಿ ಕಮಲಾದೇವಿಯನ್ನು ಲಗ್ನವಾದನು.

೪. ಅಲ್ಲಾವುದ್ದೀನನು ಪದ್ಮಿನಿಯನ್ನು ಸೆರೆಹಿಡಿದು ಲಗ್ನವಾದನು.

೫. ಮಲಿಕಾಫರನು ಅಲ್ಲಾವುದ್ದೀನನ ನೆಚ್ಚಿನ ಸೇನಾಪತಿಯಾಗಿ ಉತ್ತರ ಹಿಂದುಸ್ಥಾನದಲ್ಲಿ ಖಿಲಜೀ ಮನೆತನದ ರಾಜ್ಯವನ್ನು ವಿಸ್ತರಿಸಿದನು.

೬. ಅಲ್ಲಾವುದ್ದೀನನ ತರುವಾಯ ಪಟ್ಟಕ್ಕೆ ಬಂದ ಮುಬಾರಕನು ಕ್ರೂರಿಯೂ, ವಿಲಾಸಿಯೂ, ದುರ್ವ್ಯಸನಿಯೂ ಆಗಿದ್ದನು.

೭. ಕ್ರಿ. ಶ. ೧೩೨೧ ರಲ್ಲಿ ಗಯಾಸುದ್ದೀನ ತಘಲಕನನ್ನು ಖುಸ್ರು ಖಾನನು ಕೊಂದು ದಿಲ್ಲಿಯ ಪಟ್ಟ ಏರಿದನು.

೮. ಮಲಿಕಾಫರ ಮತ್ತು ಖುಸ್ರುಖಾನ ಇವರು ಹಿಂದೂ ಧರ್ಮ ದಿಂದ ಮುಸಲ್ಮಾನ ಧರ್ಮಕ್ಕೆ ಮತಾಂತರ ಹೊಂದಿದ್ದರು.

೯. ಮಲಿಕಾಫರನು ಅಲ್ಲಾವುದ್ದೀನನ ಕೊನೆಯ ಮಗನಿಗೆ ಪಟ್ಟ ಗಟ್ಟಿದನು.

೧೦. ಜಲಾಲುದ್ದೀನನಿಗೆ ಜಗತ್ತನ್ನೆಲ್ಲಾ ಜಯಿಸಿ ೨ ನೇ ಅಲೆ ಗ್ಝಾಂಡರ್ ಎನಿಸಿಕೊಳ್ಳುವ ಆಶೆಯಿತ್ತು.

**ಉತ್ತರ**:— ೧. ಜಲಾಲುದ್ದೀನನೇ ಖಿಲಜೀ ಮನೆತನದ ಮೊದ ಲನೇ ದೊರೆ. ಇವನು ಮುಅಜುದ್ದೀನನನ್ನು ಕೊಂದು ತಾನೇ ಕ್ರಿ. ಶ. ೧೨೯೦ ರಲ್ಲಿ ಪಟ್ಟವೇರಿದನು.

೨. ಅಲ್ಲಾವುದ್ದೀನನು ತನ್ನ ಚಿಕ್ಕಪ್ಪ (ಕಕ್ಕ) ಜಲಾಲುದ್ದೀನನನ್ನು ಮೋಸದಿಂದ ಕೊಲ್ಲಿಸಿದನು.

೩. ಹೌದು.

೪. ಪದ್ಮಿನಿಯು ಅಲ್ಲಾವುದ್ದೀನನಿಗೆ ಸೆರೆಸಿಗದೆ “ ಜೋಹಾರ್ ” ಮಾಡಿ ಪ್ರಾಣಬಿಟ್ಟಳು.

೫. ಮಲಿಕಾಫರನು ಅಲ್ಲಾವುದ್ದೀನನ ರಾಜ್ಯವನ್ನು ದಕ್ಷಿಣ ಹಿಂದು ಸ್ಥಾನದಲ್ಲಿ ಕನ್ಯಾಕುಮಾರಿಯವರೆಗೆ ವಿಸ್ತರಿಸಿದನು.

೬. ಹೌದು.

೭. ಹೌದು.

೮. ಹೌದು.

೯. ಹೌದು.

೧೦. ಅಲ್ಲಾವುದ್ದೀನನಿಗೆ ಜಗತ್ತನ್ನೆಲ್ಲಾ ಜಯಿಸಬೇಕೆಂಬ ಆಶೆಯಿತ್ತು.

**ಪ್ರಶ್ನೆ :— ಕೆಳಗೆ ಕೊಟ್ಟವರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.**

(೧) ಅಲ್ಲಾವುದ್ದೀನ ಖಿಲಜಿ (೨) ಜಲಾಲುದ್ದೀನ (೩) ಮಲಿಕಾಫರ

**ಉತ್ತರ:—** ೧. ಅಲ್ಲಾವುದ್ದೀನ ಖಿಲಜಿಯು ಮಹಾಕಪಟಿಯೂ, ನೀತಿ ಬಾಹಿರನೂ, ಶೂರನೂ, ಮಹತ್ವಾಕಾಂಕ್ಷಿಯುಳ್ಳವನೂ ಆಗಿದ್ದನು. ಇವನು ತನ್ನ ಕಕ್ಕನನ್ನು ಮೋಸದಿಂದ ಕೊಲ್ಲಿಸಿ ಕ್ರಿ. ಶ. ೧೨೯೬ ರಲ್ಲಿ ತಾನೇ ದಿಲ್ಲಿಯ ಪಟ್ಟವೇರಿ ಕ್ರಿ. ಶ. ೧೩೧೫ ರವರೆಗೆ ರಾಜ್ಯಭಾರ ಮಾಡಿ ಮರಣವಾದನು.

೨. ಜಲಾಲುದ್ದೀನ ಖಿಲಜಿ ಈತನೇ ಖಿಲಜೀಮನೆತನದ ಮೂಲ ಪುರುಷ. ಇವನು ಮೊದಲು ಗುಲಾಮಿ ಮನೆತನದ ಅರಸರ ಸರದಾರನಿದ್ದನು. ಇವನು ಗುಲಾಮಿ ಮನೆತನದ ಮುಅಜುದ್ದೀನ ಕೈಕುಅಬಾದನನ್ನು ಕೊಂದು ಕ್ರಿ. ಶ. ೧೨೯೦ ರಲ್ಲಿ ದಿಲ್ಲಿಯ ಪಟ್ಟವೇರಿ ಕ್ರಿ. ಶ. ೧೨೯೬ ರವರೆಗೂ ರಾಜ್ಯಭಾರ ಮಾಡಿದನು. ಇವನ ಅಣ್ಣನ ಮಗ ಅಲ್ಲಾವುದ್ದೀನನು ಇವನನ್ನು ಮೊಸದಿಂದ ಕೊಲ್ಲಿಸಿದನು.

೩. ಮಲಿಕಾಫರ ಹಿಂದೂ ಧರ್ಮದಿಂದ ಮುಸಲ್ಮಾನ ಧರ್ಮಕ್ಕೆ ಮತಾಂತರ ಹೊಂದಿದ್ದನು. ಶೂರನೂ, ಪ್ರಾಮಾಣಿಕನೂ ಆಗಿದ್ದುದರಿಂದ ಇವನನ್ನು ಅಲ್ಲಾವುದ್ದೀನನು ದೊಡ್ಡ ಸೈನ್ಯ ದೊಡನೆ ದಕ್ಷಿಣ ಹಿಂದುಸ್ತಾನದ ಮೇಲೆ ದಂಡೆತ್ತಿ ಕಳಿಸಿದ್ದನು. ಅಲ್ಲಾವುದ್ದೀನನ ತರುವಾಯ ಅವನ ಚಿಕ್ಕ ಮಗನನ್ನು ಪಟ್ಟಕ್ಕೆ ಕೂಡಿಸಿ ತಾನೇ ಮಂತ್ರಿಯಾದನು. ಆದರೆ ಕೆಲ ಕಾಲದಲ್ಲಿಯೇ ಇವನ ಕೊಲೆಯಾಯಿತು.

**ಮಹಮುದ್ ಬಿನ್ ತಘಲಕನಿಗೆ ಹುಚ್ಚುದೊರೆ ಎನ್ನಲು ಕಾರಣವೇನು ?**

ತಘಲಖ ಮನೆತನದ ೨ ನೇ ಅರಸನಾದ ಈತನು ವಿದ್ಯಾವಂತನಾದರೂ ಅವ್ಯವಹಾರಿಕ ವಿಷಯಗಳಲ್ಲಿ ತಲೆ ಹಾಕುತ್ತಿದ್ದನು. ಅಲ್ಲದೆ ಅದನ್ನು ಹಟತ್ತಾಗಿ ಮಾಡಿಯೇ ಬಿಡುತ್ತಿದ್ದನು. ಇದರಿಂದ ಪ್ರಜೆಗಳಿಗೆ ಬಹಳ ತೊಂದರೆಯಾಯಿತು. ಉದಾ: ಇವನು ಹಿಮಾಲಯವನ್ನು ದಾಟಿ

ಹೋಗಿ ಚೀನ ದೇಶವನ್ನು ಗೆಲ್ಲಲು ೧ ಲಕ್ಷ ಸೈನಿಕರನ್ನು ಕಳಿಸಿದನು. ಆದ
ಎಷ್ಟೋ ಸೈನಿಕರು ಹಿಮಾಲಯವನ್ನು ದಾಟುವಾಗಲೇ ಅಲ್ಲಿಯ ಚ
ಯಿಂದ ಮಡಿದರು. ಮುಂದೆ ಚೀನದೊಡನೆ ಯುದ್ಧದಲ್ಲಿ ಸೋತು ಕೇವ
೧೦ ಜನ ಸೈನಿಕರು ಹಿಂತಿರುಗಿದರಂತೆ. ಇವನು ರಾಜಧಾನಿಯನ್ನು
ಸುರಕ್ಷಿತವಿಡಲು ರಾಜ್ಯದ ಮಧ್ಯ ಪ್ರದೇಶಕ್ಕೆ ಬದಲಾಯಿಸುವುದು ಒಳ್ಳೆಯ
ದೆಂದು ತಿಳಿದು ದಿಲ್ಲಿಯಿಂದ ದೇವಗಿರಿಗೆ ರಾಜಧಾನಿಯನ್ನು ಬದಲಾಯಿಸಲೂ
ಮತ್ತು ದಿಲ್ಲಿಯ ಪ್ರಜೆಗಳೆಲ್ಲರೂ ಅಲ್ಲಿಗೆ ಹೊರಡಲೂ ಆಜ್ಞೆಯಿತ್ತನು.
ಇದರಿಂದ ಎಷ್ಟೋ ಜನರ ಪ್ರಾಣಹಾನಿಯೂ, ಆಸ್ತಿಹಾನಿಯೂ ಆಯಿತು.
ಮುಂದೆ ಕೆಲದಿನಗಳಲ್ಲಿಯೇ ಉತ್ತರ ಹಿಂದುಸ್ತಾನದಲ್ಲಿ ಬಂಡಾಯಗಳೇ
ಳಲು ರಾಜಧಾನಿಯನ್ನು ಮತ್ತೆ ದಿಲ್ಲಿಗೆ ಬದಲಾಯಿಸಿದನು. ಹಿಂದುಸ್ತಾನದ
ಮೇಲೆ ಆಗಿಂದಾಗ್ಯೆ ದಾಳಿ ಮಾಡುತ್ತಿದ್ದ ಮೊಗಲರನ್ನು ಎದುರಿಸದೆ, ಅವ
ರಿಗೆ ಅಪಾರ ಹಣ ಕೊಟ್ಟು ಕಳಿಸುತ್ತಿದ್ದನು ಇದರಿಂದ ಖಜಾನೆ ಖಾಲಿ
ಯಾಯಿತು. ತೆರಿಗೆಯನ್ನು ಹೆಚ್ಚಿಸಿದನು ದೇಶದಲ್ಲೆಲ್ಲಾ ಬರಗಾಲ ಬಿದ್ದಿತು.
ಹಣದ ಕೊರತೆ ನೀಗಿಸಲು ಚರ್ಮದ ನಾಣ್ಯಗಳನ್ನು ಬಳಿಕೆಯಲ್ಲಿ ತಂದನು.
ಇದರಿಂದ ಅನೇಕ ಕಳ್ಳ ನಾಣ್ಯಗಳು ಹುಟ್ಟಿಕೊಂಡು ಹಣದ ಪತ್ತೇ
ಉಳಿಯದಾಯಿತು. ಆದ್ದರಿಂದ ಇವನು ವಿದ್ಯಾವಂತನೂ, ಸದಾಚಾರಿಯೂ
ಆಗಿದ್ದರೂ ಅವ್ಯವಹಾರಿಕ ವಿಚಾರಗಳ ಕಾರ್ಯಾಚರಣೆಯಿಂದ ಹುಚ್ಚು
ದೊರೆಯೆಂದು ಕರೆಯಿಸಿಕೊಂಡನು.

**ಪ್ರಶ್ನೆ** :—ಕೆಳಗೆ ಬಿಟ್ಟ ಜಾಗೆಯಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ.

೧. ಗಯಾಸುದ್ದೀನನು ......... ನನ್ನು ಕೊಂದು ಕಿ. ಶ. ೧೩೨೧
ರಲ್ಲಿ ದಿಲ್ಲೀ ಪಟ್ಟವೇರಿದನು.

೨ ತಘಲಕ ಮನೆತನದ ಮೊದಲನೇ ಅರಸು .........

೩. ಮುಹಮ್ಮದ್ ತಘಲಕನ ಮೊದಲನೇ ಹೆಸರು ................
ಎಂದಿತ್ತು.

೪. ಮುಹಮ್ಮದ್ ತಘಲಕನ ಕಕ್ಕನ ಮಗನಾದ................ನು
ದಿಲ್ಲಿಯ ಪಟ್ಟಕ್ಕೆ ಬಂದು ಕ್ರಿ. ಶ. .............ರಿಂದ. ...........ರರವರೆಗೆ
ಆಳಿಕೆ ನಡೆಸಿದನು.

೫. ಫಿರೋಜಷಾಹ ತಘಲಕನು ಸತಲಜ ನದಿಗೆ ...............
ತೆಗೆಯಿಸಿ ಒಕ್ಕಲುತನಕೆ............ಇತ್ತನು.

೭. ತ್ರೈಮೂರಲಂಗನು ............ ಯೂ ಮತ್ತು ...ಆಗಿದ್ದನು.

೭. ೧೫ ನೇ ಶತಮಾನದಲ್ಲಿ ಜಾತೀಐಕ್ಯತೆಗಾಗಿ ಹೆಣಗಿದ ಮೂವರು ಮಹಾಪುರುಷರೆಂದರೆ ೧ ......................, ೨ .............. ...................., ೩ ................................ ರುಗಳು.

೮. ಇಸ್ಲಾಂ ಧರ್ಮತತ್ವದಲ್ಲಿ......... ಒಬ್ಬನೇ ................ ಪೂಜೆ ಮಾಡಕೂಡದು. ದೇವರು ಸರ್ವ–ಶಕ್ತ .......... ಅನ್ಯ ದೇವರಿಗೆ ............... ಬಾರದು. ಎಂಬುವು ಮುಖ್ಯ ತತ್ವಗಳು........ ಇದರ ಧರ್ಮಗ್ರಂಥ.

೯. ನಿಜ ಮುಸಲ್ಮಾನರು............. ಪೇಯಿ, ......... ಮತ್ತು ............. ದಿಂದ ದೂರವಿರಬೇಕು. ಒಬ್ಬ ಗಂಡಸಿಗೆ ನಾಲ್ವರಿಗಿಂತ ಹೆಚ್ಚು ............ ಇರಕೂಡದು ಎಂಬ ನಿಬಂಧನೆಗಳಿವೆ.

೧೦. ಸಿಂಹಳದ ಅರಸರು ಕ್ರಿ. ಶ. ೭೧೧ ರಲ್ಲಿ ದಮಸ್ಕಸದ....... ............ನಿಗೆ ಕಳಿಸಿದ ಹೇರಳ ಕಾಣಿಕೆಯ ಹಡಗು ದಾರಿ ತಪ್ಪಿ ............... ಬಂದರಕ್ಕೆ ತಲುಪಿತು.

**ಉತ್ತರ** :— (೧) ಖುಸ್ರುಖಾನ (೨) ಗಯಾಸುದ್ದೀನ ತಘಲಕ. (೩) ಉಲುಘಖಾನ. (೪) ಫಿರೋಝ ತಘಲಕ ೧೩೫೧–೧೩೮೮ ೫) ಆಣೆಕಟ್ಟು, ಪ್ರೋತ್ಸಾಹ. (೬) ಮಹಾಕ್ರೂರಿಯೂ, ರಾಕ್ಷಸವೃತ್ತಿಯವನೂ. (೭) ರಾಮಾನಂದರು, ಕಬೀರದಾಸ್, ಗುರುನಾನಕ (೮) ದೇವರು, ವಿಗ್ರಹ, ನಿರಾಕಾರನು, ತಲೆಬಾಗ, ಕುರಾನ. (೯) ಮಾದಕ, ಜೂಜು, ವ್ಯಭಿಚಾರ, ಹೆಂಡಂದಿರು. (೧೦) ಖಲೀಫನಿಗೆ, ಸಿಂಧದ ದೇವಲ.

**ವಿಜಯನಗರ ಸಾಮ್ರಾಜ್ಯವನ್ನು ಯಾರು ಮತ್ತು ಏಕೆ ಸ್ಥಾಪಿಸಿದರೆಂಬುದನ್ನು ಸಂಕ್ಷಿಪ್ತವಾಗಿ ಬರೆಯಿರಿ ?**

ಉತ್ತರ ಹಿಂದುಸ್ತಾನದಲ್ಲಿ ಖಿಲ್ಜೀ ಮನೆತನದ ಅಲ್ಲಾವುದ್ದೀನನು ಆಳಿಕೆ ನಡೆಯಿಸಿದಾಗ ಅವನ ಸೇನಾಪತಿ ಮಲಿಕಾಫರನು ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದು ಕ್ರಿ. ಶ. ೧೩೦೬ರಲ್ಲಿ ತನ್ನ ಅಧಿಕಾರವನ್ನು ದ್ವಾರಸಮುದ್ರದ ವರೆಗೂ ಬೆಳೆಸಿದನು. ಈ ದಾಳಿಯಲ್ಲಿ ದಕ್ಷಿಣದ ಹಿಂದೂ ರಾಜ್ಯಗಳಾದ ೧. ಯಾದವಗಿರಿ, ೨. ಕಾಕತೀಯರ ವರಂಗಲ್ಲ, ೩. ಹೊಯ್ಸಳರ

ದ್ವಾರಸಮುದ್ರ, ೪. ಪಾಂಡ್ಯರ ಮಧುರೆ ಈ ರಾಜ್ಯಗಳೆಲ್ಲಾ ತುಳಿಯಲ್ಪ ಟ್ಟವು. ಅನೇಕ ಹಿಂದೂಗಳ ಕೊಲೆ ಸುಲಿಗೆ ಮತ್ತು ಮಾನಹಾನಿಯು ಯಿತು. ಮಲಿಕಾಫರನ ಈ ದಾಳಿಯಿಂದ ದಕ್ಷಿಣದ ಈ ಜನರಿಗೆ ತಮ ಧರ್ಮ ಹಾಗು ಆಸ್ತಿ ರಕ್ಷಣೆಗಾಗಿ ದಕ್ಷಿಣದಲ್ಲಿ ಪ್ರಬಲ ಹಿಂದೂ ರಾಜ್ಯ ಸ್ಥಾಪಿಸುವದು ಹಿಂದೂಗಳಿಗೆ ಅತಿ ಅವಶ್ಯವೆನಿಸಿತು. ಈಬಗ್ಗೆ ಹೆಚ್ಚು ಶ್ರಮ ವಹಿಸಿ ಮಹಾನುಭಾವರಾದ ಶ್ರೀವಿದ್ಯಾರಣ್ಯರು ಸಂಗಮ ವಂಶದ ಹುಕ್ಕ ಬುಕ್ಕರನ್ನು ಹುರಿದುಂಬಿಸಿ ತುಂಗಭದ್ರಾ ನದಿಯ ತೀರದ **ಹಂಪೆ** ( ಪಂಪಾ ಕ್ಷೇತ್ರ ) ಯಲ್ಲಿ ಹೊಸ ರಾಜ್ಯವನ್ನು ಸ್ಥಾಪಿಸಿ ಇದಕ್ಕೆ ವಿಜಯನಗರ ವೆಂದು ಹೆಸರಿಟ್ಟರು. ಹುಕ್ಕನೇ ಹರಿಹರರಾಯನೆಂಬ ಹೆಸರಿನಿಂದ ಕ್ರಿ. ಶ ೧೩೩೬ ರಲ್ಲಿ ಈ ರಾಜ್ಯದ ಮೊದಲನೇ ಅರಸನಾದನು. ಶ್ರಿಂಗೇರಿ ಮಠದ **ಶ್ರೀ ವಿದ್ಯಾರಣ್ಯರು** ಈ ರಾಜ್ಯವನ್ನು ಸ್ಥಾಪಿಸಿದ್ದರಿಂದಲೇ **"ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯರು"** ಎಂಬ ಬಿರುದು ಬಂದಿದೆ.

## ಕೆಳಗೆ ಕೊಟ್ಟವರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

೧. ಒಂದನೇ ಹರಿಹರರಾಯ. ೨. ಬುಕ್ಕರಾಯ. ೩. ಎರಡನೇ ಹರಿಹರ ೪. ೨ ನೇ ದೇವರಾಯ. ೫. ಸ್ವಾಮಿ ವಿದ್ಯಾರಣ್ಯ ೬. ಲಕ್ಕಣ್ಣ ೭. ಜಕ್ಕಣಾರ್ಯ. ೮. ನಿಕೋಲೋಕೌಂಟೆ. ೯. ಅಬ್ದುಲ್ ರಜಾಕ್. ೧೦. ಸಾಳವ ನರಸಿಂಹ. ೧೧. ನರಸ ರಾಜ. ೧೨. ಕೃಷ್ಣದೇವರಾಯ. ೧೩. ಶ್ರೀ ವ್ಯಾಸಯೋಗಿಗಳು. ೧೪. ರಾಮರಾಯ. ೧೫. ವೆಂಕಟಪತಿ ದೇವರಾಯ.

### ೧. ಒಂದನೇ ಹರಿಹರ ರಾಯ. ( ಕ್ರಿ. ಶ. ೧೩೩೬ ರಿಂದ ೧೩೫೩ )

ಇವನೇ ವಿಜಯ ನಗರ ಸಾಮ್ರಾಜ್ಯದ ಮೊದಲನೇ ಅರಸು. ತನ್ನ ನಾಲ್ವರು ತಮ್ಮಂದಿರ ಸಹಾಯದಿಂದ ರಾಜ್ಯವಾಳಿದನು. ಇವನ ಕಾಲದಲ್ಲಿ ವಿಜಯ ನಗರ ಸಾಮ್ರಾಜ್ಯವು ಮಲಪ್ರಭಾ ನದಿಯಿಂದ ಕಾವೇರಿಯ ವರೆಗೂ, ಬನವಾಸಿಯಿಂದ ನೆಲ್ಲೂರಿನವರೆಗೂ ಹಬ್ಬಿತ್ತು. ಇವನೇ **ಶ್ರೀ. ವಿರುಪಾಕ್ಷ**ದೇವರ ಗುಡಿಯನ್ನು ಕಟ್ಟಿಸಿದನು. ಶ್ರೀ ವಿದ್ಯಾರಣ್ಯರೇ ರಾಜಗುರುಗಳೂ ಮಂತ್ರಿಗಳೂ ಆಗಿದ್ದರು. ಇವನು ಶೂರನೂ, ಧರ್ಮಾಭಿ ಮಾನಿಯೂ ಆಗಿದ್ದನು. ತನ್ನ ರಾಜ್ಯದ ಭೂಮಿಯ ಹುಟ್ಟುವಳಿಯನ್ನು

.ರ ಭಾಗಮಾಡಿ ಹಂಚುತ್ತಿದ್ದನು. ಇವನು ಕ್ರಿ. ಶ. ೧೩೫೩ ರಲ್ಲಿ ಕಾಲವಾದನು.

೨. **ಬುಕ್ಕರಾಯ** ( ಕ್ರಿ. ಶ. ೧೩೫೩ ರಿಂದ ೧೩೭೭ )

ಇವನು ಹರಿಹರ ರಾಯನ ತಮ್ಮ. ಇವನಿಗೂ ವಿದ್ಯಾರಣ್ಯರೇ ಮಂತ್ರಿಗಳಾಗಿದ್ದರು. ಇವನು ಶೂರನೂ, ವಿದ್ಯಾಭಿಮಾನಿಯೂ ಆಗಿದ್ದನು. ಇವನ ಕಾಲದಲ್ಲಿ **ಬಸವಯ್ಯ**ನೆಂಬ ಲಿಂಗಾಯತ ದಂಡನಾಯಕನೂ, **ಇರುಗ**ನೆಂಬ ಜೈನ ದಳಪತಿಯೂ ಇದ್ದರು. ಇದೇ ಕಾಲದಲ್ಲಿ ವಿದ್ಯಾರಣ್ಯರೂ, ಸಾಯಣಾಚಾರ್ಯರೂ, ವೇದಭಾಷ್ಯ, ಸರ್ವದರ್ಶನ ಸಂಗ್ರಹ ಪಂಚದಶಿ ಎಂಬ ಗ್ರಂಥಗಳನ್ನು ಬರೆದರು. ಇವನು ಕ್ರಿ. ಶ. ೧೩೭೭ ರಲ್ಲಿ ಮರಣ ಹೊಂದಿದನು.

## ೩. ಎರಡನೇ ಹರಿಹರ ( ಕಿ. ಶ. ೧೩೭೭–೧೪೦೪ )

ಇವನು ಬುಕ್ಕರಾಯನ ಮಗ. ತನ್ನ ತಂದೆಯ ತರುವಾಯ ಕಿ. ಶ. ೧೩೭೭ ರಲ್ಲಿ ಪಟ್ಟಕ್ಕೆ ಬಂದು **ಪೂರ್ವ–ಪಶ್ಚಿಮ–ದಕ್ಷಿಣ ಸಮುದ್ರಾಧೀಶ್ವರನೆಂಬ** ಬಿರುದು ಧರಿಸಿ ರಾಜ್ಯವಾಳಿದನು. ಇವನ ಕಾಲದಲ್ಲಿ ಮುಪ್ಪಿನ ವಿದ್ಯಾರಣ್ಯರು ಸಾಯಣಾಚಾರ್ಯರಿಗೆ ಮಂತ್ರಿಪದ ಬಿಟ್ಟು ಕೊಟ್ಟರು. ಇವನು ಅನೇಕ ಕೆರೆ ಕಾಲುವೆಗಳನ್ನು ತೆಗೆಯಿಸಿ ದೇಶವನ್ನು ಸಮೃದ್ಧಿಗೊಳಿಸಿದನು. ಆದ್ದರಿಂದಲೇ ವ್ಯಾಪಾರ ಬೆಳೆದು ವಿಜಯನಗರದ ವೈಭವ ಹೆಚ್ಚಿತು. ಹರಿಹರನು ಕ್ರಿ. ಶ. ೧೪೦೪ ರಲ್ಲಿ ಕಾಲವಾದನು.

**೪. ಎರಡನೇ ದೇವರಾಯ** ( ಕ್ರಿ. ಶ ೧೪೧೯—೧೪೪೬ ): ಇವನು ಶೂರನೂ, ವಿದ್ಯಾಭಿಮಾನಿಯೂ, ಪರಧರ್ಮ ಸಹಿಷ್ಣುಳುವೂ ಆಗಿದ್ದನು. ಇವನು ಬಹಮನೀ ರಾಜ್ಯದ ಫಿರೋಜಷಾಹನನ್ನು ಸೋಲಿಸಿ ವಿಜಯನಗರದ ಖ್ಯಾತಿಯನ್ನು ಹೆಚ್ಚಿಸಿದನು- ಇವನ ಕಾಲದಲ್ಲಿ ವಿಜಯನಗರವು ವೈಭವದ ಶಿಖರಕ್ಕೇರಿತ್ತು. ಆದ್ದರಿಂದಲೇ ಈ ಕಾಲದಲ್ಲಿ ಬಂದಿದ್ದ ಪ್ರವಾಸಿಗಳಾದ ಇಟಲಿಯ ನಿಕೋಲ ಕೌಂಟ ಮತ್ತು ಅಬ್ದುಲ್ ರಝಾಕರು ಈ ರಾಜ್ಯದ ವೈಭವವನ್ನು ಕಂಡು ಬೆರಗಾಗಿ ಬಣ್ಣಿಸಿರುವರು. ಇವನ ಮುಖ್ಯ ಮಂತ್ರಿ ಲಕ್ಕಣ್ಣ ದಂಡೇಶನೂ, ದಂಡನಾಯಕ ಜಕ್ಕಣಾರ್ಯನೂ ವೀರಶೈವರಿದ್ದು ಇವರು ಧರ್ಮಗ್ರಂಥಗಳನ್ನು ಬರೆದಿರುವರು. ಕನ್ನಡ ಕವಿ ಪುಂಗವರೆನಿಸಿದ, ಕುಮಾರವ್ಯಾಸ ಚಾಮರಸರು ಇವನ ಕಾಲದವರೇ.

೫. **ಸ್ವಾಮಿ ವಿದ್ಯಾರಣ್ಯರು** :— ಇವರ ಮೊದಲಿನ ಹೆಸರು **ಮಾಧವಾಚಾರ್ಯರು** ಎಂದಿತ್ತು. ಇವರು ಸಂಗಮ ವಂಶದ ಕುಲಪುರೋಹಿತರೂ, ಮಂತ್ರಿಗಳೂ ಆಗಿದ್ದರು. ಮಾಧವಾಚಾರ್ಯರು ಶ್ರಿಂಗೇರಿ ಜಗದ್ಗುರುಗಳಾದ **ಭಾರತೀತೀರ್ಥ** (ಮಾಧವಾಚಾರ್ಯರ ತಮ್ಮ)ರಿಂದ ಸನ್ಯಾಶಾಶ್ರಮವನ್ನು ಸ್ವೀಕರಿಸಿ **ವಿದ್ಯಾರಣ್ಯರೆಂಬ** ನಾಮಧಾರಣ ಮಾಡಿದರು. ಇವರೇ ವಿಜಯ ನಗರದ ಕರ್ನಾಟಕ ಸಿಂಹಾಸನವನ್ನು ಸ್ಥಾಪಿಸಿದರು.

೬. **ಲಕ್ಕಣ್ಣ** :—ಇವನು ವೀರಶೈವನಿದ್ದು ೨ನೇ ದೇವರಾಯನ ಮಂತ್ರಿಯಾಗಿದ್ದನು. ಇವನು ವೀರಶೈವಮತದ ಧರ್ಮಗ್ರಂಥವನ್ನು ರಚಿಸಿರುವನು.

೭. **ಚಕ್ಕಣಾರ್ಯ** :—ಇವರು ಪ್ರೌಢ ದೇವರಾಯನ ಕಾಲದಲ್ಲಿದ್ದ ಪ್ರಸಿದ್ಧ ಲಿಂಗವಂತ ಕವಿಗಳು.

೮. **ನಿಕೋಲೆ ಕೌಂಟ್** :—ಈತನು ಇಟಲಿಯ ಪ್ರವಾಸಿ. ಇವನು ೨ನೇ ದೇವರಾಯನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿ ಅದರ ವೈಭವವನ್ನು ಕೊಂಡಾಡಿ ಬರೆದಿರುವನು.

೯. **ಅಬ್ದುಲ್ ರಝಾಕ್** :—ಇವನು ತೈಮೂರನ ಮಗನಿಂದ ಕಾಲಿಕತದ ಸಾಮೋರಿನನಕಡೆ ಕಳುಹಿಸಲ್ಪಟ್ಟ ರಾಯಭಾರಿ ಇವನಾದರೂ ಪ್ರೌಢ ದೇವರಾಯನ ಕಾಲದಲ್ಲಿ ವಿಜಯ ನಗರವನ್ನು ಸಂದರ್ಶಿಸಿ "ವಿಜಯ ನಗರವನ್ನು ಹೋಲುವಂತಹ ನಗರವು ಜಗತ್ತಿನಲ್ಲಿ ಬೇರೆ ಇಲ್ಲ!" ಎಂದು ಮುಂತಾಗಿ ಬಣ್ಣಿಸಿರುವನು.

೧೦. **ಸಾಳುವ ನರಸಿಂಹ** (ಕ್ರಿ. ಶ. ೧೪೭೮–೧೪೯೩):–ಚಂದ್ರಗಿರಿಯ ಸಾಳುವ ನರಸಿಂಹನು ಸಂಗಮ ವಂಶದ ವಿರೂಪಾಕ್ಷನನ್ನು ತಳ್ಳಿ, ವಿಜಯನಗರ ಸಿಂಹಾಸನವನ್ನು ಆಕ್ರಮಿಸಿದನು. ಇವನು ತಮಿಳುನಾಡನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದನು. ಇವನು ಮುಸಲ್ಮಾನರೊಂದಿಗೆ ಅನೇಕ ಸಾರಿ ಯುದ್ಧ ಮಾಡಬೇಕಾಯಿತು.

೧೧. **ನರಸರಾಜ** :–ಇವನು ತುಳುವಂಶದವನು. ಸಾಳುವವಂಶದ ೨ನೇ ನರಸಿಂಹನನ್ನು ಕೊಂದು ವಿಜಯ ಪಟ್ಟಣವನ್ನು ಕ್ರಿ. ಶ. ೧೪೯೩ರಲ್ಲಿ ಹಿಡಿದುಕೊಂಡನು. ಇವನು ಅನೇಕ ಬಾರಿ ಮುಸಲ್ಮಾನರೊಡನೆ ಕಾದಿ

ದನು. ಇವನೂ ಇವನ ಮಗ ವೀರನರಸಿಂಹನೂ ಕ್ರಿ. ಶ. ೧೫೦೯ರ ವರೆಗೆ ಆಳಿಕೆ ನಡೆಯಿಸಿದರು.

**೧೨. ಕೃಷ್ಣದೇವರಾಯ**:—ಇವನು ತುಳುವವಂಶದವನು ಕ್ರಿ. ಶ. ೧೫೦೯ರಲ್ಲಿ ವಿಜಯನಗರದ ಪಟ್ಟವನ್ನು ಏರಿದನು. ಇವನು ವಿದ್ಯಾಭಿಮಾನಿಯೂ ಶೂರನೂ ಆಗಿದ್ದನು. ಇವನ ಕಾಲದಲ್ಲಿ ಉತ್ತರ ಭಾರತವನ್ನು ಬರೆದ **ತಿಮ್ಮಣ್ಣಕವಿ,** ಭಕ್ತಿಪದಗೀತೆಗಳನ್ನು ರಚಿಸಿದ. **ಪುರಂದರದಾಸ** ಪ್ರಸಿದ್ಧ ವಿನೋದಕಾರ **ತೆನ್ನಾಲ ರಾಮಕೃಷ್ಣ** ಮುಂತಾದ ಕವಿಗಳು ಆಗಿ ಹೋದರು. ಇವನ ಆಳಿಕೆಯು ಬಹಳ ಭದ್ರವಾಗಿದ್ದಿತು. ಇವನು ಓಡಿಸಾ ಪ್ರಾಂತವನ್ನು ಕ್ರಿ. ಶ. ೧೫೧೫ರಲ್ಲಿ ವಶಮಾಡಿಕೊಂಡನು. ವಿಜಾಪುರದ ಆದಿಲ್‌ಷಾಹನನ್ನು ಸೋಲಿಸಿ ಮುದಗಲ್, ರಾಯಚೂರು ಪರಗಣೆಗಳನ್ನು ವಶಪಡಿಸಿಕೊಂಡನು. ಇವನು ಕ್ರಿ. ಶ. ೧೫೨೯ರಲ್ಲಿ ಮರಣ ಹೊಂದಿದನು.

**೧೩. ಶ್ರೀವ್ಯಾಸಯೋಗಿಗಳು**:—ಸಂಗಮ ವಂಶಕ್ಕೆ ವಿದ್ಯಾರಣ್ಯರಿದ್ದಂತೆ ತುಳುವಂಶದ ಕೃಷ್ಣದೇವರಾಯನಿಗೆ ಮಾಧ್ವಮತದ ಶ್ರೀವ್ಯಾಸಯೋಗಿಗಳು ರಾಜಗುರುಗಳಾಗಿದ್ದರು. ಪ್ರಸಿದ್ಧ ಪುರಂದರದಾಸ ಮತ್ತು ಕನಕದಾಸರು ಇವರ ಭಕ್ತರು.

**೧೪. ರಾಮರಾಯ :**—ಇವನು ಕೃಷ್ಣದೇವರಾಯನ ಅಳಿಯ. ತುಳುವಂಶದ ಕೊನೆಯ ಅರಸ ಸದಾಶಿವರಾಯನನ್ನು ಮೂಲೆಗೆ ಕೂಡಿಸಿ ತಾನೇ ಸರ್ವಾಧಿಕಾರಿಯಾಗಿದ್ದನು. ಇವನು ಅಧಿಕಾರ ಮದದಿಂದ ಶಾಹೀ ಮನೆತನಗಳ ಒಳ ಜಗಳಗಳಲ್ಲಿ ಕೈಹಾಕಹತ್ತಿದನು. ಇದನ್ನು ಸಹಿಸದೆ ಮಹಮ್ಮದೀಯ ಅರಸರೆಲ್ಲಾ ಒಂದಾಗಿ ಕ್ರಿ. ಶ. ೧೫೬೫ರಲ್ಲಿ **ರಾಕ್ಷಸ ತಂಗಡಿಯ** ಬೈಲಿನಲ್ಲಿ ರಾಮರಾಯನನ್ನು ಎದುರಿಸಿದರು. ಮೊದಲು ದೊರೆತ ವಿಜಯದಿಂದ ವಿಜಯನಗರದ ಸೈನಿಕರು ಮೈಮರೆಯಲು ಮಹಮ್ಮದೀಯರು ಒಮ್ಮೆಗೇ ಏರಿಬಂದು ರಾಮರಾಯನನ್ನು ಸೆರೆಹಿಡಿದು ಕೊಂದರು. ವಿಜಯನಗರ ಸಾಮ್ರಾಜ್ಯ ಈ ಯುದ್ಧದಿಂದಲೇ ಹಾಳಾಯಿತು.

**೧೫. ವೆಂಕಟಪತಿ ದೇವರಾಯ :**—ಇವನು ಪೆನುಗೊಂಡೆಯಲ್ಲಿ ಆಳುತ್ತಿದ್ದ ಅರವೀಡು ವಂಶದವನು. ವಿಜಯನಗರ ಸಾಮ್ರಾಜ್ಯದಲ್ಲಿ ಮತ್ತೆ ಚೈತನ್ಯ ಹುಟ್ಟಿಸಲು ಬಹು ಹೆಣಗಿದನು. ರಾಜಧಾನಿಯನ್ನು ಪೆನುಗೊಂಡೆಯಿಂದ ತಿರುಪತಿಯ ಬಳಿಯಲ್ಲಿಯ ಚಂದ್ರಗಿರಿಗೆ ಬದಲಾಯಿಸಿದ್ದನು.

ಇವನ ವಂಶವು ಸುಮಾರು ೧೦೦ವರ್ಷ ಆಳಿಕೆ ನಡೆಯಿಸಿತು. ಮುಂದೆ ಪಾಳೆಯಗಾರರಾದ ಮಧುರೆಯ ನಾಯಕ, ಮೈಸೂರಿನ ಒಡೆಯ, ಕೆಳದಿಯ ಅರಸ ಮೊದಲಾದವರು ಸ್ವತಂತ್ರರಾದರು.

## ವಿಜಯನಗರ ಸಾಮ್ರಾಜ್ಯದ ಬಗ್ಗೆ ಇಬ್ಬರು ಪ್ರವಾಸಿಗಳು ವ್ಯಕ್ತಗೊಳಿಸಿದ ಅಭಿಪ್ರಾಯವನ್ನು ತಿಳಿಸಿರಿ.

೨ನೇ ದೇವರಾಯನ ಕಾಲದಲ್ಲಿ ಈರ್ವರು ವಿದೇಶೀ ಪ್ರವಾಸಿಕರು ವಿಜಯನಗರವನ್ನು ಸಂದರ್ಶಿಸಿದರು. ಈ ಪ್ರವಾಸಿಗಳಲ್ಲಿ ಒಬ್ಬನು ಇಟಲಿಯವನಿದ್ದು ಅವನ ಹೆಸರು **ನಿಕೋಲೋ ಕೌಂಟ್** ಎಂದೂ ಇನ್ನೊಬ್ಬನು ಇರಾಣದವನಿದ್ದು ಅವನ ಹೆಸರು **ಅಬ್ದುಲ್‌ರಜಾಕ್** ಎಂದು ಇದ್ದಿತು.

ನಿಕೋಲೋ ಕೌಂಟನು ವಿಜಯನಗರವನ್ನು ಹೀಗೆ ವರ್ಣಿಸಿದ್ದಾನೆ. "ಹಿಂದುಸ್ಥಾನದಲ್ಲಿ ಇದನ್ನು ವೈಭವದಲ್ಲಿಯೂ, ಭದ್ರತೆಯಲ್ಲಿಯೂ ಸರಿಗಟ್ಟುವ ಇನ್ನೊಂದು ರಾಜ್ಯವನ್ನು ಕಾಣಲಿಲ್ಲ" ಎಂದಿರುವನು.

ಅಬ್ದುಲ್ ರಜಾಕನು ಹೀಗೆನ್ನುತ್ತಾನೆ "ವೈಭವ ಸಂಪತ್ತಿನಲ್ಲಿ ವಿಜಯನಗರವನ್ನು ಹೋಲುವ ಇನ್ನೊಂದು ದೇಶವನ್ನು ನಾನು ಜಗತ್ತಿನಲ್ಲಿಯೇ ಕಾಣಲಿಲ್ಲ! ಇಲ್ಲಿಯ ಆಡಳಿತೆ ಭದ್ರವಾಗಿದ್ದು ವಿಜಯನಗರಕ್ಕೆ ೭ ಸುತ್ತಿನ ಕೋಟೆಯಿದೆ. ೧೧ಲಕ್ಷ ಸೈನಿಕರಿದ್ದಾರೆ. ಮುತ್ತು ರತ್ನಾದಿಗಳು ದಿನಂಪ್ರತಿ ಬೈಲು ಪೇಟೆಯಲ್ಲಿ ಮಾರಾಟ ಆಗುತ್ತವೆ. ಗುಲಾಬೀ ಹೂವಿನ ಅನೇಕ ಸುಂದರ ಬನಗಳಿವೆ. ಟಂಕಸಾಲೆ, ಅರಮನೆ ಮುಂತಾದುವುಗಳ ರಕ್ಷಣೆಗಾಗಿ ೧೨ ಸಾವಿರ ಸೈನಿಕರು ಸದಾಸಿದ್ಧರಾಗಿರುವರು'' ಎಂದು ಬರೆದಿರುವನು.

## ಕೆಳಗೆ ಕೊಟ್ಟ ವಿಷಯ ತಪ್ಪೊ, ಒಪ್ಪೋ ಎಂಬುದನ್ನು ಬರೆಯಿರಿ.

೧. ಬಹಮನೀ ರಾಜ್ಯದ ಆಡಳಿತವು ಕ್ರಿ. ಶ. ೧೩೪೭ರಲ್ಲಿ ಹಸನ ಉರ್ಫ ಜಾಫರ ಖಾನನಿಂದ ಸ್ಥಾಪಿಸಲ್ಪಟ್ಟಿತು

೨. ಫಿರೋಜಷಾಹನು ಹೇಡಿಯೂ ಕ್ರೂರಿಯೂ ಆಗಿದ್ದನು.

೩. ಮಹಮದ್ ಶಹಾನಿಗೆ ಗವಾನನೆಂಬ ಮಂತ್ರಿ ಇದ್ದನು.

೪. ಚಾಂದ ಬೀಬಿಯು ವಿಜಾಪುರದ ಆದಿಲ್‌ಷಾಹನ ಹೆಂಡತಿ.

೫. ಕುತೂಬ್ ಉಲ್‌ಮುಲ್ಕನಿಂದ ನಿಜಾಮಶಾಹಿ ಸ್ಥಾಪಿಸಲ್ಪಟ್ಟಿತು.

೬. ಕ್ರಿ. ಶ. ೧೬೮೨ರಲ್ಲಿ ಗೋವಲಕೊಂಡವು ಔರಂಗಜೇಬನ ವಶವಾಯಿತು.

೭. ಖುಸ್ರುವಿಗೆ "ಅಸದ್ ಖಾನನೆಂಬ" ಬಿರುದೂ ಬೆಳಗಾವಿಯ ಜಹಗೀರುಗಳೂ ಇದ್ದುವು.

೮. ಕ್ರಿ. ಶ. ೧೩೩೬ ರಲ್ಲಿ ವಿದ್ಯಾರಣ್ಯರಿಂದ ವಿಜಯನಗರ ಸಾಮ್ರಾಜ್ಯವು ಸ್ಥಾಪಿಸಲ್ಪಟ್ಟಿತು.

೯. ೨ನೇ ಆದಿಲ್‌ಷಾಹನ ಆಳಿಕೆಯಲ್ಲಿ ಆದಿಲ್‌ಷಾಹಿಯು ಕೊನೆಗೊಂಡಿತು.

೧೦. ಪ್ರೌಢದೇವರಾಯನ ಕಾಲವಲ್ಲಿ ವಿಜಯನಗರವು ಹಾಳಾಯಿತು.

**ಉತ್ತರ:**— (೧) ಹೌದು. (೨) ಅಲ್ಲ. (೩) ಅಲ್ಲ. (೪) ಹೌದು. (೫) ಅಲ್ಲ. (೬) ಹೌದು (೭) ಹೌದು. (೮) ಹೌದು. (೯) ಅಲ್ಲ. (೧೦) ಅಲ್ಲ.

**ಪ್ರಶ್ನೆ:—ಕೆಳಗೆ ಕಾಣಿಸಿದವರ ಬಗ್ಗೆ ಒಂದೇ ವಾಕ್ಯದಲ್ಲಿ ಬರೆಯಿರಿ.**

(೧) ಅಲ್ಲಾವುದ್ದೀನ ಹಸನಗಂಗೂ (೨) ಫಿರೋಜ ಶಾಹ (೩) ೧ನೇ ಅಹಮದ (೪) ೨ ನೇ ಅಲ್ಲಾವುದ್ದೀನ (೫) ೩ ನೇ ಮಹಮ್ಮದ್ (೬) ಅಲ್ಲೀ ಆದಿಲ್ ಶಹ.

**ಉತ್ತರ:**— ೧. **ಅಲ್ಲಾವುದ್ದೀನ ಹಸನಗಂಗೂ** ಇವನು ಮುಹಮ್ಮದ್ ತಘಲಕನ ಸರದಾರ. ಕುತುಲಘಖಾನನ ಕಡೆ ಅಧಿಕಾರಿಯಾಗಿದ್ದು, ತನ್ನ ಶೌರ್ಯ ಮತ್ತು ಸ್ವಾಮಿ ನಿಷ್ಠೆಯಿಂದ ಮುಂದೆಬಂದು ಕ್ರಿ. ಶ. ೧೩೪೭ ರಲ್ಲಿ ಕಲುಬುರ್ಗೆಯಲ್ಲಿ ಬಹಮನೀ ರಾಜ್ಯವನ್ನು ಸ್ಥಾಪಿಸಿದನು.

೨. **ಫಿರೋಜಶಹ** ಹಸನಗಂಗೂವಿನ ಶೂರ ಮೊಮ್ಮಗನಾದ ಈತನ ಆಳಿಕೆಯು ವಿಜಯ ನಗರದವರೊಡನೆ ಯುದ್ಧ ಮಾಡುವುದರಲ್ಲಿಯೇ ಕಳೆಯಿತು.

೩. **೧ ನೇ ಅಹಮದ್** (ಕ್ರಿ. ಶ. ೧೪೨೨–೧೪೩೫) ಫಿರೋಜ ಶಹನ ತಮ್ಮನಾದ ಈತನು ವಿಜಯನಗರದವರನ್ನೊಳಗೊಂಡು ಅನೇಕ ಹಿಂದೂ ಅರಸರನ್ನು ಸೋಲಿಸಿ ತನ್ನ ಅಧಿಕಾರವನ್ನು ಸ್ಥಾಪಿಸಿದನು.

**೪. ೨ ನೇ ಅಲ್ಲಾವುದ್ದೀನ** (೧೪೩೬–೧೪೫೭) ಅಹಮದ್ ಶಾಹನ ಹಿರಿಯ ಮಗನಾದ ಈತನು ಅನೇಕ ಪಾಳೆಯಗಾರರನ್ನೂ ಸಂಗಮೇಶ್ವರದ ರಾಜನನ್ನೂ ಸೋಲಿಸಿ ಅವನ ಮಗಳನ್ನು ಮದುವೆಯಾಗಿದ್ದನು.

**೫. ೩ ನೇ ಮುಹಮದ್** ( ಕ್ರಿ. ಶ. ೧೪೬೩–೧೪೮೨ ) ಇವನು ಶೂರನೂ, ವಿದ್ಯಾವಂತನೂ ಆಗಿದ್ದು, ಇವನ ನಿಪುಣನಾದ ಮಂತ್ರಿ ಗವಾನನಿಂದ ಅನೇಕ ನಿರಾವರಿ ಇತ್ಯಾದಿ ಲೋಕೋಪಯೋಗಿ ಕಾರ್ಯಗಳಿಂದ ಜನರಿಗೆ ಸಮೃದ್ಧಿ ಒದಗಿಸಿದನು.

**೬. ಅಲ್ಲಿ ಆದಿಲ್ ಶಹ** (ಕ್ರಿ. ಶ. ೧೫೫೮–೧೫೭೯) ಇವನೇ ವಿಜಾಪುರದ ಪ್ರಸಿದ್ಧ ಸುಲ್ತಾನನಾಗಿದ್ದನಲ್ಲದೆ, ಇತಿಹಾಸ ಪ್ರಸಿದ್ಧಳಾದ ಚಾಂದಬೀಬಿಯನ್ನು ಮದುವೆಯಾಗಿದ್ದನು.

**ಪ್ರಶ್ನೆ :— ಕೆಳಗೆ ಕೆಲವು ಐತಿಹಾಸಿಕ ಸಂಗತಿ ಮತ್ತು ಇಸವಿಗಳನ್ನು ಕೊಟ್ಟಿದೆ. ಅವುಗಳನ್ನು ಹೊಂದಿಸಿ ಕಾಲಾನುಕ್ರಮದಿಂದ ಬರೆಯಿರಿ :—**

ವಿಜಯನಗರ ಸಾಮ್ರಾಜ್ಯ ಸ್ಥಾಪನೆ; ಶಮುಸುದ್ದೀನ ಇಲ್ತಮಶನ ಪಟ್ಟ; ಗಿಝುನೀ ಮಹಮೂದನು ಸೋಮನಾಥ ದೇವಾಲಯವನ್ನು ಲೂಟಿ ಮಾಡಿದ್ದು; ಪೃಥ್ವಿರಾಜನು ಘೋರಿ ಮಹಮೂದನನ್ನು ಸೋಲಿಸಿದುದು; ಇಬ್ರಾಹಿಂ ಲೋದಿಯ ಪಟ್ಟ; ಪಾಣೀಪತ್ತದ ಮೊದಲನೇ ಯುದ್ಧ; ಅಲ್ಲಾವುದ್ದೀನ ಖಿಲಜಿಯ ಆಳಿಕೆ; ಗುರು ನಾನಕನ ಜನ್ಮ; ಬಹಮನೀ ರಾಜ್ಯ ಸ್ಥಾಪನೆ; ರೆಝಿಯಾ ಬೇಗಮಳ ಪಟ್ಟ.

೧೪೫೦; ೧೫೨೬; ೧೪೬೯; ೧೨೯೬; ೧೨೩೬; ೧೩೩೬; ೧೩೪೭; ೧೨೧೦; ೧೦೨೪; ೧೧೯೧.

**ಉತ್ತರ** :—ಗಿಝುನೀ ಮಹಮೂದನು ಸೋಮನಾಥ ದೇವಾಲಯವನ್ನು ಲೂಟಿ ಮಾಡಿದ್ದು ಕ್ರಿ. ಶ. ೧೦೨೪.

ಪೃಥ್ವಿರಾಜನು ಘೋರಿ ಮಹಮೂದನನ್ನು ಸೋಲಿಸಿದುದು ಕ್ರಿ. ಶ. ೧೧೯೧;

ಶಮುಸುದ್ದೀನ ಇಲ್ತಮಶನ ಪಟ್ಟ ಕ್ರಿ. ಶ. ೧೨೧೦;

ರೆಝಿಯಾ ಬೇಗಮಳ ಪಟ್ಟ ೧೨೩೬;

ಅಲ್ಲಾವುದ್ದೀನ ಖಿಲಜಿಯ ಪಟ್ಟ ೧೨೯೬;
ವಿಜಯನಗರ ಸಾಮ್ರಾಜ್ಯ ಸ್ಥಾಪನೆ ೧೩೩೬;
ಬಹಮನೀ ರಾಜ್ಯ ಸ್ಥಾಪನೆ ೧೩೪೭;
ಇಬ್ರಾಹಿಂ ಲೋದಿಯ ಪಟ್ಟ ೧೪೫೦;
ಗುರುನಾನಕನ ಜನ್ಮ ೧೪೬೯;
ಪಾಣೀಪತ್ತದ ಮೊದಲನೇ ಯುದ್ಧ ೧೫೨೬.

**ಪ್ರಶ್ನೆ :— ಕೆಳಗೆ ಕೊಟ್ಟವರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.**

(೧) ಬಾಬರ್ (೨) ಹುಮಾಯೂನ್ (೩) ಷೇರ್‌ಷಾಹ (೪) ಅಕಬರ್ (೫) ಬೈರಾಮುಖಾನ (೬) ಜಹಂಗೀರ (೭) ನೂರ್ ಜಹಾನ್ (೮) ಕ್ಯಾಪ್ಟನ್ ಹಾಕಿನ್ಸ್ (೯) ಸರ್ ಥಾಮಸ್ ರೋ (೧೦) ಷಾಹೆಜಹಾನ್ (೧೧) ಅರ್ಜಮುಂದ್‌ಬಾನೂ (೧೧) ಔರಂಗ ಜೇಬ್ (೧೩) ಬಹದ್ದೂರ್ ಷಾಹ (೧೪) ಪ್ರತಾಪಸಿಂಹ.

**ಉತ್ತರ :— ಬಾಬರ್** :—ಇವನು ಜಂಗೀಝಖಾನ್ ಮತ್ತು ತೈಮೂರ ವಂಶದ ತಂದೆತಾಯಿಗಳಿಂದ ಜನಿಸಿದನು. ತಂದೆಯ ಹೆಸರು **ಉಮರಶೇಖ ಮಿರ್ಝಾ**. ಬಾಬರನ ಮೂಲ ಹೆಸರು **ಜಹಿರುದ್ದೀನ ಮಹಮೂದ**. ಇವನು ಪರಾಕ್ರಮಿಯಾದುದರಿಂದ **ಬಾಬರ್** ( ಸಿಂಹ ) ಎಂಬ ಹೆಸರು ಬಿತ್ತು. ಇವನು ೧೨ ವರ್ಷದ ಬಾಲಕನಾಗಿರುವಾಗಲೇ ಇವನ ತಂದೆ ಸತ್ತದ್ದರಿಂದ ಇವನ ಮೇಲೆ ರಾಜ್ಯಭಾರದ ಹೊಣೆ ಬಿದ್ದಿತು. ಇವನು ಶೂರನೂ, ಮಹತ್ವಾಕಾಂಕ್ಷಿಯೂ ಆಗಿದ್ದುದರಿಂದ ಸಮರ್ಕಂದವನ್ನು ಜಯಿಸಲು ಎಷ್ಟೋ ಸಲ ಪ್ರಯತ್ನಿಸಿದನು, ಆದರೆ ಸಾಧ್ಯವಾಗಲಿಲ್ಲ. ಒಮ್ಮೆ ಯುದ್ಧದಲ್ಲಿ ತನ್ನ ಸ್ವಂತದ ರಾಜ್ಯದ ಕೆಲಭಾಗವನ್ನು ಕಳೆದು ಕೊಳ್ಳುವ ಭಾಗ ಬಿತ್ತು. ಇವನು ಹಿಂದುಸ್ಥಾನದ ಮೇಲೆ ದಂಡೆತ್ತಿ ಬಂದು ಕ್ರಿ. ಶ. ೧೫೨೬ ರಲ್ಲಿ ೧ ನೇ ಪಾಣಿಪತ್ತದ ಯುದ್ಧದಲ್ಲಿ ಇಬ್ರಾಹಿಂ ಲೋದಿಯನ್ನು ಸೋಲಿಸಿ ದಿಲ್ಲಿಯ ಸಿಂಹಾಸನವನ್ನು ವಶಪಡಿಸಿಕೊಂಡನು. ಬಾಬರನು ಅನೇಕ ಯುದ್ಧದಲ್ಲಿ ಕಷ್ಟನಷ್ಟಗಳನ್ನು ಎದುರಿಸಿದ್ದನಾದ್ದರಿಂದ ಪ್ರವೀಣ ಯೋಧನಾಗಿದ್ದನು. ಇವನು ತನ್ನ ಮಗ ಹುಮಾಯೂನನಿಗೆ ಬಂದಿದ್ದ ಖಾಯಿಲೆಯು ತನಗೆ ಬರಲೆಂದು ಬೇಡಿಕೊಳ್ಳಲು ಇವನಿಗೆ

ಖಾಯಿಲೆ ತಗುಲಿ ಕ್ರಿ. ಶ. ೧೫೩೦ ರಲ್ಲಿ ಮರಣ ಹೊಂದಿದನು. ಇವನಿಗೆ ವಿದ್ಯಾಭಿರುಚಿ ಇತ್ತು ಎಂಬುದು ಇವನು ಬರೆದಿಟ್ಟಿರುವ ತನ್ನ ಆತ್ಮಕಥೆ " ಬಾಬರ್ ನಾಮಾ " ದಿಂದ ವ್ಯಕ್ತವಾಗುವುದು. .

೨. **ಹುಮಾಯೂನ್** :— ( ಕ್ರಿ. ಶ. ೧೫೩೦–೧೫೫೬ ) ಈತನು ಬಾಬರನ ಹಿರಿಯ ಮಗ. ಇವನಿಗೆ ಕಾಮರಾನ, ಹಿಂಡಾಲ, ಅಸ್ಕರಿ ಎಂಬ ಮೂವರು ತಮ್ಮಂದಿರಿದ್ದರು. ಹುಮಾಯೂನನು ಸ್ವಲ್ಪ ಅದೂರ ದೃಷ್ಟಿ ಮತ್ತು ಆಲಸ್ಯದ ಸ್ವಭಾವದವನಾದ್ದರಿಂದ ತನ್ನ ತಂದೆ ಗಳಿಸಿಕೊಟ್ಟ ದಿಲ್ಲೀ ಸಿಂಹಾಸನವನ್ನು ಕಳೆದುಕೊಂಡು ಅಲೆಯಬೇಕಾಯಿತು. ಇವನ ತಮ್ಮಂದಿರು ಇವನಿಗೆ ಸಹಾಯ ಮಾಡದೇ ತೊಂದರೆ ಕೊಟ್ಟರು. ಆದರೆ ಧೈರ್ಯಗೆಡದೆ ಸಹಾಯಕ್ಕಾಗಿ ಯಾಚಿಸುತ್ತ ಸಿಂಧಪ್ರಾಂತದಲ್ಲಿ ಅಲೆಯುತ್ತಿರುವಾಗ ಸಿಂಧದ ಹಿಂಡಾಲನ ಮಗಳು ಹಮೀದಾಬಾನುಳನ್ನು ಮದುವೆಯಾದನು. ಮುಂದೆ ಹುಮಾಯೂನನು ಉಮರ್‌ಕೋಟದ ರಾಣಾಪ್ರಸಾದನ ಬಳಿ ಆಶ್ರಯ ಪಡೆದಾಗ ( ಕ್ರಿ. ಶ. ೧೫೪೨ ) ರಲ್ಲಿ **ಅಕಬರನ** ಜನನವಾಯಿತು. ಹುಮಾಯೂನನು ಇರಾಣಕ್ಕೆ ಹೋಗಿ ಷಿಯಾ ಪಂಥವನ್ನು ಸ್ವೀಕರಿಸಿ ಷಾಹನಿಂದ ೧೪ ಸಾವಿರ ಸೈನ್ಯವನ್ನು ತೆಗೆದುಕೊಂಡು ಬಂದು. ಕ್ರಿ. ಶ. ೧೫೪೪ ರಲ್ಲಿ ಕಂದಾಹಾರ, ಕಾಬೂಲುಗಳನ್ನು ಗೆದ್ದನು. ಕಾಮರಾನನು ಮತ್ತೆ ಮತ್ತೆ ದಾಳಿಮಾಡಲು ಅವನನ್ನು ಹಿಡಿದು ಕಣ್ಣು ಕೀಳಿಸಿದನು. ಕ್ರಿ. ಶ. ೧೫೫೫ ರಲ್ಲಿ ಸಿಕಂದರ್ ಸೂರನನ್ನು ಸೋಲಿಸಿ ೧೫ ವರ್ಷಗಳ ವನವಾಸದ ನಂತರ ದಿಲ್ಲೀ ಪಟ್ಟವನ್ನು ಮತ್ತೆ ಆಕ್ರಮಿಸಿದನು. ಆದರೆ ಮದ್ಯೈವಿಯಾದ ಇವನು ಬಹುಕಾಲ ರಾಜ್ಯಭಾರ ಮಾಡಲಿಲ್ಲ. ಒಮ್ಮೆ ಉಪ್ಪರಿಗೆ ( ಮಹಡಿ ) ಯಿಂದ ಕೆಳಗೆ ಇಳಿಯುವಾಗ ಕಾಲು ಜಾರಿ ಬಿದ್ದು ಮರಣ ಹೊಂದಿದನು. ಇವನು ವಿದ್ಯಾವಂತನೂ, ದಯಾಳುವೂ ಆಗಿದ್ದನು.

೩. **ಷೇರ್‌ಷಾಹ** :—(ಕ್ರಿ. ಶ. ೧೫೪೦–೧೫೪೫) ಇವನ ಮೊದಲಿನ ಹೆಸರು **ಫರೀದ**. ಒಮ್ಮೆ ಬೇಟೆಗೆ ಹೋದಾಗ ಮೈಮೇಲೆ ಏರಿ ಬಂದ ಹುಲಿಯನ್ನು ಒಂದೇ ಏಟಿಗೆ ಕೊಂದನಂತೆ, ಆದರಿಂದ ಇವನಿಗೆ **ಷೇರ್‌ಖಾನ್** ಎಂಬ ಹೆಸರು ಬಿತ್ತು. ಇವನು ಕ್ರಿ. ಶ. ೧೫೩೯ರಲ್ಲಿ ಹುಮಾಯೂನನ್ನು ಬಕ್ಸಾರ್ ಕಾಳಗದಲ್ಲಿ ಸೋಲಿಸಿ **ಷೇರ್‌ಷಾಹ**ನೆಂಬ ಹೆಸರಿನಿಂದ ದಿಲ್ಲಿಯ ಪಟ್ಟವೇರಿದನು. ಇವನು ಶೂರನಾದ್ದರಿಂದ ಅನೇಕ

ರಾಜ್ಯಗಳನ್ನು ಗೆದ್ದನು ಇವನು ಪ್ರಜೋಪಕಾರಿಯಾದ ಕೆಲಸಗಳನ್ನು ಮಾಡಿದನು. ಅವಾವುವೆಂದರೆ ಕುದುರೆಯ ಮೇಲೆ ಟಪಾಲು ಹಂಚುವ ವ್ಯವಸ್ಥೆ, ಭೂಮಿಯ ಅಳತೆಮಾಡಿಸಿ ಯೋಗ್ಯ ತೆರಿಗೆ ಗೊತ್ತುಪಡಿಸುವುದು, ರಾಜಮಾರ್ಗ ನಿರ್ಮಿಸುವುದು, ಕಳ್ಳಕಾಕರರ ಭೀತಿಯಿಲ್ಲದಂತೆ ಮಾಡಲು ಪೋಲೀಸ್‌ಖಾತೆಯ ನಿರ್ಮಾಣ ಮುಂತಾದ ಉಪಯುಕ್ತ ಕಾರ್ಯಗಳನ್ನು ಮಾಡಿದನು. ಕ್ರಿ ಶ. ೧೫೪೫ರಲ್ಲಿ ಬುಂದೇಲ ಖಂಡದ ಕಲಿಂಜರವನ್ನು ಮುತ್ತಿದಾಗ ಮದ್ದಿನ ಆಗಾರಕ್ಕೆ ಬೆಂಕಿಹತ್ತಿ ಸಿಡಿಯಲು ಅಲ್ಲಿಯೇ ಸತ್ತನು.

೪. **ಅಕಬರ** (ಕ್ರಿ. ಶ ೧೫೫೬–೧೬೦೫) ಅಕಬರನ ಜನ್ಮ ಅಮರ ಕೋಟಿನಲ್ಲಿ ಕ್ರಿ. ಶ. ೧೫೪೨ರಲ್ಲಿ ಆಯಿತು. ಇವನು ಮೊಗಲ ದೊರೆಗಳ ಲ್ಲಿಯೇ ಶ್ರೇಷ್ಠನೆನಿಸಿಕೊಂಡನು. ಏಕೆಂದರೆ ಇವನು ಪ್ರಬಲನಾಗಿ ತನ್ನ ರಾಜ್ಯವನ್ನು ವಿಸ್ತರಿಸಿದನಲ್ಲದೆ, ಪ್ರಜೆಗಳನ್ನೆಲ್ಲಾ ಒಟ್ಟುಗೂಡಿಸಲು ಹೆಣ ಗಿದನು. ಇವನು ಸಮರ್ಥ ಹಿಂದೂ ಜನರನ್ನು ತನ್ನ ಆಡಳಿತೆಯಲ್ಲಿ ಸೇರಿಸಿ ಕೊಂಡು ಜನರ ಪ್ರೀತಿ ವಿಶ್ವಾಸಗಳಿಸಿದ್ದನು. ಜಾತಿ ವೈಷಮ್ಯ ಹೋಗಲಾಡಿ ಸಲು ಹಿಂದೂ ಮತ್ತು ಇಸ್ಲಾಂ ಧರ್ಮದ ಯೋಗ್ಯ ತತ್ವಗಳನ್ನು ಆಯ್ದು ಕೊಂಡು ತನ್ನದೇ ಆದ ಒಂದು ಹೊಸ ಧರ್ಮವನ್ನು ಸ್ಥಾಪಿಸಿ ಅದಕ್ಕೆ **"ದೀನ್-ಏ-ಇಲಾಹಿ"** ಎಂದು ಹೆಸರಿಟ್ಟನು. ಇವನ ಆಸ್ಥಾನದಲ್ಲಿ **ನವ ರತ್ನ**ಗಳಿದ್ದರು. ಇವನು ಚಿಕ್ಕವನಿರುವಾಗಲೇ ತಂದೆ ಹುಮಾಯನನು ತೀರಿ ಕೊಂಡದ್ದರಿಂದ ರಾಜ್ಯಭಾರವೆಲ್ಲಾ **ಬೈರಾಮುಖಾನನ** ಕಡೆಗಿತ್ತು. ಬೈರಾಮುಖಾನನು ಕ್ರೂರ ಹಾಗೂ ಉದ್ಧಟನಾದ್ದರಿಂದ ಅವನಿಂದ ಅಕಬರನು ರಾಜ್ಯಭಾರವನ್ನು ಕಿತ್ತುಕೊಂಡನು. ಬೈರಾಮನು ದಂಗೆಯೆದ್ದರೂ ಅದು ತೀವ್ರ ಅಡಗಿಸಲ್ಪಟ್ಟಿತು. ಅಕಬರನು ಹಿಂದುಗಳ ಮೇಲಿನ "ಜೀಜಿಯಾ" ಕರವನ್ನು ತೆಗೆದುಹಾಕಿದನು. ಆಗ ಹಿಂದೂಗಳಲ್ಲಿ ರೂಢಿಯಲ್ಲಿದ್ದ "ಸತಿ" ಹೋಗಲು ಒತ್ತಾಯಪಡಿಸುವುದನ್ನು ನಿರ್ಬಂಧಿಸಿದನು. ಅಕಬರನು ಜಯ ಪುರ ಮತ್ತು ಜೋಧಪುರದ ರಜಪೂತ ಕನ್ಯೆಯರನ್ನು ಲಗ್ನವಾಗಿ ಸಂಬಂಧಿ ಕರಿಗೆ ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳನ್ನಿತ್ತನು. ಅಕಬರನ ಅಧೀನ ವಾಗದೇ ಇದ್ದವನೆಂದರೆ ವೀರ ರಜಪೂತನಾದ ರಾಣಾ ಪ್ರತಾಪಸಿಂಹ ನೊಬ್ಬನೇ. ಇವನ ಮಂತ್ರಿ ತೋಡರ ಮಲ್ಲನು ಭೂಮಿಯನ್ನು ಅಳೆಯಿಸಿ ತೆರಿಗೆಯನ್ನು ಗೊತ್ತುಪಡಿಸಿದನು. ಅಕಬರನಿಗೆ ಸ್ವತಃ ಓದಲು ಬಾರ

ದಿದ್ದರೂ ವಿದ್ಯಾಭಿಮಾನಿಯೂ, ಕಲಾಭಿಮಾನಿಯೂ ಆಗಿದ್ದನು. ಪರಧರ್ಮ ಸಹಿಷ್ಣುವೂ, ಶೂರನೂ ಆದ ಇವನಿಗೆ ಸಲೀಮ, ದಾನಿಯಾಲ, ಮುರಾದ ಎಂಬ ಮಕ್ಕಳಿದ್ದರು. ಸಲೀಮನು ಕ್ರೂರ ಸ್ವಭಾವದವನು ವೈಯ್ಯಕ್ತಿಕ ದ್ವೇಷಕ್ಕಾಗಿ ಅಕಬರನ ಗೆಳೆಯ ಅಬ್ದುಲ್ ಫಜಲನನ್ನು ಕೊಂದನು. ಮಗನ ಈ ಕೃತ್ಯಕ್ಕೆ ಅಕಬರನು ವ್ಯಥೆಗೊಂಡು ಕೊರಗಿ ಕ್ರಿ. ಶ. ೧೬೦೫ರಲ್ಲಿ ಮರಣ ಹೊಂದಿದನು.

೫. **ಬೈರಾಮಖಾನ** :— ಇವನು ಹುಮಾಯೂನನ ನೆಚ್ಚಿನ ತುರ್ಕೀ ಸರದಾರ. ಹುಮಾಯೂನನ ಅತಿ ಹೀನಾವಸ್ಥೆಯಲ್ಲಿಯೂ ಅವನ ಸೈ ಬಿಡಲಿಲ್ಲ, ಆದ್ದರಿಂದಲೇ ಹುಮಾಯೂನನ ಮರಣದ ತರುವಾಯ ಮೊಗಲ ರಾಜ್ಯದ ಹೊಣೆ ಇವನ ಕಡೆಗಿತ್ತು. ಇವನು ಶೂರನೂ, ಕ್ರೂರಿಯೂ, ಗರ್ವಿಷ್ಟನೂ ಆಗಿದ್ದನು. ಎಷ್ಟೋ ಸಾರೆ ಅಕಬರ ಬಾದಶಾಹನಿಗೇ ಅಪಮಾನವಾಗುವಂತೆ ವರ್ತಿಸಿದ್ದರಿಂದ ಇವನು ಪದಚ್ಯುತಗೊಳಿಸಲ್ಪಟ್ಟನು. ಬೈರಾಮನು ಅಕಬರನ ವಿರುದ್ಧ ದಂಗೆ ಏಳಲು ಅದು ಅಡಗಿಸಲ್ಪಟ್ಟು ಸೆರೆಹಿಡಿಯಲ್ಪಟ್ಟನು. ಅಕಬರನು ದಯೆದೋರಿ ಇವನಿಗೆ ಮಕ್ಕಾಕ್ಕೆ ಹೋಗಲು ಅಪ್ಪಣೆ ಕೊಟ್ಟನು. ಆದರೆ ಮಾರ್ಗದಲ್ಲಿ ಗುಜರಾತದ ಪಾಟಣಾ ಎಂಬಲ್ಲಿ ಯಾರೋ ವೈರಿಗಳು ಇವನ ಕೊಲೆ ಮಾಡಿದರು.

೬. **ಜಹಂಗೀರ**:—ಇವನೇ ಅಕಬರನ ಮಗ ಸಲೀಮ. ಅಕಬರನ ಮರಣದ ತರುವಾಯ **"ಜಹಂಗೀರ್"** (ಜಗತ್ತನ್ನುಗೆಲ್ಲುವವ) ಎಂಬ ಹೆಸರನ್ನು ಧರಿಸಿ ಆಳಹತ್ತಿದನು. ಇವನು ಕ್ರೂರಿಯೂ, ಶೂರನೂ, ಹಟವಾದಿಯೂ, ಕುಡುಕನೂ ಆಗಿದ್ದನು. ಇವನು ವ್ಯಸನಿಯಿದ್ದುದರಿಂದ ಅಕಬರನ ಮರಣದ ತರುವಾಯ ಜಹಂಗೀರನ ಹಿರಿಯ ಮಗ **ಖುಸ್ರುವನ್ನು** ಪಟ್ಟಕ್ಕೆ ಕೂಡಿಸಲು ಸೇನಾಪತಿ **ಅಜೀಜ್‌ಖಾನನೂ** ಖುಸ್ರುವಿನ ಸೋದರ ಮಾವ **ಮಾನಸಿಂಗನೂ** ಪ್ರಯತ್ನಿಸಿದರು. ಆದರೆ ಅದು ಕೈಗೂಡಲಿಲ್ಲ. ಜಹಂಗೀರನು ಖುಸ್ರುವನ್ನು ಸೆರೆಹಿಡಿದು ಕಣ್ಣುಕೀಳಿಸಿ ಅವನ ೩ನೇ ಮಗನ ವಶಕ್ಕೆಕೊಟ್ಟನು. ಜಹಂಗೀರನು ಖುರ್ರಮ ಮತ್ತು ಮಹಬತ್‌ಖಾನರೊಂದಿಗೆ ದೊಡ್ಡ ಸೈನ್ಯವನ್ನು ಕಳಿಸಿ ರಾಣಾಪ್ರತಾಪನ ಮಗ **ಅಮರಸಿಂಹನನ್ನು** ಉದಯಪುರದಲ್ಲಿ ಸೋಲಿಸಿ ಒಪ್ಪಂದ ಮಾಡಿಕೊಂಡನು. ಜಹಂಗೀರನು ಬಂಗಾಲದ ಸರದಾರ ಷೇರ್ ಆಫ್‌ಘಾನನ ಹೆಂಡತಿ

ಮೆಹರುನ್ನಿಸಾಳನ್ನು ವಶಪಡಿಸಿ ಕೊಳ್ಳಲು ಹಟತೊಟ್ಟನು. ಇದಕ್ಕಾಗಿಯೇ ಷೇರ್ ಅಫಘಾನನ ಮೇಲೆ ಬಂಡಾಯದ ಆರೋಪ ಹೊರಿಸಿ ಕೊಲ್ಲಿಸಿದನು. ಕ್ರಿ. ಶ. ೧೬೦೭ ರ ತರುವಾಯ ನಾಲ್ಕು ವರ್ಷ ಗತಿಸಿದ ಮೇಲೆ ಮೆಹರುನ್ನಿಸಾಳನ್ನು **ನೂರ್‌ಜಹಾನ್** ಎಂಬ ಹೆಸರಿನಿಂದ ಮದುವೆಯಾದನು. ನೂರ್‌ಜಹಾನಳು ತನ್ನ ಚಲುವಿಕೆ, ಚತುರತೆಯಿಂದ ಜಹಂಗೀರನನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿಕೊಂಡು ತಾನೇ ರಾಜ್ಯಾಡಳಿತ ನೋಡಿ ಕೊಳ್ಳುತ್ತಿದ್ದಳು. ಜಹಂಗೀರನು ಕ್ರಿ ಶ. ೧೬೨೭ ರಲ್ಲಿ ಮರಣ ಹೊಂದಿದನು.

೭. **ನೂರ್‌ಜಹಾನ್** :— ಈಕೆಯು ಅಕಬರನ ಆಸ್ಥಾನದಲ್ಲಿದ್ದ ಇರಾಣೀ ಗೃಹಸ್ಥ ಗಯಾಸ ಬೇಗನ ಮಗಳು. ಈಕೆಯು ರೂಪವತಿಯೂ, ಶೂರಳೂ, ಚತುರೆಯೂ, ಕವಿಯಿತ್ರಿಯೂ, ದಕ್ಷಳೂ ಆಗಿದ್ದಳು. ಈಕೆಯ ಮೊದಲಿನ ಹೆಸರು **ಮೆಹರುನ್ನಿಸಾ.** ಸಲೀಮನು ಈಕೆಯ ಮೇಲೆ ಕಣ್ಣಿಡಲು ಅಕಬರ ಬಾದಶಹನು ಉಪಾಯದಿಂದ ಬಂಗಾಲದ ಸರದಾರ ಷೇರ್ ಅಫಘಾನನಿಗೆ ಲಗ್ನಮಾಡಿಸಿದನು. ಆದರೆ ಸಲೀಮನು ತನ್ನ ಹಟ ಬಿಡದೆ ತಾನು ಅರಸನಾದಾಗ ಈಕೆಯ ಗಂಡನನ್ನು ಕೊಲ್ಲಿಸಿ ೪ ವರ್ಷಗಳ ತರುವಾಯ ಮದುವೆಯಾದನು. ಇವಳು ನೂರ್‌ಜಹಾನ್ ಎಂದು ಹೆಸರು ಬದಲಾಯಿಸಿಕೊಂಡಳು. ಜಹಂಗೀರ (ಸಲೀಮ) ನನ್ನು ತನ್ನ ಕೈಯ್ಯಲ್ಲಿಟ್ಟು ಕೊಂಡು ತಾನೇ ಆಡಳಿತ ನಡೆಯಿಸುತ್ತಿದ್ದಳು. ಈಕೆಯು ತನ್ನ ಎದುರಾಳಿಗಳನ್ನೆಲ್ಲಾ ಸದೆ ಬಡಿದುದನ್ನು ನೋಡಿದರೆ ಎಂತಹ ಗಂಡಸಿಗೂ ಆಶ್ಚರ್ಯವೆನಿಸುವುದು. ಈಕೆಯು ತನ್ನ ಗಂಡನ ಕುಡಿತದ ವ್ಯಸನವನ್ನು ಕಡಿಮೆ ಮಾಡಿಸಿದಳು. ತನಗೆ ಗಂಡು ಮಕ್ಕಳಿಲ್ಲವಾದ್ದರಿಂದ ತನ್ನ ಮೊದಲಿನ ಗಂಡನ ಮಗಳು ಲಾಡ್ಲಿ ಬೇಗಮಳನ್ನು **ಷಹರಿಯಾರ**ನಿಗೆ ಲಗ್ನಮಾಡಿ ಅವನನ್ನು ತನ್ನಕಡೆ ಎಳೆದುಕೊಂಡು ಪಟ್ಟಗಟ್ಟುವ ಹಂಚಿಕೆ ಹಾಕಿದಳು. ಆದರೆ ಖುರ್ರಮನು ದಂಗೆ ಏಳಲು ಅದು ಕೂಡಲೇ ಹತ್ತಿಕ್ಕಲ್ಪಟ್ಟಿತು. ಮುಹಬತ್‌ಖಾನನು ಪ್ರಬಲನಾಗಹತ್ತಿದ್ದರಿಂದ ಅವನನ್ನು ಸೇನಾಧಿಪತಿಯ ಕೆಲಸದಿಂದ ತೆಗೆದಳು. ಮುಹಬತ್‌ಖಾನನು ದಂಗೆಯೆದ್ದು ಕಾಬೂಲ್ ಕಡೆಗೆ ಹೊರಟಿದ್ದ ಜಹಂಗೀರ್, ನೂರ್‌ಜಹಾನ, ಷಹರಿಯಾರರನ್ನು ಸೆರೆಹಿಡಿದನು. ಆಗ್ಗ ನೂರ್‌ಜಹಾನಳು ಉಪಾಯದಿಂದ ಸೈನ್ಯದಲ್ಲಿ ಒಡಕು

ಹುಟ್ಟಿಸಿ ಸೈನ್ಯವು ಮುಹಬತ್‌ಖಾನನ ವಿರುದ್ಧ ಬೀಳುವಂತೆ ಪಿತೂರಿ ಮಾಡಿದಳು. ಕ್ರಿ. ಶ. ೧೬೨೭ರಲ್ಲಿ ಜಹಂಗೀರನ ಮರಣವಾಗಲು ಷಾಹೆಜಹಾನನು (ಖುರ್ರಮ) ಈಕೆಯಿಂದ ಅಧಿಕಾರವನ್ನೆಲ್ಲಾ ಕಿತ್ತುಕೊಂಡನು. ನೂರ್‌ಜಹಾನಳು ಕ್ರಿ ಶ ೧೬೪೫ರಲ್ಲಿ ಮರಣಹೊಂದಿದಳು.

೮. **ಕ್ಯಾಪ್ಟನ್ ಹಾಕಿನ್ಸ್**:—ಈ ಇಂಗ್ಲೀಷ್ ನಾವಿಕನು ಕ್ರಿ. ಶ. ೧೬೦೮ರಲ್ಲಿ ಜಹಂಗೀರನಿಂದ ಅಪ್ಪಣೆ ಪಡೆದು ಸುರತದಲ್ಲಿ ವಖಾರ ಕಟ್ಟಿಸಲು ಪ್ರಯತ್ನಿಸಿದನು. ಆದರೆ ಜಹಂಗೀರನ ಆಸ್ಥಾನದಲ್ಲಿ ಫೋರ್ತುಗೀಜರ ಕೈವಾಡ ಹೆಚ್ಚಾಗಿದ್ದುದರಿಂದ ಇವನ ಯೋಜನೆ ಸಿದ್ಧಿಸಲಿಲ್ಲ. ಮುಂದೆ ೩-೪ ವರ್ಷಗಳಲ್ಲಿಯೇ ಫೋರ್ತುಗೀಜರು ಮೊಗಲರ ಹಡಗುಗಳನ್ನು ಹಿಡಿದುದರಿಂದ ಜಹಂಗೀರನು ಇಂಗ್ಲೀಷರ ಸಹಾಯಪಡೆದು ಫೋರ್ತುಗೀಜರನ್ನು ನೌಕಾಯುದ್ಧದಲ್ಲಿ ಸೋಲಿಸಿದನು. ಈ ಸಹಾಯಕ್ಕಾಗಿ ಇಂಗ್ಲೀಷರಿಗೆ ಸುರತದಲ್ಲಿ ವಖಾರ ಕಟ್ಟಲು ಅವಕಾಶ ಸಿಕ್ಕಿತು.

೯. **ಸರ್ ಥಾಮಸ್ ರೋ**:— ಇವನು ಕ್ರಿ ಶ. ೧೬೧೫ರಲ್ಲಿ ಜಹಂಗೀರನಿಂದ ಇಂಗ್ಲೀಷರಿಗಾಗಿ ವಿಶೇಷ ವ್ಯಾಪಾರೀ ಸವಲತ್ತು ಪಡೆಯಲು ಪ್ರಯತ್ನಿಸಿದನು. ಒಪ್ಪಂದಕ್ಕೆ ೩ ವರ್ಷ ಪ್ರಯತ್ನಿಸಿದರೂ ಸಾಧ್ಯವಾಗದೆ ಹಿಂತಿರುಗಿದನು.

೧೦. **ಷಾಹೆಜಹಾನ್**:—(ಕ್ರಿ. ಶ ೧೬೨೭-೧೬೫೮) ಜಹಂಗೀರನ ಆಳಿಕೆಯ ಕಾಲದಲ್ಲಿ ಖುರ್ರಮನು ಕ್ರಿ. ಶ ೧೬೧೦ರಲ್ಲಿ ಶಾಹಿಯ ರಾಜಧಾನಿಯಾದ ಖಡಕಿಯ ಮೇಲೆ ಏರಿಹೋಗಿ ಮಲಿಕಂಬರನನ್ನು ಸೋಲಿಸಿದನು. ಇದರಿಂದ ಜಹಂಗೀರನು ಸಂತೋಷಗೊಂಡು ಇವನಿಗೆ ಷಾಹೆಜಹಾನ್ (ಜಗತ್ತಿನ ಒಡೆಯ) ಎಂಬ ಹೆಸರಿಟ್ಟನು. ಜಹಂಗೀರನ ಮರಣಾನಂತರ ಷಾಹೆಜಹಾನನು ತನ್ನ ಎದುರಾಳಿಗಳನ್ನು ಅಡಗಿಸಿ ಕ್ರಿ ಶ. ೧೬೨೭ರಲ್ಲಿ ಅತಿ ವೈಭವದಿಂದ ಪಟ್ಟವೇರಿದನು. ಮದಾಂಧರಾದ ಫೋರ್ತುಗೀಜರ ಮೇಲೆ ಕಾಸಿಂಖಾನನೊಂದಿಗೆ ದೊಡ್ಡ ಸೈನ್ಯ ಕಳಿಸಿ ಚಿತಗಾಂಗದ ಬಳಿ ಅವರನ್ನು ಹಣಿಸಿದನು. ಇಲ್ಲಿ ಸಾವಿರಾರು ಫೋರ್ತುಗೀಜರ ಕೊಲೆ. ಯಾಯಿತು. ಇವನು ಶೂರನೂ, ವೈಭವ ಶಾಲಿಯೂ, ದಕ್ಷ ಆಡಳಿತಗಾರನೂ, ರಸಿಕನೂ ಆಗಿದ್ದನು. ಕ್ರಿ. ಶ. ೧೬೩೧ರಲ್ಲಿ ಇವನ ಹೆಂಡತಿ **ಮುಮತಾಜ ಮಹಾಲಳು** (ಅರ್ಜಮಂದಬಾನೂ) ಮರಣವಾಗಲು

ಆಕೆಯ ನೆನಹಿಗಾಗಿ ಒಂಭತ್ತು ಕೋಟಿ ರೂಪಾಯಿ ಖರ್ಚುಮಾಡಿ ಜಗತ್ ಪ್ರಸಿದ್ಧವಾದ **ತಾಜಮಹಾಲನ್ನು** ಕಟ್ಟಿಸಿದನು. ಇವನೇ **ಮಯೂರಾಸನ** ಮತ್ತು **ಮೋತೀ ಮಶೀದೆ**ಗಳನ್ನೂ ಕಟ್ಟಿಸಿದನು. ಇವನ ಆಸ್ಥಾನದಲ್ಲಿ ಅನೇಕ ಕಲಾವಂತರೂ, ವಿದ್ಯಾವಂತರೂ ಇದ್ದರು. ಷಾಹೇಜಹಾನನಿಗೆ ದಾರಾ, ಸೂಜಾ, ಔರಂಗಜೇಬ, ಮುರಾದ ಎಂಬ ನಾಲ್ವರು ಗಂಡು ಮಕ್ಕಳಿದ್ದರು. ಜಹಾನ್ ಆರಾ ಮತ್ತು ರೋಷನ್ ಆರಾ ಎಂಬ ಹೆಣ್ಣುಮಕ್ಕಳ ಇದ್ದರು. ಇವನು ಖಾಯಿಲೆ ಬೀಳಲು ಗಂಡು ಮಕ್ಕಳು ರಾಜ್ಯಕ್ಕಾಗಿ ಕಲಹಮಾಡಹತ್ತಿದರು. ಕೊನೆಗೆ ಔರಂಗಜೇಬನು ಮಹಮದ್ ಅಜೀಮನನ್ನು ಕಳಿಸಿ ಷಾಹೆಜಹಾನನನ್ನು ಸೆರೆಯಲ್ಲಿಟ್ಟನು. ಷಾಹೆಜಹಾನನು ಕ್ರಿ. ಶ. ೧೬೬೬ರಲ್ಲಿ ಮರಣ ಹೊಂದಿದನು.

೧೧. **ಅರ್ಜಮಂದಬಾನೂ :—** ಈಕೆಯು ನೂರ್‌ಜಹಾನಳ ತಮ್ಮನಾದ ಅಸಫಖಾನನ ಮಗಳು. ಕ್ರಿ. ಶ. ೧೬೧೨ರಲ್ಲಿ ಷಾಹೆಜಹಾನನನ್ನು ಮದುವೆಯಾದಳು. ಆಗ ಇವಳಿಗೆ **ಮಮತಾಜ ಮಹಾಲ** ಎಂದು ಹೆಸರಿಟ್ಟರು. ಈಕೆಯು ೧೬೩೦ರಲ್ಲಿ ಮರಣ ಹೊಂದಲು ಷಾಹೆಜಹಾನನು ನೊಂದು ಈಕೆಯ ನೆನಹಿಗಾಗಿ ಆಗ್ರಾದಲ್ಲಿ ಯಮುನಾ ನದಿಯ ದಂಡೆಯ ಮೇಲೆ "**ತಾಜ್ ಮಹಲ್**" ಎಂಬ ಅತಿಸುಂದರ ಕಟ್ಟಡವನ್ನು ೯ ಕೋಟಿ ರೂಪಾಯಿ ವೆಚ್ಚದಿಂದ ಕಟ್ಟಿಸಿರುವನು.

೧೨. **ಔರಂಗಜೇಬ್ :—**(ಕ್ರಿ. ಶ. ೧೬೫೮–೧೭೦೭) ಇವನು ಷಾಹೆಜಹಾನನ ೩ನೇ ಮಗ ದಕ್ಷಿಣ ಹಿಂದುಸ್ಥಾನದ **ಖಿಡಕಿಯನ್ನು** (**ಔರಂಗಾಬಾದ**) ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ. ಶ. ೧೬೩೬ರಿಂದ ೧೬೪೪ರ ವರೆಗೆ ದಕ್ಷಿಣದ ಸುಬೇದಾರನಾಗಿದ್ದನು. ಮುಂದೆ ಜಹಂಗೀರನು ಖಾಯಿಲೆ ಬಿದ್ದಾಗ ಸೋದರರಲ್ಲಿ ಕಲಹ ಹುಟ್ಟಲು ಶೂರನೂ, ಕಪಟಿಯೂ, ಧರ್ಮಾಭಿಮಾನಿಯೂ ಆದ ಇವನ ತನ್ನ ಸೋದರರನ್ನೆಲ್ಲಾ ಮೋಸಗೊಳಿಸಿ ಕೊಂದು ತಾನೇ ಕ್ರಿ. ಶ. ೧೬೫೮ರಲ್ಲಿ ದಿಲ್ಲಿಯ ಪಟ್ಟವನ್ನೇರಿದನು.

ಔರಂಗಜೇಬನ ಮೊದಲಿನ ಹೆಸರು ಮೊಹಮ್ಮದ್ ಮೋಹಿಯುದ್ದೀನ ಎಂದಿತ್ತು. ನಂತರ ಷಾಹೆಜಹಾನನು ಇವನನ್ನು **ಅಲಂಗೀರ** (ಜಗತ್ತನ್ನು ಗೆಲ್ಲುವವ), ಎಂಬ ಹೆಸರಿನಿಂದ ಕರೆದನು. ಮುಂದೆ ಇವನು

ಸಿಂಹಾಸನವೇರಲು **ಔರಂಗಜೇಬ** (ಸಿಂಹಾಸನಕ್ಕೆ ಭೂಷಣ) ಎಂದು ಹೆಸರಿಟ್ಟುಕೊಂಡನು.

ಇವನು ಪರಧರ್ಮ ದ್ವೇಷಿಯಾಗಿದ್ದರಿಂದ ಹಿಂದೂಗಳಮೇಲೆ ಅನನ್ವಿತ ಅತ್ಯಾಚಾರ ನಡೆಯಿಸಿದನು. ಇದರಿಂದ ಹಿಂದೂಗಳಿಂದ ಪ್ರಬಲ ಪ್ರತಿಭಟನೆಯುಂಟಾಯಿತು. ಅಲ್ಲಲ್ಲಿ ಎದ್ದ ದಂಗೆಗಳು ತುಳಿಯಲ್ಪಟ್ಟರೂ, ಹಿಂದೂಗಳ ಸಹಕಾರವಿಲ್ಲದೆ ಆಡಳಿತೆಯಲ್ಲಿ ಸಡಿಲುಂಟಾಗಿ ಔರಂಗಜೇಬನ ಮರಣಾನಂತರ ಮೊಗಲ ಸಾಮ್ರಾಜ್ಯದ ಇತಿಶ್ರೀಗೇ ( ನಾಶಕ್ಕೆ ) ಕಾರಣ ವಾಯಿತು. ಔರಂಗಜೇಬನ ವಿರುದ್ಧ ಹೋರಾಡಿದವರೆಂದರೆ ಜಾಟರ ಜಮೀನುದಾರನಾದ **ಗೊಕುಲ** ನೆಂಬುವನು ( ೧೬೬೯ ), ಶೀಖರ ಗುರು **ತೇಜಬಹದ್ದೂರ್** (೧೬೭೫), **ಗೋವಿಂದಸಿಂಗನ** ಮಕ್ಕಳು ಇವರೆಲ್ಲಾ ಮರಣ ದಂಡನೆಗೆ ಗುರಿಯಾದರು. ಆದರೇನು ಇಡೀ ಜನಜಂಗುಳಿಯೇ ಅಧರ್ಮವನ್ನು ಪ್ರತಿಭಟಿಸುತ್ತಿರುವಾಗ ಇಂತಹ ಅತ್ಯಾಚಾರದಿಂದ ಶಾಂತಿ ನೆಲಸೀತೇ ? ಶೂರನೂ, ದಕ್ಷನೂ ಆದ ಔರಂಗಜೇಬನಿಗೆ ಪರಧರ್ಮ ಸಹಿಷ್ಣುತೆಯೊಂದಿದ್ದರೆ ಅಕಬರ್ ಬಾದಷಾಹನಿಗಿಂತಲೂ ಮಿಗಿಲಾದ ದೊರೆ ಎನಿಸಿಕೊಳ್ಳಬಹುದಿತ್ತು. ಔರಂಗಜೇಬನ ಇನ್ನೊಂದು ಆತ್ಮಘಾತಕ ವೃತ್ತಿ ಯೆಂದರೆ ಮೊಗಲ ಸಾಮ್ರಾಜ್ಯದ ಬಲಗೈಯಂತಿದ್ದ ರಜಪೂತರನ್ನು ಎದುರು ಗೆಡವಿಕೊಂಡುದು. ಕಾಬೂಲದಲ್ಲಿ ಔರಂಗಜೇಬನ ಸುಬೇದಾರನಾಗಿದ್ದ **ಜಸವಂತಸಿಂಗನು** ಮರಣ ಹೊಂದಲು ಅವನ ಹೆಂಡತಿ ಮಕ್ಕಳನ್ನು ಸೆರೆ ಹಿಡಿದಿಟ್ಟನು. ಆಗ **ದುರ್ಗಾದಾಸ**ನೆಂಬ ಶೂರ ಸರದಾರನು ಇವರನ್ನು ಉಪಾಯದಿಂದ ಬಿಡಿಸಿಕೊಂಡು ಬಂದು ಜೋಧಪುರದಲ್ಲಿ **ಅಜಿತ್‌ಸಿಂಹ** ನನ್ನು ಪಟ್ಟಕ್ಕೆ ಕೂಡಿಸಿದನು. ಹೀಗೆ ರಜಪೂತರೆಲ್ಲರೂ ಒಟ್ಟುಗೂಡಿ ಪ್ರತಿಭಟಿಸಹತ್ತಿದರು. ದಕ್ಷಿಣ ಹಿಂದುಸ್ಥಾನದಲ್ಲಿ ಮರಾಠರು ಪ್ರಬಲ ರಾದರು. ಹೀಗಾಗಿ ಔರಂಗಜೇಬನ ಆಳಿಕೆಯ ಕಾಲವೆಲ್ಲಾ ವ್ಯರ್ಥ ಯುದ್ಧದಲ್ಲಿಯೇ ಹೋಯಿತು. ಔರಂಗಜೇಬನು ತನ್ನ ಮರಣ ಸಮಯ ದಲ್ಲಿ ತನ್ನ ತಪ್ಪುಗಳಿಗಾಗಿ ಪರಿತಪಿಸಿದಂತೆ ತೋರುವುದು. ಇವನು ಕ್ರಿ. ಶ. ೧೭೦೭ರಲ್ಲಿ ಮರಣ ಹೊಂದಿದನು.

**೧೩. ಬಹದ್ದೂರ್ ಷಾಹ** :— ಇವನು ಮೊಗಲ ವಂಶದ ಕೊನೆಯ ದೊರೆ. ಔರಂಗಜೇಬನ ತರುವಾಯ ಬಂದ ಅರಸರೆಲ್ಲಾ

ಅಸಮರ್ಥರಾಗಿದ್ದುದರಿಂದ ಇವರ ಮೇಲೆ ಸಯ್ಯದ ಬಂಧುಗಳು, ನಿಜಾಮು ಉಲ್ಮುಲ್ಕ್ ಮತ್ತು ಪೇಶ್ವೆಯರ ವರ್ಚಸ್ಸು ಬೆಳೆದಿತ್ತು. ಕ್ರಿ. ಶ. ೧೮೫೮ರಲ್ಲಿ ಇಂಗ್ಲೀಷರು ಬಹದ್ದೂರ್‌ಷಾಹನ ಮೇಲೆ ಬಂಡಾಯದಲ್ಲಿ ಸೇರಿದ ಆರೋಪ ಹೊರಿಸಿ ಅವನನ್ನು ಸೆರೆಯಲ್ಲಿಟ್ಟರು. ಇವನು ಕ್ರಿ. ಶ. ೧೮೬೨ರಲ್ಲಿ ಸಾಯಲು ಮೊಗಲವಂಶದ ಆಳಿಕೆಯು ನಿಂತುಹೋಯಿತು.

**೧೪. ರಾಣಾ ಪ್ರತಾಪಸಿಂಹ:**—ಇವನು ಚಿತ್ತೂರಿನ ರಜಪೂತ್ ಅರಸ **ಉದಯಸಿಂಹನ** ಪುತ್ರ. ಇವನು ತನ್ನ ತಂದೆ ಕಳೆದುಕೊಂಡ ರಾಜ್ಯವನ್ನು ಮತ್ತೆ ಗೆದಿಯಲು ದೃಢ ನಿಶ್ಚಯದಿಂದ ಹೋರಾಡಿದನು. **ಉದಯಪುರವು** ಅವನ ರಾಜಧಾನಿಯಾಗಿತ್ತು. ಅಕಬರ್ ಬಾದಶಹನು **ಇ**ವನ ಮನ ಒಪ್ಪಿಸಲು ಮಾಡಿದ ಪ್ರಯತ್ನವೆಲ್ಲಾ ವ್ಯರ್ಥವಾಯಿತು. ಇವನ ವಿರುದ್ಧ ದೊಡ್ಡ ಸೈನ್ಯದೊಂದಿಗೆ **ಸಲೀಮ** ಮತ್ತು **ಮಾನಸಿಂಗ**ರನ್ನು ಕಳುಹಿಸಿದನು. ಕ್ರಿ. ಶ. ೧೫೭೬ರಲ್ಲಿ **ಹಳದೀ ಘಾಟದ** ಬಳಿ ಘೋರ ಯುದ್ಧವಾಗಿ ಪ್ರತಾಪಸಿಂಹನಿಗೆ ಗಾಯಗಳಾದುವು. ಕೂಡಲೇ ಅವನು ಕುದುರೆಯನ್ನೇರಿ ಮರೆಯಾದನು. ಈ ಅಪಜಯದಿಂದ ಪ್ರತಾಪ ಸಿಂಹನು ನೊಂದು "ಚಿತ್ತೂರನ್ನು ಮರಳಿ ಗೆಲ್ಲುವವರೆಗೂ ಸುಖಭೋಗವನ್ನು ಮುಟ್ಟಲಿಕ್ಕಿಲ್ಲವೆಂದೂ, ರಾಜ ಚಿನ್ಹವನ್ನು ಧರಿಸಲಿಕ್ಕಿಲ್ಲವೆಂದೂ ಪ್ರತಿಜ್ಞೆಮಾಡಿದನು." ಇವನು ಅತುಲ ಕಷ್ಟವನ್ನನುಭವಿಸಿ ತನ್ನ ರಾಜ್ಯಗಳನ್ನು ಒಂದೊಂದಾಗಿ ವಶಪಡಿಸಿಕೊಳ್ಳತೊಡಗಿದನು. ಆದರೇನು ಅವನ ಕೊನೆಯ ಆಸೆಯಾದ ಚಿತ್ತೂರು ಮಾತ್ರ ಕೈಸೇರಲಿಲ್ಲ. ಇದೇ ಚಿಂತೆಯಲ್ಲಿಯೇ ತನ್ನ ಮರಣಕಾಲದಲ್ಲಿ ತನ್ನ ಸರದಾರರಿಂದ "ಚಿತ್ತೂರನ್ನು ಗೆದಿಯುವೆವು" ಎಂಬ ವಚನ ಪಡೆದು ಪ್ರಾಣಬಿಟ್ಟನು. ಅಂತೆಯೇ ಈ ವೀರಾಗ್ರಣಿಯ ಹೆಸರು ಭಾರತದ ಇತಿಹಾಸದಲ್ಲಿ ಅಚ್ಚಳಿಯದೇ ಉಳಿದಿದೆ.

**ಪ್ರಶ್ನೆ :— ಕೆಳಗಿನ ವಿಷಯಗಳು ತಪ್ಪೋ ಒಪ್ಪೋ ಹೇಳಿರಿ.**

೧. ಮೊಗಲರ ಆಳಿಕೆ ಅಕಬರನ ಕಾಲದಿಂದ ಆರಂಭವಾಯಿತು.

೨. ಕ್ರಿ. ಶ. ೧೫೨೭ ರ ಸಿಕ್ರಿಯ ಯುದ್ಧವು ಬಾಬರ ಮತ್ತು ಸಂಗ ರಾಣಾರ ನಡುವೆ ನಡೆದು ಸಂಗರಾಣಾನಿಗೆ ಸೋಲುಂಟಾಯಿತು.

೩. ಹುಮಾಯೂನನು ಬಹದ್ದೂರಷಾಹನನ್ನು ಮುಂದೇಶ್ವರದ ಬಳಿಯಲ್ಲಿ ಸೋಲಿಸಿದನು.

೪. ಷೇರ್‌ಖಾನನು ಹುಮಾಯೂನನ ಮಿತ್ರ.

೫. ಸೂರ್ ಮನೆತನದ ಆಳಿಕೆ ಸಿಕಂದರ್‌ಷಾಹನ ಕಾಲದಿಂದ ಆರಂಭವಾಯಿತು.

೬. ಔರಂಗಜೇಬನು ಶಾಹುವಿನ ಬಿಡುಗಡೆ ಮಾಡಿದನು.

೭. ಅಕಬರನ ಜನ್ಮ ಕಿ. ಶ ೧೫೪೨ರಲ್ಲಿ ಉಮರ್ ಕೋಟಿನಲ್ಲಿ ಆಯಿತು.

೮. ಹುಮಾಯೂನನು ಮತ್ತೆ ರಾಜ್ಯ ದೊರಕಿಸಲು ಅವನ ಸಹೋದರರು ಸಹಾಯ ಮಾಡಿದರು.

೯. ಅಕಬರನು ಬೈರಾಮಖಾನನನ್ನು ಕೊಂದನು.

೧೦. ಕ್ರಿ. ಶ. ೧೫೫೬ರಲ್ಲಿ ೨ನೇ ಪಾನೀಪತ್ತದ ಯುದ್ಧವು ಅಕಬರನ ಸೇನಾಪತಿ ಬೈರಾಮಖಾನ ಮತ್ತು ಹೇಮೂವಿನ ನಡುವೆ ನಡೆಯಿತು.

೧೧. ಅಕಬರನ ಆಸ್ಥಾನದಲ್ಲಿ ಬಹಿರಾಮಖಾನ, ರಾಜಾ ತೋಡರಮಲ್ಲ. ಬೀರಬಲ್ಲ, ಅಬ್ದುಲ್‌ಫಜಲ್, ಫೈಜಿ, ರಾಜಾಮಾನಸಿಂಗ, ತಾನಸೇನ, ಮುಲ್ಲಾ–ದುಪ್ಯಾಜಾ, ಹಕೀಮ ಹುಮಾನ ಇವರು ನವರತ್ನಗಳಾಗಿದ್ದರು.

೧೨. ರಾಣಾ ಪ್ರತಾಪಸಿಂಹನು ಚಿತ್ತೂರನ್ನು ಮತ್ತೆ ವಶಪಡಿಸಿಕೊಂಡನು.

೧೩. ಮೆಹರುನ್ನಿಸಾಳು ೨ ಬಾರೆ ಮದುವೆಯಾಗಿದ್ದಳು.

೧೪. ಜಹಂಗೀರನು ತನ್ನ ಪತ್ನಿಯ ನೆನಹಿಗಾಗಿ ತಾಜ್‌ಮಹಾಲ್ ಕಟ್ಟಿಸಿದನು.

೧೫. ಔರಂಗಜೇಬನು ಕುಡುಕನೂ, ಮಂದುಗಾರನೂ ಆಗಿದ್ದನು.

**ಉತ್ತರಗಳು :—** (೧) ಅಲ್ಲ, (೨) ಹೌದು, (೩) ಹೌದು, (೪) ಅಲ್ಲ, (೫) ಅಲ್ಲ, (೬) ಅಲ್ಲ, (೭) ಹೌದು, (೮) ಅಲ್ಲ, (೯) ಅಲ್ಲ, (೧೦) ಹೌದು, (೧೧) ಹೌದು, (೧೨) ಅಲ್ಲ, (೧೩) ಹೌದು, (೧೪) ಅಲ್ಲ, (೧೫) ಅಲ್ಲ.

**ಪ್ರಶ್ನೆ :— ಕೆಳಗಿನ ಪ್ರಶ್ನೆಗಳಿಗೆ ಒಂದೇ ವಾಕ್ಯದಲ್ಲಿ ಉತ್ತರ ಬರೆಯಿರಿ.**

(೧) ಪಾಣೀಪತ್ತದ ಮೊದಲನೇ ಯುದ್ಧದಿಂದ ಯಾವ ಮಹತ್ವದ ಪರಿಣಾಮವಾಯಿತು ?

(೨) ಬಾಬರನು ಸೆರೆಗುಡಿಯುವುದಿಲ್ಲವೆಂದು ಏಕೆ ಪ್ರತಿಜ್ಞೆ ಮಾಡಿದನು ?

(೩) ಷೇರ್‌ಷಾಹನ ಮುಖ್ಯ ಸುಧಾರಣೆಗಳಾವುವು ?

(೪) ಹುಮಾಯೂನನು ತನ್ನ ರಾಜ್ಯವನ್ನು ಮತ್ತೆ ಹೇಗೆ ದೊರಕಿಸಿ ಕೊಂಡನು ?

(೫) ಅಕಬರ ಬಾದಶಹನು "ದಿನೇ-ಇಲಾಹಿ" ಧರ್ಮವನ್ನು ಸ್ಥಾಪಿಸಿದನು ಏಕೆ ?

(೬) ಅಕಬರನ ರಾಜ್ಯ ಪ್ರಬಲವಾಗಿ ಉಳಿಯಲು ಕಾರಣವೇನು ?

(೭) ನೂರ್‌ಜಹಾನಳೇ ರಾಜ್ಯಭಾರವನ್ನು ಏಕೆ ನಡೆಸುತ್ತಿದ್ದಳು ?

(೮) ಜಹಂಗೀರನಿಂದ ಇಂಗ್ಲೀಷರಿಗೆ ಸವಲತ್ತು ದೊರೆಯಲು ಕಾರಣವೇನು ?

(೯) ಷಾಹೆಜಹಾನನಿಗೆ "ಭವ್ಯ ಕಟ್ಟಡಗಳ" ನಿರ್ಮಾಪಕ ಎನ್ನಲು ಕಾರಣವೇನು?

(೧೦) ಔರಂಗಜೇಬನ ಆಳಿಕೆಯ ಕಾಲದಲ್ಲಿ ಜನಜೀವನ ಸ್ಥಿತಿ ಹೇಗಿತ್ತು ?

(೧೧) ಸಯ್ಯದ್ ಬಂಧುಗಳ ಮಹತ್ವ ಬೆಳೆಯಲು ಕಾರಣವೇನು ?

(೧೨) ಶಿವಾಜಿಯು ಔರಂಗಜೇಬನ ಸೆರೆಯಿಂದ ಹೇಗೆ ತಪ್ಪಿಸಿ ಕೊಂಡನು ?

(೧೩) ಶಿವಾಜಿಯು ಔರಂಗಜೇಬನ ಊಳಿಗಕ್ಕೆ ನಿಲ್ಲಲು ಕಾರಣವೇನು?

(೧೪) ಶೀಖರಲ್ಲಿ ಕ್ಷಾತ್ರಾವೃತ್ತಿಯನ್ನು ಯಾರು ಬಿತ್ತಿದರು?

(೧೫) ವಿಜಾಪುರದ ಆದಿಲ್‌ಶಾಹನು ಶಹಾಜಿಯನ್ನು ಸೆರೆಯಲ್ಲಿಡಲು ಕಾರಣವೇನು ?

(೧೬) ಸೀಖ ಧರ್ಮಸ್ಥಾಪನೆಯ ಉದ್ದಿಶ್ಯವೇನು ?

(೧೭) ಅಬ್ದುಲ್ ಫಜಲನು ಅಕಬರನ ಬಗ್ಗೆ ಬರೆದ ಎರಡು ಪುಸ್ತಕಗಳು ಯಾವುವು ಮತ್ತು ಅವುಗಳಲ್ಲೇನಿದೆ ?

(೧೮) ಔರಂಗಜೇಬನು ಶಿವಾಜಿಯ ಪಾರುಪತ್ಯ ಮಾಡಲು ಯಾರನ್ನು ಕಳಿಸಿದ್ದನು ?

(೧೯) ಅಕಬರ್ ಬಾದಶಹನು ಕೈಕೊಂಡ ಮುಖ್ಯ ಸುಧಾರಣೆಗಳಾವುವು ?

(೨೦) ನೂರಜಹಾನಳು ತನ್ನ ಎದುರಾಳಿಗಳನ್ನು ಅಡಗಿಸಲು ಮಾಡಿದ ಉಪಯೋಗಗಳೇನು ?

**ಉತ್ತರ:**—(೧) ಪಾಣೀಪತ್ತದ ೧ನೇ ಯುದ್ಧದಿಂದ ಪಠಾಣರ ಆಳಿಕೆ ಕೊನೆಗೊಂಡು ಮೊಗಲರ ಆಳಿಕೆ ಆರಂಭವಾಯಿತು.

(೨) ಮೊದಲು ಬಾಬರನು ಸೆರೆ ಕುಡಿಯುತ್ತಿದ್ದುದರಿಂದ ತನ್ನ ಕೆಲಸದ ಕಡೆ ಸಾಕಷ್ಟು ಎಚ್ಚರಿಕೆ ವಹಿಸದೇ ಕ್ರಿ. ಶ. ೧೫೨೭ರ ಸಿಕ್ರಿಯ ಯುದ್ಧದಲ್ಲಿ ಸೋಲುಂಟಾಗುವ ಸಂಭವವೊದಗಲು, ಬಾಬರನು ಎಚ್ಚತ್ತು "ದೇವರೇ ಈ ಯುದ್ಧದಲ್ಲಿ ನನಗೆ ಜಯಕೊಡು, ನಾನಿನ್ನೆಂದೂ ಸೆರೆಕುಡಿಯುವುದಿಲ್ಲ'' ಎಂದು ಪ್ರತಿಜ್ಞೆಮಾಡಿದನು.

(೩) ಷೇರ್‌ಖಾನನು ತನ್ನ ರಾಜ್ಯದ ಭೂಮಿಯನ್ನೆಲ್ಲಾ ಅಳೆಯಿಸಿ ತೆರಿಗೆ ಗೊತ್ತುಮಾಡುವುದು, ಕುದುರೆಯ ಮೇಲೆ ಟಪಾಲು ಸಾಗಿಸುವುದು, ರಾಜಮಾರ್ಗ ನಿರ್ಮಾಣ, ಕಳ್ಳಕಾಕರ ಭಯ ತಪ್ಪಿಸಲು ಪೋಲಿಸ್ ಖಾತೆಯ ನಿರ್ಮಾಣ, ಮತ್ತು ಸಮರ್ಥ ಆಡಳಿತೆಯ ವ್ಯವಸ್ಥೆ ಮುಂತಾದ ಸುಧಾರಣೆಗಳನ್ನು ಮಾಡಿದನು.

(೪) ಹುಮಾಯೂನನು ಇರಾಣದಲ್ಲಿ ಶಿಯಾ ಪಂಥವನ್ನು ಸ್ವೀಕರಿಸಿ ಅಲ್ಲಿಯ ಅರಸನಿಂದ ೧೪೦೦೦ ಸೈನ್ಯವನ್ನು ಪಡೆದು ಹಿಂತಿರುಗಿ ತನ್ನ ಸೋದರರನ್ನೂ, ಸಿಕಂದರ ಶೂರನನ್ನೂ ಸೋಲಿಸಿ ತಾನು ಕಳೆದ ರಾಜ್ಯವನ್ನು ಮರಳಿ ಪಡೆದುಕೊಂಡನು.

(೫) ಅಕಬರನು ಹಿಂದು ಮುಸ್ಲಿಮರಲ್ಲಿಯ ಮತಭೇದವನ್ನು ಹೋಗಲಾಡಿಸಲು ಎಲ್ಲ ಧರ್ಮಗಳಲ್ಲಿಯ ಒಳ್ಳೇ ತತ್ವಗಳನ್ನು ಆಯ್ದುಕೊಂಡು "ದೀನ್-ಏ-ಇಲಾಹಿ'' ಎಂಬ ಹೊಸ ಧರ್ಮವನ್ನು ಸ್ಥಾಪಿಸಿದನು.

(೬) ಅಕಬರನು ತನ್ನ ಪ್ರಜೆಗಳನ್ನೆಲ್ಲಾ ಒಂದೇ ಸಮಾನನಾಗಿ ಕಾಣುತ್ತಿದ್ದುದರಿಂದಲೂ, ರಜಪೂತ್ ಅರಸರೊಡನೆ ರಕ್ತಸಂಬಂಧ ಬೆಳೆಸಿದುದರಿಂದಲೂ, ಸಮರ್ಥ ಜನರ ನೆರವು ದೊರೆತು ರಾಜ್ಯವು ಪ್ರಬಲವಾಗಿ ಉಳಿದಿದ್ದಿತು.

(೭) ಜಹಂಗೀರನು ಕುಡುಕನಾದುದರಿಂದ ತನ್ನ ವ್ಯಸನ ಮತ್ತು ಹೆಂಡತಿಯ ರೂಪಿಗೆ ಮರುಳಾಗಿ ಎಲ್ಲ ಆಡಳಿತೆಯನ್ನೂ ದಕ್ಷಳೂ, ಶೂರಳೂ ಆದ ನೂರ್‌ಜಹಾನಳ ಕಡೆ ಬಿಟ್ಟುಕೊಟ್ಟಿದ್ದನು.

(೮) ಪೋರ್ತುಗೀಜರು ಮದಾಂಧರಾಗಿ ಮೊಗಲರ ಹಡಗುಗಳನ್ನು ಹಿಡಿದಿಡಲು. ಇಂಗ್ಲೀಷರು ಯುದ್ಧದಲ್ಲಿ ಜಂಗೀರನಿಗೆ ಸಹಾಯ ಮಾಡಲು ಮುಂದೆ ಬಂದಿದ್ದರಿಂದ ಅವನು ಇಂಗ್ಲೀಷರಿಗೆ ಸವಲತ್ತುಗಳನ್ನು ಕೊಟ್ಟನು.

(೯) ಷಾಹೆಜಹಾನನು **ತಾಜಮಹಲ್, ಮೋತೀಮಶೀದೆ, ಶಾಹಬುರ್ಜ್, ದಿವಾನ್-ಈ-ಖಾಸ್,** ಮೊದಲಾದ ಭವ್ಯ ಕಟ್ಟಡಗಳನ್ನು ಕಟ್ಟಿಸಿದ್ದರಿಂದ ಇವನಿಗೆ "ಭವ್ಯ ಕಟ್ಟಡಗಳ" ನಿರ್ಯಾಪಕ ಎಂಬ ಹೆಸರು ಬಂದಿತ್ತು.

(೧೦) ಔರಂಗಜೇಬನ ಆಡಳಿತೆಯ ಕಾಲದಲ್ಲಿ ಹಿಂದೂ ಜನರಿಗೆ ಧಾರ್ಮಿಕ ಅಡಚಣೆಯೊಂದನ್ನು ಬಿಟ್ಟರೆ ಜನಜೀವನ ಸರ್ವವಿಧದಿಂದಲೂ ಪ್ರಗತಿಕಾರಕವಿತ್ತು.

(೧೧) ಔರಂಗಜೇಬನ ತರುವಾಯ ಬಂದ ಮೊಗಲ ಅರಸರು ದುರ್ಬಲರಿದ್ದುದರಿಂದ ಸೈಯ್ಯದ್ ಬಂಧುಗಳ ವರ್ಚಸ್ಸು ಹೆಚ್ಚಿ ತಮಗೆ ಬೇಕಾದವರನ್ನು ಸಿಂಹಾಸನದ ಮೇಲೆ ಕೂಡಿಸುವುದು, ಪದಚ್ಯುತಗೊಳಿಸುವುದು ಮಾಡಹತ್ತಿದ್ದರು.

(೧೨) ಶಿವಾಜಿಯು ತಾನು ರೋಗಗ್ರಸ್ತನಾಗಿರುವುದಾಗಿಯೂ ಅದರ ಪರಿಹಾರಕ್ಕಾಗಿ ಮಿಠಾಯಿಯ ದಾನ ಮಾಡುವುದಾಗಿಯೂ ತಿಳಿಸಿ, ತಾನಿದ್ದಲ್ಲಿಗೆ ಮಿಠಾಯಿಯ ಬುಟ್ಟಿ ತರಿಸುವುದು ಕಳಿಸುವದು ಮಾಡಹತ್ತಿ, ಒಂದು ದಿನ ಒಂದು ಬುಟ್ಟಿಯಲ್ಲಿ ಕುಳಿತು ಔರಂಗಜೇಬನ ಸೆರೆಯಿಂದ ತಪ್ಪಿಸಿಕೊಂಡನು.

(೧೩) ಕ್ರಿ. ಶ. ೧೬೬೦ ರಲ್ಲಿ ಶಿವಾಜಿಗೆ ಮೊಗಲರೊಡನೆ ಯುದ್ಧದಲ್ಲಿ ಸೋಲುಂಟಾಗಲು, ಅವನು ಪುರಂದರದಲ್ಲಿ ಒಪ್ಪಂದ ಮಾಡಿಕೊಂಡು ಔರಂಗಜೇಬನಲ್ಲಿ ಊಳಿಗಕ್ಕೆ ನಿಂತನು.

(೧೪) ಕ್ರಿ. ಶ. ೧೬೭೬ ರಲ್ಲಿ ಶೀಖರ ಗುರುವಾದ ತೇಜಬಹಾದ್ದೂರನನ್ನು ಔರಂಗಜೇಬನು ಕ್ರೂರವಾದ ಮರಣದಂಡನೆಗೆ ಗುರಿಮಾಡಲು, ಶೀಖರ ಕ್ಷಾತ್ರಾಪ್ರವೃತ್ತಿಯನ್ನು ಕೆರಳಿಸಿ ಗುರು ಗೋವಿಂದಸಿಂಗನು ಶೀಖರಿಗೆಲ್ಲಾ " ರಣದೀಕ್ಷೆಯನ್ನು ಕೊಟ್ಟನು. "

(೧೫) ಶಿವಾಜಿಯ ಪ್ರಾಬಲ್ಯಕ್ಕೆ ಶಹಾಜಿಯೇ ಕಾರಣನೆಂದು ಅವನನ್ನು ಆದಿಲ್‌ಶಾಹನು ಸೆರೆಹಿಡಿದಿಟ್ಟನು.

(೧೬) ಹಿಂದೂ ಮುಸಲ್ಮಾನರಲ್ಲಿಯ ಪರಸ್ಪರ ವೈರಭಾವವನ್ನು ಹೋಗಲಾಡಿಸಲು, ಮಾನವ ಸಮಾನತೆ ಮತ್ತು ಎಕೇಶ್ವರೀ ತತ್ವದ ಆಧಾರದ ಮೇಲೆ ಶೀಖ ಧರ್ಮವನ್ನು ಗುರು ನಾನಕರು ಸ್ಥಾಪಿಸಿದರು.

(೧೭) ಅಬ್ದುಲ್‌ಫಜಲನು "ಅಕ್ಬರನಾಮಾ" ಮತ್ತು "ಆಯಿನ್-ಇ-ಅಕ್ಬರಿ" ಎಂಬ ಗ್ರಂಥಗಳನ್ನು ಬರೆದಿದ್ದು, ಇವುಗಳಲ್ಲಿ ಅಕಬರನ ಜೀವನಚರಿತ್ರೆ ಮತ್ತು ರಾಜ್ಯಭಾರ ಕ್ರಮದಬಗ್ಯೆ ಬರೆಯಲಾಗಿದೆ.

(೧೮) ಔರಂಗಜೇಬನು ಶಿವಾಜಿಯ ಪಾರುಪತ್ಯಮಾಡಲು ಮೊದಲನೇ ಬಾರಿ ಶಾಯಿಸ್ತೆಖಾನನನ್ನೂ, ಎರಡನೇ ಬಾರಿ ಜಯಸಿಂಹ ಮತ್ತು ದಿಲೇರಖಾನರನ್ನೂ ದೊಡ್ಡ ಸೈನ್ಯದೊಂದಿಗೆ ಕಳಿಸಿದ್ದನು.

(೧೯) ಹಿಂದೂಗಳಲ್ಲಿ ಸತಿ ಹೋಗಲು ಒತ್ತಾಯಪಡಿಸುವುದನ್ನು ತಡೆಯುವದು, ಭೂಮಿಯ ವಿಸ್ತೀರ್ಣ ಮತ್ತು ಬೆಳೆಗೆ ಅನುಸರಿಸಿ ತೆರಿಗೆ ಗೊತ್ತುಮಾಡಿದುದು, ರಾಜ್ಯವನ್ನು ಜಿಲ್ಲೆ ಮತ್ತು ತಾಲೂಕಗಳಲ್ಲಿ ವಿಂಗಡಿಸಿ ಆಡಳಿತಾಧಿಕಾರಿಗಳನ್ನೂ ನೇಮಿಸಿದುದು, ವಿಧವಾ ವಿವಾಹಕ್ಕೆ ಪ್ರೋತ್ಸಾಹನ, ಬಾಲ ವಿವಾಹ ಮತ್ತು ಮದ್ಯಪಾನ ನಿಷೇಧ ಇವೇ ಅಕಬರನು ಕೈಕೊಂಡ ಸುಧಾರಣೆಗಳು.

(೨೦) ನೂರ್‌ಜಹಾನಳು ತನ್ನ ಎದುರಾಳಿಗಳನ್ನು ಅಡಗಿಸಲು ರಾಜಮನೆತನದವರಿಗೆ ತನ್ನ ಸನಿಹದವರ ಕನ್ಯೆಯರನ್ನು ಕೊಡಿಸಿ ಅವರ ಪ್ರೇಮಗಳಿಸಿದಳಲ್ಲದೆ, ಅಧಿಕಾರಿಗಳ ವರ್ಚಸ್ಸು ಬೆಳೆಯದಂತೆ ಅವರನ್ನು

ದೂರ ಕಳುಹಿಸುವದು ಇಲ್ಲವೇ ಪದಚ್ಯುತಗೊಳಿಸುವುದು ಮುಂತಾದ ಕ್ರಮಗಳನ್ನು ಕೈಕೊಂಡಳು.

---

# ಭಕ್ತಿಪಂಥ

**ಪ್ರಶ್ನೆ :—ಕೆಳಗೆ ಕೊಟ್ಟವರ ಬಗ್ಗೆ ನಾಲ್ಕು ವಾಕ್ಯಗಳಲ್ಲಿ ಟಿಪ್ಪಣಿ ಬರೆಯಿರಿ.**

(೧) ಆಳ್ವಾರರು, (೨) ಪೆರಿಯಾಳ್ವಾರ್, (೩) ತಿರುಪ್ಪಣಾಳ್ವಾರ್, (೪) ಪುರಂದರದಾಸರು, (೫) ಕನಕದಾಸರು, (೬) ಜ್ಞಾನದೇವ, (೭) ಏಕನಾಥ, (೮) ತುಕಾರಾಮ, (೯) ರಾಮದಾಸ್. (೧೦) ನರಸಿಂಹ ಮೆಹತಾ (೧೧) ಬಂಗಾಲದ ಚೈತನ್ಯ, (೧೨) ಮೇವಾಡದ ಮೀರಾಬಾಯಿ, (೧೩) ಕಾಸಿಯ ತುಳಸೀದಾಸ

**ಉತ್ತರ :—೧. ಆಳ್ವಾರರು** ಇವರು ದಕ್ಷಿಣ ಹಿಂದುಸ್ಥಾನದಲ್ಲಿ ಸುಮಾರು ೭ರಿಂದ ೯ನೇ ಶತಮಾನದಲ್ಲಿ ಆಗಿಹೋದ ವೈಷ್ಣವರು (ವಿಷ್ಣು ಪೂಜಕರು). ಆಳ್ವಾರರಾದ ೧೨ ಜನರೂ ಹುಟ್ಟಿನಿಂದ ಬೇರೆಬೇರೆಯಾಗಿದ್ದರೂ ಜ್ಞಾನೋದಯವಾದಮೇಲೆ ಒಂದೇ ಸಂತತಿಯವರಾದರು. ವಿಷ್ಣುವೂ ಅವನ ದಶಾವತಾರಗಳೂ ಇವರ ಆರಾಧ್ಯದೇವತೆಗಳು. ಆಳ್ವಾರ್ ಎಂದರೆ ಭಕ್ತಿಸಾಗರದಲ್ಲಿ ಮುಳುಗಿದವರು ಅಥವಾ ಸ್ವಾಮಿಗಳು ಎಂದರ್ಥ.

**೨. ಪೆರಿಯಾಳ್ವರ್ :—** ಮದ್ರಾಸ್ ಪ್ರಾಂತದ ತಿನ್ನವೆಲ್ಲಿ ಜಿಲ್ಲೆಯ ಪುತ್ತೂರು ಗ್ರಾಮದಲ್ಲಿ ಇವರು ಹುಟ್ಟಿದರು. ಚಿಕ್ಕಂದಿನಿಂದಲೂ ಇವರು ಶ್ರೀಮನ್ನಾರಾಯಣನ ಭಕ್ತರಾಗಿ, ಭಜನೆಗೋಸ್ಕರವೇ ಶಾಂತ ಸ್ಥಳದಲ್ಲಿ ಒಂದು ಕುಟೀರವನ್ನು ಕಟ್ಟಿಕೊಂಡಿದ್ದರು. ಇವರು ದೇವರ ಆದೇಶದಂತೆ ಮಧುರೆಯಲ್ಲಿಯ ವಿದ್ವಾಂಸರ ಪರಿಷತ್ತಿಗೆ ಹೋಗಿ, ಅಲ್ಲಿ ವಾದದಲ್ಲಿ ಎದುರಾಳಿಗಳನ್ನು ಸೋಲಿಸಿ ವೈಷ್ಣವ ಪಂಥವನ್ನು ಎತ್ತಿಹಿಡಿದರು. ಶ್ರೀಮನ್ನಾರಾಯಣನ ಭಜನೆಯೇ ಮುಕ್ತಿಮಾರ್ಗಕ್ಕೆ ಸಾಧನವೆಂಬುದು ಇವರ ತತ್ವಪ್ರಣಾಲಿ.

**೩. ತಿರುಪ್ಪಣಾಳ್ವಾರ್ :—** ಇವರು ಶ್ರೀರಂಗದಲ್ಲಿ ರಂಗನಾಥ ಸ್ವಾಮಿಯ ದೇವಾಲಯದ ಎದುರಿಗೆ ಗುಡಿಸಲು ಕಟ್ಟಿಕೊಂಡು ಗಾಯನ

ಮಾಡುತ್ತಿದ್ದರು. ಹೀನ ಕುಲದವರಾದ್ದರಿಂದ ಇವರು ದೇವಾಲಯವನ್ನು ಪ್ರವೇಶಿಸದೆ ಒಮ್ಮೆ ದೇವಾಲಯದ ಹೊರಗೆ ಕುಳಿತು ಗಾಯನದಲ್ಲಿ ಮಗ್ನರಾದಾಗ ಅರ್ಚಕನು ಇವರಿಗೆ ದೂರ ಸರಿಯಲು ಹೇಳಲು ಅದು ಕೇಳಿಸದೇ ಧ್ಯಾನಾಸಕ್ತರಾಗಿದ್ದರು. ಆಗ ಅರ್ಚಕನು ಸಿಟ್ಟಿನಿಂದ ಅವರ ತಲೆಗೆ ಗಾಯಗೊಳಿಸಲು, ದೇವರು ಅರ್ಚಕನ ಕನಸಿನಲ್ಲಿ ಬಂದು ತನ್ನ ಭಕ್ತನ ಹಣೆಗೆ ಎಸೆದಕಲ್ಲು ತನಗೆ ತಾಗಿತೆಂದೂ, ಇದರ ಪ್ರಾಯಶ್ಚಿತ್ತಕ್ಕಾಗಿ ತಿರುಪ್ಪಣಾಳ್ವಾರ್‌ರವರನ್ನು ಹೆಗಲಮೇಲೆ ಕೂಡಿಸಿಕೊಂಡು ತನ್ನ ಸಾನಿಧ್ಯಕ್ಕೆ ತರಬೇಕೆಂದೂ ಆಜ್ಞೆ ಮಾಡಿದನಂತೆ. ತಿರುಪ್ಪಣಾಳ್ವಾರರಿಗೆ ದೇವರ ಸಾಕ್ಷಾತ್ಕಾರವಾಗಿ ಮಹಾನುಭಾವರೆನಿಸಿಕೊಂಡರು.

೪. **ಪುರಂದರದಾಸರ** ಮೂಲ ಹೆಸರು ಚಿನಿವಾಲ ಶ್ರೀನಿವಾಸ ನಾಯಕ. ಇವರು ಸದಾಚಾರಿಗಳಾಗಿದ್ದರೂ ಮಹಾಜಿಪುಣರಾದ್ದರಿಂದ ಇದನ್ನು ಬಿಡಿಸಲು ಶ್ರೀಹರಿಯು ಈ ನಾಯಕನ ಹೆಂಡತಿಯ ಹತ್ತಿರ ಬ್ರಾಹ್ಮಣನ ವೇಷದಲ್ಲಿ ಬಂದು ಭಿಕ್ಷೆ ಬೇಡಲು, ಅವಳಲ್ಲಿ ನತ್ತಿನಹೊರತು ಬೇರೇನು ಇಲ್ಲದ್ದರಿಂದ ಅದನ್ನೇ ದಾನ ಮಾಡಿದಳು. ಬ್ರಾಹ್ಮಣನು ನಾಯಕನಲ್ಲಿಯೇ ನತ್ತನ್ನು ಒತ್ತೆಯಿಡಲು ಬರಲು ಇದು ತನ್ನ ಹೆಂಡತಿಯದೇ ಎಂಬುದು ತಿಳಿದು ಅವರು ಮನೆಗೆ ಹೋಗಿ ಹೆಂಡತಿಯನ್ನು ವಿಚಾರಿಸಲು, ಅವಳು ಹೆದರಿ ಒಳಗಡೆ ಹೋಗಿ ಒಂದು ಬಟ್ಟಲಲ್ಲಿ ವಿಷ ಕುಡಿಯಲು ಪ್ರಯತ್ನಿಸಲು ನತ್ತು ಆ ಬಟ್ಟಲಿನಲ್ಲಿ ಬಂದು ಬಿದ್ದಿತು. ಆಕೆಯು ಆನಂದದಿಂದ ನತ್ತನ್ನು ಗಂಡನಿಗೆ ತೋರಿಸಲು ಇದೆಲ್ಲವೂ ಶ್ರೀಹರಿಯ ಮಾಯೆ ಎಂದು ತಿಳಿದು, ಅಂದಿನಿಂದ ಹಣದಾಸೆಯನ್ನು ಬಿಟ್ಟು ಭಕ್ತಿರಸಗೀತೆಗಳನ್ನು ಹಾಡುತ್ತ

೫. **ಕನಕದಾಸರು:**—ಇವರು ತಳವಾರ ಜಾತಿಯಲ್ಲಿ ಹುಟ್ಟಿದ್ದರೂ ಸದಾಚಾರ ಮತ್ತು ದೇವಭಕ್ತಿಯಿಂದ "ದೇವರಿಗೆ ಬೇಕಾದುದು ಜಾತಿಯಲ್ಲ ಭಕ್ತಿ" ಎಂಬುದನ್ನು ಸಿದ್ಧಮಾಡಿ ತೋರಿಸಿದರು. ಒಮ್ಮೆ ಶ್ರೀಕೃಷ್ಣನ ದರ್ಶನಕ್ಕೆಂದು ಉಡುಪಿಯ ಮಠಕ್ಕೆ ಹೋಗಲು, ಇವರಿಗೆ ಅಲ್ಲಿ ನೆರೆದ ಬ್ರಾಹ್ಮಣರು ಪ್ರವೇಶವನ್ನೀಯಲಿಲ್ಲ. ಕನಕ ವ್ಯಥೆಗೊಂಡು ದೇವಾಲಯದ ಹಿಂದೆನಿಂತು ದೇವಾ! ನಿನ್ನೆದುರಿನಲ್ಲಿಯೂ ಜಾತಿ ದಾಕ್ಷಿಣ್ಯವೇ? ಎಂದು ಸ್ತುತಿಸುತ್ತಿರಲು, ಕೃಷ್ಣಮೂರ್ತಿಯು ಕನಕನಕಡೆ ತಿರುಗಿ ನೋಡಿಯಲ್ಲಿ

ಒಂದು ಕಿಂಡಿಯನ್ನುಂಟು ಮಾಡಿತು. ಕನಕನು ದೇವದರ್ಶನದಿಂದ ಆನಂದ ಭರಿತನಾಗಿ ಸುಮಧುರ ಭಕ್ತಿ ಕಾವ್ಯಗಳನ್ನು ರಚಿಸುತ್ತ ನಲಿದಾಡಿ "ಜಾತಿಬೇರೆಯಾದರೂ ನೀತಿಗೆ ಭೇದವಿಲ್ಲ" ಎಂಬ ತತ್ತ್ವವನ್ನು ಬೀರಿದರು.

**೬. ಜ್ಞಾನದೇವ:**—(ಕ್ರಿ. ಶ. ೧೨೭೫-೧೨೯೬) ಇವನ ತಾಯಿಯ ಹೆಸರು ರುಕ್ಮಿಣಿ ಮತ್ತು ತಂದೆಯ ಹೆಸರು ಚೈತನ್ಯ ಮಹಾರಾಜ. ಪರಮ ಭಕ್ತರೂ, ದಯಾಳುವೂ ಆದ ಜ್ಞಾನದೇವರಿಗೆ ಹುಟ್ಟಿನಿಂದಲೇ ಅಗಾಧ ಜ್ಞಾನ ಭಾಂಡಾರವಿತ್ತು. "ಕೊಡಗಳು ಬೇರೆ ಆದರೂ ಅದರಲ್ಲಿಯ ನೀರು ಒಂದೇ; ಬಟ್ಟಿಗಳು ಬೇರೆ ಆದರೂ ಅವುಗಳಲ್ಲಿಯ ಎಳೆ ಒಂದೇ; ಅಂತೆ ಜೀವಿಗಳು ಬೇರೆ ಬೇರೆ ಇದ್ದರೂ ಎಲ್ಲರಲ್ಲಿರುವ ಶ್ರೀಹರಿ ಒಬ್ಬನೇ ಎಂಬುದೇ ಇವರ ತತ್ತ್ವ ಪ್ರಣಾಲಿ." ಪಾಂಡುರಂಗನ ಭಕ್ತರಾದ ಜ್ಞಾನದೇವರು ತಮ್ಮ ಮಹಿಮಾಪ್ರಭಾವದಿಂದ ಕೋಣನಿಂದ ವೇದ ಉಚ್ಚಾರ ಮಾಡಿಸಿದರಂತೆ!

**೭. ಏಕನಾಥ:**—(ಕ್ರಿ. ಶ. ೧೫೩೩-೧೫೯೯) ಇವರು ಗೋದಾವರೀ ತೀರದಲ್ಲಿರುವ ಪೈಠಣ ಗ್ರಾಮದಲ್ಲಿಯ ಬ್ರಾಹ್ಮಣ ಪುತ್ರರಿದ್ದು, ದೇವಗಿರಿಯ ಜನಾರ್ಧನ ಸ್ವಾಮಿಗಳಿಂದ ಬ್ರಹ್ಮಜ್ಞಾನದ ಗುಟ್ಟನ್ನು ತಿಳಿದರು. ಗುರುಗಳ ಅಪ್ಪಣೆಯ ಮೇರೆಗೆ ವಿವಾಹಿತರಾದರು. ಇವರು ಮರಾಠಿಯಲ್ಲಿ "ರಾಮಾಯಣ" ಮತ್ತು "ಭಾಗವತ" ಪುರಾಣಗಳಿಗೆ ಬರೆದ ಭಾವಾರ್ಥ ಪ್ರಖ್ಯಾತಿಯಾಗಿವೆ. ಏಕನಾಥರು ಪುರಾಣ, ಪ್ರವಚನ, ಕೀರ್ತನೆಗಳಿಂದ ಭಕ್ತಿಪಂಥವನ್ನು ಹರಡಿ ಕೊನೆಗೆ ಗೋದಾವರಿಯಲ್ಲಿ ಜಲಸಮಾಧಿ ಹೊಂದಿದರು.

**೮. ತುಕಾರಾಮ:**—(೧೬೦೮-೧೬೪೯) ಪುಣೆಯಿಂದ ೧೮ ಮೈಲು ದೂರದಲ್ಲಿರುವ ದೇವಗಾವಿನಲ್ಲಿ ಇವರ ಜನನವಾಯಿತು. ಪಂಢರಪುರದ ವಿಠಲನ ಭಕ್ತರಾದ ಇವರು ಭಜನೆ, ಕೀರ್ತನೆಗಳಲ್ಲಿ ವಿಶೇಷ ಆಸಕ್ತಿ ವಹಿಸುತ್ತಿರಲು, ಮುಂದೆ ಇವರಿಗೆ ಒಂದರಮೇಲೊಂದು ಆಪತ್ತು ಒದಗಿ ಸಂಸಾರದಲ್ಲಿ ವೈರಾಗ್ಯ ಉಂಟಾಯಿತು. ಇವರು ಜ್ಞಾನೇಶ್ವರ, ನಾಮದೇವ ಏಕನಾಥ ಮೊದಲಾದವರ ಗ್ರಂಥಗಳನ್ನು ಓದಿ ತಾವೇ ಅಭಂಗಗಳನ್ನು ರಚಿಸತೊಡಗಿದರು. ಅಭಂಗಗಳಿಂದ ಇವರ ಕೀರ್ತಿ ಬೆಳೆಯಲು ಒಮ್ಮೆ ಶಿವಾಜಿ ಮಹಾರಾಜರು ಇವರ ದರ್ಶನ ಪಡೆದು ರಾಜಧರ್ಮವನ್ನು ಅರಿತರು.

೯. **ರಾಮದಾಸ್**:—( ೧೬೦೮-೧೬೮೧ ) ಇವರು ಹೈದರಾಬಾದ್ ಸಂಸ್ಥಾನದ "ಜಾಂಬ" ಎಂಬ ಊರಿನಲ್ಲಿಯ ಸೂರ್ಯಾಜಿಪಂತ ಎಂಬುವರ ಮಕ್ಕಳು. ಚಿಕ್ಕಂದಿನಿಂದಲೂ ಇವರು ಏಕಾಂತಪ್ರಿಯರು. ತಾಯಿ ೧೨ ವರ್ಷದವನಿರುವಾಗಲೇ ಮದುವೆ ಹೂಡಲು ಮನೆಬಿಟ್ಟು ಓಡಿಹೋಗಿ ಗೋದಾವರಿ ನದಿಯ ದಂಡೆಯಲ್ಲಿಯ ನಾಸಿಕದಲ್ಲಿ ೧೨ ವರ್ಷ ತಪಸ್ಸುಮಾಡಿದರು. ಇದೇ ಸಮಯದಲ್ಲಿ ಹಿಂದೂ ಸಾಮ್ರಾಜ್ಯಸ್ಥಾಪನೆಗಾಗಿ ಹೊರಟ ಶಿವಾಜಿಯ ರಾಜಗುರುಗಳಾಗಿ ಅವನಿಗೆ ಸ್ಫೂರ್ತಿಯನ್ನಿತ್ತರು. ಇವರಿಗಾಗಿ ಶಿವಾಜಿಯು ಸಾತಾರೆಯ ಪರಳಿ ಎಂಬಲ್ಲಿ ಕಟ್ಟಿಸಿಕೊಟ್ಟ ಸಜ್ಜನಗಡದ ಮಠದಲ್ಲಿ ವಾಸವಾಗಿದ್ದು "**ದಾಸಬೋಧ**" ಮತ್ತು "**ಮನಾಚೆಶ್ಲೋಕ**" ಎಂಬ ಶ್ರೇಷ್ಠ ಮರಾಠೀ ಗ್ರಂಥಗಳನ್ನು ಬರೆದರು.

೧೦. **ನರಸಿಂಹ ಮೆಹತಾ**:—ಮೊದಲು ಶಿವಭಕ್ತರಾದ ಇವರು ಜುನಾಗಡದ ನಾಗರ ಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ಚಿಕ್ಕಂದಿನಿಂದ ಆಟಗುಳಿಯಾದ ಇವರಿಗೆ ಒಮ್ಮೆ ಅತ್ತಿಗೆ ಬೈಯಲು ಮನೆಬಿಟ್ಟುಹೋಗಿ ಅಡವಿಯಲ್ಲಿಯ ಒಂದು ಶಿವಮಂದಿರದಲ್ಲಿ ೭ ದಿನ ಅನ್ನ ನೀರಿಲ್ಲದೇ ಕಳೆದರು. ಆಗ ಇವರಿಗೆ ದೇವಸಾಕ್ಷಾತ್ಕಾರವಾಗಿ, ದೇವರು ಇವರನ್ನು ಯಮುನಾತೀರಕ್ಕೆ ಕರೆದೊಯ್ದು ಶ್ರೀಕೃಷ್ಣ, ಗೋಪಿಕಾಸ್ತ್ರೀಯರ ರಾಸಕ್ರೀಡೆಯನ್ನು ತೋರಿಸಿದರು. ಇದರಿಂದ ಸ್ಫೂರ್ತಿಗೊಂಡು ನರಸಿಂಹ ಮೆಹತಾರು ಗುಜರಾತಿಯಲ್ಲಿ ಬರೆದ "ರಾಸಮಂಡಲ" ಎಂಬ ಗ್ರಂಥವು ಬಹಳ ಹೆಸರುಗೊಂಡಿದೆ.

೧೧. **ಬಂಗಾಲದ ಚೈತನ್ಯ**:— ( ೧೪೮೫-೧೫೩೩ ) ಬಂಗಾಲದ ವಿಖ್ಯಾತ ವಿಷ್ಣು ಭಕ್ತರಾದ ಇವರ ಮೊದಲಿನ ಹೆಸರು **ವಿಶ್ವಂಭರ.** ತರ್ಕಶಾಸ್ತ್ರ, ವ್ಯಾಕರಣ, ವೇದಾಂತಗಳಲ್ಲಿ ಹೆಸರುಗೊಂಡ ಇವರು ಕೆಲಕಾಲ ಸಂಸಾರ ಲೋಲುಪ್ತರಾಗಿದ್ದರು. ತಮ್ಮ ೨೪ ನೇ ವಯಸ್ಸಿನಲ್ಲಿ **ಕೇಶವ ಭಾರತೀ** ಮಹಾಸ್ವಾಮಿಗಳಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ "ಕೃಷ್ಣ ಚೈತನ್ಯ ಎಂಬ ನಾಮಧಾರಣಮಾಡಿದರು. ಇವರು ಮನುಷ್ಯನ ನಿಜಾನಂದಕ್ಕೆ ಭಕ್ತಿಯೇ ಕಾರಣವೆಂದು ಬೋಧಿಸಿದರಲ್ಲದೆ, ಹಿಂದೂ, ಮುಸ್ಲಿಂ, ಸ್ತ್ರೀ ಪುರುಷರನ್ನು ತಮ್ಮ ಭಕ್ತರನ್ನಾಗಿ ಮಾಡಿಕೊಂಡಿದ್ದರು.

**೧೨. ಮೇವಾಡದ ಮೀರಾಬಾಯಿ:**— ಈ ಪ್ರಸಿದ್ಧ ಕೃಷ್ಣಭಕ್ತ ಸಾಧ್ವೀಮಣಿಯು ಸುಮಾರು ೧೫ ನೇ ಶತಮಾನದಲ್ಲಿ ರಜಪುತಸ್ಥಾನದಲ್ಲಿ ಆಗಿ ಹೋದಳು. ಈಕೆಯು ಕೃಷ್ಣಭಕ್ತಿಗಾಗಿ ತನ್ನ ಗಂಡ ರಾಣಾಕುಂಭನನ್ನು ತೊರೆದು, ಕೃಷ್ಣನನ್ನೇ ಗಂಡನೆಂದು ಭಾವಿಸಿದಳು. ವೃಂದಾವನಕ್ಕೆ ಹೋಗಿ **ರೂಪಗೋಸ್ವಾಮಿಗಳ** ಶಿಷ್ಯಳಾದಳಲ್ಲದೆ, ಹಿಂದಿಯಲ್ಲಿ ಗೀತೆಗಳನ್ನು ರಚಿಸುತ್ತ ಪ್ರಸಿದ್ಧಿ ಪಡೆದಳು. ಈಕೆ ರಚಿಸಿದ " ರಾಸಗೋವಿಂದ " ಹಿಂದೀ ಭಾಷೆಯಲ್ಲಿ ವಿಖ್ಯಾತಿಯಾಗಿದೆ.

**೧೩. ಕಾಸಿಯ ತುಳಸೀದಾಸ:**—( ಕ್ರಿ ಶ. ೧೫೩೨-೧೬೨೩ ) ಇವರು ಯಮುನಾ ನದಿಯ ತೀರದಲ್ಲಿಯ ಬಾಂದ ಜಿಲ್ಲೆಗೆ ಸೇರಿದ ರಾಜ ಪುರದಲ್ಲಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದರು. ಇವರು ಅಕಬರ ಬಾದಶಹನ ಮಿತ್ರರಾಗಿದ್ದರಿಂದ ಒಮ್ಮೆ ಸಂಚಾರಕ್ಕೆ ಹೋಗಿದ್ದವರು ಹಿಂತಿರುಗಿದಾಗ ಹೆಂಡತಿ ತವರು ಮನೆಗೆ ಹೋದುದು ತಿಳಿದು, ತಾವೂ ಹೊರಟೇ ಬಿಟ್ಟರು. ಅಪರಾತ್ರಿಯಲ್ಲೇ ಪ್ರವಾಸಮಾಡಿ ಹೆಂಡತಿ ಮಲಗಿದ್ದ ಮಹಡಿಯನ್ನೇ ರಿದರು. ಹೆಂಡತಿ ಆಶ್ಚರ್ಯಗೊಂಡು ನಗುನಗುತ್ತ " ನೀವು ನನ್ನಲ್ಲಿಟ್ಟಷ್ಟು ಪ್ರೇಮವನ್ನು ಶ್ರೀಕೃಷ್ಣನ ಮೇಲಿಟ್ಟಿದ್ದರೆ ನಿಮಗೆ ಮುಕ್ತಿ ಸಿಗುತ್ತಿತ್ತು" ಎಂದಳು.; ಸರಿ ಆಗಲೇ ಇವರಿಗೆ ಜ್ಞಾನೋದಯವಾಗಿ ಸಂಸಾರವನ್ನು ತ್ಯಜಿಸಿದರು. ಅಂದಿನಿಂದ ರಾಮನಾಮಸ್ಮರಣೆ ಮತ್ತು " ಶ್ರೀರಾಮಚರಿತ ಮಾನಸ" ಎಂಬ ಪ್ರಸಿದ್ಧ ಹಿಂದೀ ಗ್ರಂಥ ಬರೆಯುವುದರಲ್ಲಿಯೇ ತಮ್ಮ ಜೀವ ಸವೆಯಿಸಿದರು.

**ಪ್ರಶ್ನೆ:—ಕೆಳಗೆ ಬಿಟ್ಟ ಸ್ಥಳದಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ.**

೧. ಕ್ರಿ. ಶ. . . . . ಶತಮಾನದಲ್ಲಿ .............. ವೀರಶೈವ ಮತದ ಪುನರುದ್ಧಾರಮಾಡಿದರಲ್ಲದೆ,............ಉಚ್ಚನೀಚ ಭಾವನೆಯನ್ನು. . .... ...............ಕಲ್ಯಾಣ ಕಾರ್ಯಕ್ಕಾಗಿ ಹೋರಾಡಿದರು. ಬಸವೇಶ್ವರರು ಧರ್ಮದ ಮರ್ಮವನ್ನು ತಿಳಿಹೇಳಲು . . ....... .... ......... . ವೆಂಬ ವಚನವನ್ನು ಹೇಳಿದರು.

೨. .........ಅಚ್ಚಕನ್ನಡಿಗರಿದ್ದು, ದ್ವೈತಮತವನ್ನು ಸ್ಥಾಪಿಸಿದರು. ಮಧ್ವಾಚಾರ್ಯರು . ........, .........., ......... ಗಳಿಗೆ ಟೀಕೆಯನ್ನು

ಬರೆದಿದ್ದಾರೆ. ಜೀವಾತ್ಮನು.......... ಬಲದಿಂದ..........ನ ಪ್ರೀತಿಯನ್ನು ಪಡೆಯುವನು ಎಂಬುದೇ ಇವರ ತತ್ವದ ತಿರುಳು.

೩. ಜ್ಞಾನದೇವರ ತಾಯಿಯ ಹೆಸರು..............ತಂದೆಯ ಹೆಸರು............

೪. ರಾಮದಾಸರು..............ಮತ್ತು..............ಎಂಬ ಪ್ರಸಿದ್ಧ 'ಮರಾಠೀ ಗ್ರಂಥಗಳನ್ನು ಬರೆದಿರುವರು.

೫. ಶ್ರೀರಾಮದಾಸರು................ನಿಗೆ ರಾಜಧರ್ಮವನ್ನು ಬೋಧಿಸಿ ಸ್ಫೂರ್ತಿಕೊಟ್ಟಂತೆ...........ಸ್ಫೂರ್ತಿಯನ್ನಿತ್ತಿದ್ದರು.

೬. ಮೀರಾಬಾಯಿ............ನ ಮಗಳು,..................ನ ಹೆಂಡತಿ,..........ಯ ಶಿಷ್ಯಳಾಗಿ...........ಎಂಬ ಪ್ರಸಿದ್ಧ ಹಿಂದೀ ಗ್ರಂಥವನ್ನು ಬರೆದಳು.

೭. ಏಕನಾಥರು ಗೋದಾವರೀ ತೀರದಲ್ಲಿಯ .......... ದಲ್ಲಿಯ ಬ್ರಾಹ್ಮಣ ಕುಲದಲ್ಲಿ ಹುಟ್ಟಿದರು. ಇವರ ಮನಸ್ಸು ಬಾಲ್ಯದಿಂದಲೂ .......... ಮತ್ತು .......... ಕ್ಕಾಗಿ ಹಂಬಲಿಸುತ್ತಿತ್ತು. ಇವರು ಬರೆದ "................" ಮತ್ತು "................" ಮರಾಠಿ ಗ್ರಂಥಗಳು ಪ್ರಖ್ಯಾತಿಯಾಗಿವೆ.

೮. ಜನ್ಮತಃ ಜ್ಞಾನದೇವರು ..........ಜ್ಞಾನವನ್ನು ಸಂಪಾದಿಸಿದ್ದರು. ಇವರು ಕೋಣನ ಬಾಯಿಯಿಂದ.........ಉಚ್ಚಾರ ಮಾಡಿಸಿದರು. ಜ್ಞಾನದೇವರು ತಮ್ಮ ೧೫ ನೇ ವಯಸ್ಸಿನಲ್ಲಿಯೇ .........ಗೆ ಮರಾಠಿಯಲ್ಲಿ ".........." ಎಂಬ ವ್ಯಾಖ್ಯಾನವನ್ನು ಬರೆದರು.

೯. ಬಂಗಾಲದ ಚೈತನ್ಯರು ಸುಂದರ ಕಾಯರಾದುದರಿಂದ ....... .........ಎಂಬ ಹೆಸರು ರೂಢಿಯಾಗಿತ್ತು. ಮನುಷ್ಯನ ನಿಜಾನಂದಕ್ಕೆ ......... ಮೂಲ ಕಾರಣವೆಂದೂ, ........, ......., ......., ....... ಗಳಿಂದ ಆನಂದ ಪರವಶರಾದಾಗಲೇ ಮನುಷ್ಯನಿಗೆ ದೇವರ ಸಾಕ್ಷಾತ್ಕಾರ ವಾಗುವುದೆಂದು ಇವರ ಉಪದೇಶ.

೧೦. ಅಳ್ವಾರರು ಹುಟ್ಟಿನಲ್ಲಿ................ ಜಾತಿಯವರಾದರೂ, ಜ್ಞಾನಾರ್ಜನೆಯಾದಮೇಲೆ ಎಲ್ಲರೂ............ಸಂತತಿಯವರೇ.

**ಉತ್ತರ** :— (೧) ೧೨ನೇ, ಬಸವೇಶ್ವರರು, ಹಿಂದೂಗಳಲ್ಲಿದ್ದ, ತೊಲಗಿಸಿ, ಮಾನವ, "ಕೊಲ್ಲಲೊಪ್ಪದಿರುವುದೇ ಧರ್ಮ." (೨) ಮಧ್ವಾಚಾರ್ಯರು. ಬ್ರಹ್ಮಸೂತ್ರ, ಭಗವದ್ಗೀತೆ, ಉಪನಿಷತ್ತು. ಭಕ್ತಿಯು, ಪರಮಾತ್ಮನ. (೩) ರುಕ್ಮಿಣಿ, ಚೈತನ್ಯ ಮಹರಾಜ. (೪) ದಾಸಬೋಧ, ಮನಾಚೆ ಶ್ಲೋಕ. (೫) ಶಿವಾಜೀ ಮಹಾರಾಜ, ತುಕಾರಾಮ ಮಹಾರಾಜರೂ. (೬) ರತ್ನಸಿಂಹ, ರಾಣಾ ಕುಂಭ, ರೂಪಗೋಸಾವಿಯು, ರಾಸಗೋವಿಂದ. (೭) ಪೈಠಣ ಗುರುಸೇವೆ, ಬ್ರಹ್ಮಜ್ಞಾನ, ಭಾವಾರ್ಥ ರಾಮಾಯಣ, ಭಾಗವತ. (೮) ಅಗಾಧ. ವೇದ ಭಗವದ್ಗೀತೆಗೆ, ಭಾವಾರ್ಥದೀಪಿಕೆ. (೯) ಗೌರಾಂಗ ಪ್ರಭು. ಭಕ್ತಿಯೇ. ಪ್ರೇಮ, ಭಕ್ತಿ, ಸಂಗೀತ, ನರ್ತನ. (೧೦) ಬೇರೆ, ಬೇರೆ ಆಳ್ವಾರ್.

## ಶೀಖರ ಸಂಕ್ಷಿಪ್ತ ಚರಿತ್ರೆ.

**ಗುರು ನಾನಕರ ಜನ್ಮ ಮತ್ತು ಅವರು ಮಾಡಿದ ಮಹತ್ಕಾರ್ಯಗಳಬಗ್ಗೆ ಬರೆಯಿರಿ.**

ನಾನಕ ಇವರು ಲಾಹೋರ್ ಜಿಲ್ಹೆಯ ತಾಳವಂಡಿ ಗ್ರಾಮದಲ್ಲಿ ಕಾಳು ಮತ್ತು ತೃಪ್ತಾ ಎಂಬ ಕ್ಷೇತ್ರಿಕುಲದ ದಂಪತಿಗಳಿಂದ ಕ್ರಿ. ಶ. ೧೪೬೯ ರಲ್ಲಿ ಹುಟ್ಟಿದರು. ಚಿಕ್ಕಂದಿನಿಂದ ಇವರದು ಸ್ವಲ್ಪ ಮಂದ ಸ್ವಭಾವ. ಸ್ವಲ್ಪ ದೊಡ್ಡವರಾದಂತೆ ಯಾವುದೋ ಗೂಢ ವಿಚಾರದಲ್ಲಿ ಮಗ್ನರಾದಂತೆ ತೋರುತ್ತಿತ್ತು. ತಂದೆ ತಾಯಿಗಳು ಇವರನ್ನು ಉದ್ಯೋಗಕ್ಕೆ ಹಚ್ಚಿ, ಮದುವೆ ಮಾಡಿದರು. ಆದರೆ ಪ್ರಯೋಜನವಾಗಲಿಲ್ಲ. ಮುಂದೆ ಕೆಲ ಕಾಲದಮೇಲೆ ಇವರು ಹಿಂದುಮುಸ್ಲಿಮರಲ್ಲಿಯ ಒಡಕನ್ನು ಹೋಗಲಾಡಿಸಲು ತನ್ನದೇ ಆದ ಒಂದು ಹೊಸ ಧರ್ಮವನ್ನು ಕಂಡುಹಿಡಿದರು. ಅಂದೇ ತನ್ನ ತಂಗಿಯ ಗಂಡನು ಹಚ್ಚಿಕೊಟ್ಟ ನೌಕರಿಗೆ ಶರಣುಹೊಡೆದು ಮರ್ದಾನನೆಂಬ ಶಿಷ್ಯನೊಡನೆ ಹೊರಬಿದ್ದು ಸನ್ಯಾಸಿಯಾದರು. ಇವರು ತಮ್ಮ ಧರ್ಮ ಪ್ರಚಾರಕ್ಕಾಗಿ ಇಂಪಾದ ಹಾಡುಗಳನ್ನು ಕಟ್ಟಿ "ರೆಬೆಕ್" ಎಂಬ ವಾದ್ಯ ಮೇಳದೊಂದಿಗೆ ಹಾಡತೊಡಗಿದರು. ಈ ಶೀಖಧರ್ಮದಲ್ಲಿ ಉಚ್ಚನೀಚ ಜಾತಿಭೇದದ ಗೊಂದಲವಿಲ್ಲದ್ದರಿಂದಲೂ, ಪ್ರೇಮ ಒಂದೇ

ಇವರು ಮನ್ನಿಸಬೇಕಾದ ನಿಯಮವಾದ್ದರಿಂದಲೂ ಅನೇಕ ಹಿಂದ್ವ ಮುಸ್ಲಿಮರು ಈ ಧರ್ಮವನ್ನು ಆಶ್ರಯಿಸಿದರು. ನಾನಕರು ಕಾಶಿ, ರಾಮೇಶ್ವರ, ಪುರಿ, ತಿರುಪತಿ ಮುಂತಾದೆಡೆಯಲ್ಲೆಲ್ಲಾ ಸಂಚರಿಸಿ ಅಲ್ಲಿಯ ವಿದ್ವಾಂಸರೊಂದಿಗೆ ತಮ್ಮ ಧರ್ಮತತ್ವವನ್ನು ಚರ್ಚಿಸಿ ಅಲ್ಲಲ್ಲಿ ಶಿಷ್ಯರನ್ನು ಕಲೆ ಹಾಕಿದರು. ಇವರು ಮಕ್ಕಾಕ್ಕೆ ಹೋಗಿ ಅಲ್ಲಿ ಮೌಲ್ವಿ ಕಾಜಿಗಳಿಗೂ ತಮ್ಮ ಧರ್ಮತತ್ವವನ್ನು ಮನಗಣಿಸಿಕೊಟ್ಟು ಹಿಂದುಸ್ಥಾನಕ್ಕೆ ಹಿಂತಿರುಗಿದರು. ಮೊದಲು ಈ ಪಂಥಕ್ಕೆ **ನಾನಕ ಪಂಥ** ವೆಂಬ ಹೆಸರಿತ್ತು, ಮುಂದೆ ಈ ಧರ್ಮವನ್ನು ಶಿಷ್ಯರೇ ನಡೆಸಹತ್ತಿದ್ದರಿಂದ ಇದಕ್ಕೆ **ಶೀಖ** ಪಂಥವೆಂಬ ಹೆಸರು ಬಿತ್ತು. ಹೀಗೆ ಹೊಸ ಧರ್ಮವನ್ನು ಸ್ಥಾಪಿಸಿದ ಗುರು ನಾನಕರು ೧೫೩೮ ರಲ್ಲಿ ಮರಣ ಹೊಂದಿದರು.

## ಶಾಂತಿಯುತ ಜೀವನಕ್ಕಾಗಿ ಸ್ಥಾಪಿಸಲ್ಪಟ್ಟ ಶೀಖ ಧರ್ಮ ಶೌರ್ಯಯುತ ಜೀವನವನ್ನವಲಂಬಿಸಬೇಕಾಯ್ತು ಏಕೆ?

ಮಹಮ್ಮದೀಯ ಅರಸರು ಹಿಂದೂಗಳನ್ನು ಹಿಂಸಿಸಿದಂತೆ ಶೀಖರನ್ನೂ ಹಿಂಸಿಸಿದರು. ಔರಂಗಜೇಬನ ಕಾಲದಲ್ಲಿಯಂತೂ ಹಿಂಸೆ ಇನ್ನೂ ಹೆಚ್ಚಿತಲ್ಲದೆ, ಈ ಧರ್ಮದ ನಾಶಕ್ಕಾಗಿ ಶೀಖರ ೯ ನೇ ಗುರುವಾದ ತೇಜಬಹದ್ದೂರ ಮೊದಲಾದವರ ಕೊಲೆಯಾಯಿತು. ಇದರಿಂದ ಗುರುಗೋವಿಂದಸಿಂಗನು ಕೆರಳಿ ಧರ್ಮ ರಕ್ಷಣೆಗಾಗಿ ಶೀಖರಿಗೆ ಕ್ಷಾತ್ರಾದೀಕ್ಷೆಯನ್ನಿತ್ತನು. ಮಹಮ್ಮದೀಯರ ಹಿಂಸೆ ಹೆಚ್ಚಿದಂತೆಲ್ಲಾ ಇವರ ಸೇಡಿನ ಪ್ರವೃತ್ತಿ ಬೆಳೆದು, ಇವರ ೬ ನೇ ಗುರುವಾದ ಹರಗೋವಿಂದಸಿಂಗನ ಕಾಲದಿಂದಲೂ ರಾಜ್ಯ ಕಟ್ಟುವ ಪ್ರಯತ್ನ ನಡೆದಿತ್ತು. ಇದಕ್ಕಾಗಿ ಶಾಂತಿ ಜೀವಿಗಳಾದ ಶೀಖರು, ವೀರಾಳುಗಳಾಗಿ ವೀರಗಾಸೆ, ಕಬ್ಬಿಣದಬಳೆ, ಖಡ್ಗ ಅಥವಾ ಕೃಪಾಣ, ಕೂದಲು, ಹಣಿಗೆ ಇವುಗಳನ್ನು ಧರಿಸಿದರು. ಆಗಿನಿಂದಲೇ ಇವರಿಗೆ ಸಿಂಗ ಎಂದರೆ ಸಿಂಹ ಎಂಬ ಹೆಸರು ರೂಢಿಯಾಯಿತು. ಮುಂದೆ ರಾಜ್ಯಸ್ಥಾಪನೆಯ ಕಾರ್ಯದಲ್ಲಿ ಹೆಸರುಗೊಂಡವರೆಂದರೆ ರಣಜಿತ್‌ಸಿಂಗರೊಬ್ಬರೇ.

# ಮರಾಠಾ ಮತ್ತು ಪೇಶ್ವೆಯರ ಚರಿತ್ರೆ.

**ಕೆಳಗಿನವರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.**

(೧) ಶಿವಾಜೀ ಮಹಾರಾಜ (೨) ಅಫಝುಲ್ ಖಾನ (೩) ಬಾಜಿಪ್ರಭು (೪) ನೇತಾಜಿಪಾಲಕರ (೫) ಷಾಯಿಸ್ತೆಖಾನ (೬) ಸಂಭಾಜಿ (೭) ಬೆಳವಡಿ ಮಲ್ಲಮ್ಮ (೮) ಬಾಳಾಜಿ ವಿಶ್ವನಾಥ (೯) ಶಾಹೂ (೧೦) ೧ನೇ ಬಾಜಿರಾವ (೧೧) ಬಾಳಾಜಿ ಬಾಜೀರಾವ್ (೧೨) ತಾರಾಬಾಯಿ (೧೩) ಅಹಮದ ಷಾಹ ಅಬದಾಲಿ (೧೪) ೧ ನೇ ಮಾಧವರಾವ್ (೧೫) ನಾನಾ ಫಡಣವೀಸ (೧೬) ಹೈದರಅಲಿ (೧೭) ಚಿದಂಬರ ದೀಕ್ಷಿತರು (೧೮) ೨ ನೇ ಬಾಜೀರಾಯ (೧೯) ರಾಮಶಾಸ್ತ್ರಿ ಪ್ರಭುಣೆ.

**೧. ಛತ್ರಪತಿ ಶಿವಾಜಿ ಮಹಾರಾಜ:—** ಕ್ರಿ. ಶ. ೧೬೩೦ ರಲ್ಲಿ ಶಿವಾಜಿಯು ಭೋಸಲೇ ಮರಾಠಾ ಮನೆತನದ ಶಹಾಜಿ ಮತ್ತು ಜೀಜಾಬಾಯಿಂದ ಜನಿಸಿದನು. ಶಹಾಜಿಯು ಶೂರನಿದ್ದು ವಿಜಾಪುರದ ಆದಿಲ್ ಶಾಹನ ಸರದಾರನಾಗಿದ್ದನು. ಜೀಜಾಬಾಯಿ ವೀರ ಪತ್ನಿಯಿದ್ದಂತೆ ವೀರ ಮಾತೆಯೂ ಅಹುದು. ಶಿವಾಜಿಯ ಬಾಲ್ಯವೆಲ್ಲಾ ತಾಯಿಯ ಬಳಿಯಲ್ಲಿಯೇ ಕಳೆಯಿತು. ತಾಯಿ ಶಿವಾಜಿಗೆ ಭಾರತದ ವೀರಾಳುಗಳ ಜೀವನ ಚರಿತ್ರೆಯನ್ನು ಹೇಳಿ, ಸಚ್ಚಾರಿತ್ರ್ಯ, ಸದಾಚಾರ, ಶೌರ್ಯ, ಸ್ವದೇಶಾಭಿಮಾನಗಳು ಇವನಲ್ಲಿ ಬೆಳಗುವಂತೆ ಮಾಡಿದಳು. ಬಾಲ ಶಿವಾಜಿ ಕುದುರೆ ಸವಾರಿ, ಕತ್ತೀವರಸೆ, ಮುಂತಾದುವುಗಳನ್ನೂ ಓದು ಬರಹವನ್ನು ಬಹುಬೇಗ ಕಲಿತನು. **ದಾದಾಜಿಕೊಂಡದೇವನು** ಶಿವಾಜಿಗೆ ರಾಜಕೀಯ ಜ್ಞಾನ ಮಾಡಿಕೊಟ್ಟನು. ತಂದೆ ಶಹಾಜಿ ಮಾವಳೆ ಜನರಿಗೆ ಶಿವಾಜಿಯ ಪರಿಚಯ ಮಾಡಿಕೊಟ್ಟನು. ಶಿವಾಜಿಯ ಗೆಳೆಯರಾದ ತಾನಾಜಿ ಮಾಲಸುರೆ, ಏಸಾಜಿಕಂಕ, ಬಾಜಿ ಫಾಸಲಕರ ಮುಂತಾದ ಮಾವಳೇ ವೀರರು ಶಿವಾಜಿಯ ಸ್ವತಂತ್ರ ರಾಜ್ಯಸ್ಥಾಪನೆಯ ಹಂಬಲವನ್ನೂ ಸಾಧಿಸಲು ಭುಜಕ್ಕೆ ಭುಜಕೊಟ್ಟು ದುಡಿದರು. ಮಹಮ್ಮದೀಯರ ಹಿಂಸಾಚಾರದಿಂದ ಜರ್ಜರಿತಗೊಂಡ ಹಿಂದೂ ಜನಾಂಗ ಮತ್ತು ಸಂಸ್ಕೃತಿಯ ಸಂರಕ್ಷಣೆಯಭಾರ ಹೊರಲು ಶಿವಾಜಿ ಮುಂದಾದನು. ಈ ವೀರ ಭಟನ ಕಾರ್ಯಕ್ಕೆ ತುಕಾರಾಮ, ರಾಮದಾಸರಂತಹ ಮಹಾಪುರುಷರ ಆಶೀರ್ವಾದ ಒದಗಿತಲ್ಲದೆ, ಹಿಂದೂ ಸರದಾರರೂ, ಮಾವಳಿ ಜನರೂ ಬೆಂಬಲಕ್ಕೆ ಬಂದರು

ಶಿವಾಜಿಯು ಮೊದಲು ತೋರಣಕೋಟೆಯನ್ನು ವಶಪಡಿಸಿಕೊಂಡಾಗ ಅಲ್ಲಿ ಇವನಿಗೆ ಹೇರಳವಾಗಿ ದ್ರವ್ಯಲಭಿಸಿತು. ಇದರಿಂದ ಕೋಟೆಯನ್ನು ಭದ್ರಪಡಿಸಿ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದನು. ರಾಯಗಡ ಕೋಟೆಯನ್ನು ಕಟ್ಟಿಸಿದ ಮೇಲೆ ಕೊಂಡಾಣೆ, ಪುರಂದರ, ಕಲ್ಯಾಣ ಕೋಟೆಗಳನ್ನು ವಶಪಡಿಸಿ ಕೊಂಡನು. ಶಿವಾಜಿಯು ವಿಜಾಪುರದ ಆದಿಲ್‌ಶಾಹನ ಆಧಿಪತ್ಯದ ಭಾಗದಲ್ಲಿ ನುಗ್ಗಿ ಸುಲಿಯಹತ್ತಲು ಇದಕ್ಕೆ ಶಹಾಜಿಯ ಬೆಂಬಲವೇ ಕಾರಣವೆಂದು ಭಾವಿಸಿ ಆದಿಲ್‌ಶಾಹನು ಶಹಾಜಿಯನ್ನು ಸೆರೆಯಿಟ್ಟನು. ಮುಂದೆ ಶಿವಾಜಿಯು ಜಾವಳೀ ಪ್ರಾಂತವನ್ನು ಗೆದ್ದು ಪ್ರತಾಪಗಡ ಕೋಟೆಯನ್ನು ಕಟ್ಟಿದನು. ಇದರಿಂದ ಆದಿಲ್‌ಶಾಹನು ಸಿಟ್ಟುಗೊಂಡು ಅಫಝುಲ್‌ಖಾನನನ್ನು ಶಿವಾಜಿಯ ಪಾರುಪತ್ಯ ಮಾಡಲು ಕಳಿಸಿದನು. ಆದರೆ ಶಿವಾಜಿಯು ಅವನೊಂದಿಗೆ ಮಾತುಕತೆಗಾಗಿ ಪ್ರತ್ಯೇಕ ಸ್ಥಳದಲ್ಲಿ ಭೆಟ್ಟಿಗೆ ಕರೆದು ಅಲ್ಲಿ ಒಬ್ಬರನ್ನೊಬ್ಬರು ಆಲಿಂಗಿಸಿದಾಗ ತನ್ನ ವ್ಯಾಘ್ರನಖದಿಂದ ಅಫಝುಲಖಾನನನ್ನು ಇರಿದು ಕೊಂದನು.

ಶಿವಾಜಿಯ ಪ್ರಾಬಲ್ಯವನ್ನು ಕೇಳಿ ಮೊಗಲ್ ಬಾದಶಾಹ ಆಲಂಗೀರನು ಶಾಹಿಸ್ತೇಖಾನನನ್ನು ದೊಡ್ಡ ಸೈನ್ಯದೊಂದಿಗೆ ಕಳಿಸಿದನು. ಆದರೆ ಪುಣೆಯಲ್ಲಿ ಬೀಡುಬಿಟ್ಟ ಷಾಹಿಸ್ತೇಖಾನನ ದಂಡಿನ ಮೇಲೆ ಶಿವಾಜಿಯು ರಾತ್ರಿಯಲ್ಲಿ ಒಮ್ಮೆಗೇ ಬಿದ್ದು ಹಣಿಯಲು, ಷಾಹಿಸ್ತೇಖಾನನು ತನ್ನ ಜೀವ ಉಳಿಸಿಕೊಂಡು ಓಡಿಹೋಗಲು ಸಾಕುಬೇಕಾಯಿತು.

ಆಗ ಶಿವಾಜಿಯು ಮೊಗಲರ ಆದಿಪತ್ಯದಲ್ಲಿದ್ದ ಕೆಲಕೋಟೆಗಳನ್ನು ವಶಪಡಿಸಿಕೊಳ್ಳಹತ್ತಿದನು. ಇದನ್ನು ಕೇಳಿದ ಔರಂಗಜೇಬನಿಗೆ ಉರಿಯುವ ಬೆಂಕಿಯಲ್ಲಿ ಎಣ್ಣೆ ಹಾಕಿದಂತಾಯಿತು. ಶಿವಾಜಿಯ ಪಾರುಪತ್ಯಕ್ಕಾಗಿ ದಿಲೇರ ಮತ್ತು ಜಯಸಿಂಗರೊಂದಿಗೆ ದೊಡ್ಡ ಸೈನ್ಯ ಕಳಿಸಿದನು. ಜಯಸಿಂಗನಿಗೆ ಮರಾಠರ ಗನೀಮಿಕಾಯುದ್ಧ ಗೊತ್ತಿದ್ದುದರಿಂದ ದೊಡ್ಡ ಸೈನ್ಯದ ಮುಂದೆ ಶಿವಾಜಿಯ ಆಟ ಸಾಗದೇ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಒಪ್ಪಂದದ ಪ್ರಕಾರ ಶಿವಾಜಿ ಮತ್ತು ಸಂಭಾಜಿ ಔರಂಗಜೇಬನ ಭೆಟ್ಟಿಗೆ ಹೋದರು. ಆಗ ಔರಂಗಜೇಬನು ಇವರನ್ನು ಅಪಮಾನಗೊಳಿಸಿ ಸೆರೆಯಿಟ್ಟನು. ಆದರೇನು ಶಿವಾಜಿ ಮತ್ತು ಸಂಭಾಜಿ ಉಪಾಯ ಮಾಡಿ ಸೆರೆಮನೆಯಿಂದ ತಪ್ಪಿಸಿಕೊಂಡು, ಔರಂಗಜೇಬನಿಗೆ ಸರಿಯಾದ ಬುದ್ಧಿ ಕಲಿಸಲು ಪಣ ತೊಟ್ಟರು.

ಸೆರೆಯಿಂದ ತಪ್ಪಿಸಿಕೊಂಡ ಶಿವಾಜಿ ತನ್ನ ರಾಜ್ಯಕ್ಕೆ ಹಿಂತಿರುಗಿ ಕ್ರಿ. ಶ. ೧೬೭೪ರಲ್ಲಿ ರಾಯಗಡದಲ್ಲಿ ಸ್ವತಂತ್ರ ಹಿಂದೂರಾಜ್ಯ ಸ್ಥಾಪನೆ ಮಾಡಿ ಸಿಂಹಾಸನಾರೋಹಣ ಮಾಡಿದನು. ಈ ಸಮಾರಂಭಕ್ಕೆ ಮಹಾರಾಷ್ಟ್ರ ಮತ್ತು ಕರ್ನಾಟಕದ ಎಲ್ಲ ಸರದಾರರೂ, ರಾಜರೂ, ಆಗತಾನೇ ಕಾಲು ಚಾಚುತ್ತಿದ್ದ ಪೋರ್ತುಗೀಜ ಮತ್ತು ಈಸ್ಟ ಇಂಡಿಯಾ ಕಂಪನಿಯ ಪ್ರತಿನಿಧಿಗಳೂ ಬಂದಿದ್ದರು.

ಮುಂದೆ ಶಿವಾಜಿಯು ದಕ್ಷಿಣ ಹಿಂದುಸ್ಥಾನದ ಕರ್ನೂಲು, ಕಡಪಾ, ಶ್ರೀಶೈಲ, ವಿಜಾಪುರದ ಜಿಂಜಿ, ವೆಲ್ಲೂರು, ತ್ರಿಚನಾಪಳ್ಳಿಯಮೇಲೆ ದಾಳಿ ಮಾಡಿ ಕೋಟೆಗಳನ್ನು ಕೈವಶ ಮಾಡಿಕೊಂಡನು. ವಿಜಾಪೂರದವರಿಗೆ ಮೊಗಲರಮೇಲಿನ ಯುದ್ಧದಲ್ಲಿ ಸಹಾಯಮಾಡಿ ಮೊಗಲರನ್ನು ಸೋಲಿಸಿದನು. ಆದರೆ ಈ ವೀರಾಗ್ರಣಿಯ ಸ್ವಾತಂತ್ರ್ಯಸಂಗ್ರಾಮ ಇನ್ನೂ ನಡೆದಿರುವಾಗಲೇ ಇವನಿಗೆ ಖಾಯಿಲೆತಗುಲಿ ಕ್ರಿ. ಶ. ೧೬೮೦ರಲ್ಲಿ ಮರಣ ಹೊಂದಿದನು.

**೨. ಅಫಝುಲ್‌ಖಾನ :—** ಇವನು ವಿಜಾಪುರದ ಆದಿಲ್‌ಶಾಹನ ಕಡೆಗಿದ್ದ ಶೂರ ಸೇನಾಪತಿ. ಆದಿಲ್‌ಶಾಹನು ಇವನನ್ನು ಶಿವಾಜಿಯ ಪಾರುಪತ್ಯಕ್ಕಾಗಿ ಕಳಿಸಿದ್ದ, ಆದರೆ ಶಿವಾಜಿಯು ತಂತ್ರಹೂಡಿ ಮಾತುಕತೆಗಾಗಿ ಅವರಿಬ್ಬರ ಭೆಟ್ಟಿಯನ್ನು ಏರ್ಪಡಿಸಿದನು. ಅಫಝುಲನು ಶಿವಾಜಿಯನ್ನು ಆಲಿಂಗಿಸಿದಾಗ ಖಡ್ಗದಿಂದ ಕೊಲ್ಲಲು ಪ್ರಯತ್ನಿಸಿದನು. ಆದರೆ ಈ ಮೋಸವನ್ನು ಮೊದಲೇ ಅರಿತು ಉಕ್ಕಿನ ಕವಚಧಾರಿಯಾಗಿದ್ದ ಶಿವಾಜಿಗೆ ಏನೂ ಆಗಲಿಲ್ಲ. ಕೂಡಲೇ ಶಿವಾಜಿಯು ತನ್ನ ಕೈಯಲ್ಲಿ ಹಾಕಿಕೊಂಡಿದ್ದ ವ್ಯಾಘ್ರನಖದಿಂದ ಇರಿದುಕೊಂದನು.

**೩. ಬಾಜಿಪ್ರಭು :—** ಇವನು ತನ್ನ ಸ್ವಾಮಿಗಾಗಿ ಕಾದಿ ಮರಣವನ್ನೈದಿದ ವೀರ ರಣಮಲ್ಲ. ಅಫಝುಲಖಾನನ ಮಗನಾದ ಫಜಲಖಾನನೂ, ಶೂರನಾದ ಸಿದ್ದೀಜೋಹರ ಎಂಬ ಸರದಾರನೂ ಶಿವಾಜಿ ಇಳಿದುಕೊಂಡಿದ್ದ ಪನ್ಹಾಳಕೋಟೆಯನ್ನು ಮುತ್ತಿದರು. ಸ್ವಾತಂತ್ರ್ಯ ವೀರ ಶಿವಾಜಿಯ ಜೀವ ಆಪತ್ತಿನೊಳಗಿತ್ತು, ಆದರೇನು ಬಾಜೀಪ್ರಭುವು ಶಿವಾಜಿಯನ್ನು ಕೋಟೆಯ ಕಿರುದಾರಿಯಿಂದ ಪಾರುಮಾಡಿ ಕಳಿಸಿದನು. ಶಿವಾಜಿಯನ್ನು ಬೆನ್ನು ಹತ್ತಿದ ವೈರಿಸೈನ್ಯವನು ತಡೆದು ಕೆಚ್ಚೆದೆಯಿಂದ ಕಾದಿ ವೀರಸ್ವರ್ಗವನ್ನೈದಿದನು..

೪. **ನೇತಾಜಿ ಪಾಲಕರ**:— ಇವನು, ಶಿವಾಜಿಯ ನೆಚ್ಚಿನ ಗೆಳೆಯ, ವೀರ ಸೈನಿಕ. ಇವನು ಮೊಗಲರ ರಾಜ್ಯದಮೇಲೆ ದಾಳಿಮಾಡಿ ಔರಂಗಾಬಾದದವರೆಗೂ ಊರುಗಳನ್ನು ಸುಲಿದನು.

೫. **ಶಾಯಿಸ್ತೇಖಾನ**:— ಇವನು ಔರಂಗಜೇಬನ ಸೋದರ ಮಾವ. ಶೂರನಾದ್ದರಿಂದ ಇವನನ್ನು ಔರಂಗಜೇಬನು ಶಿವಾಜಿಯ ಪಾರು ಪತ್ಯಕ್ಕಾಗಿ ಕಳಿಸಿದ್ದನು. ಇವನು ಸೈನ್ಯದೊಂದಿಗೆ ಪುಣೆಯಲ್ಲಿ ತಳವೂರಿ ದಾಗ ರಾತ್ರಿಯಲ್ಲಿ ಶಿವಾಜಿಯು ಇವನ ಸೈನ್ಯದ ಮೇಲೆ ಬಿದ್ದು ಓಡಿಸಿದನು. ಶಾಯಿಸ್ತೇಖಾನನು ಜೀವ ಉಳಿಸಿಕೊಂಡು ಓಡಿ ಹೋಗಬೇಕಾದರೆ ಸಾಕು ಬೇಕಾಯಿತು. ಈ ಗೊಂದಲದಲ್ಲಿ ಶಿವಾಜಿಯು ತನ್ನ ಖಡ್ಗದಿಂದ ಶಾಯಿಸ್ತೆಖಾನನ ಕೈಬೆರಳನ್ನು ಕತ್ತರಿಸಿದನು.

೬. **ಸಂಭಾಜಿ**:— ಇವನು ಶಿವಾಜಿಯ ಹಿರಿಯಮಗ. ಸಂಭಾಜಿ ಶೂರ, ಸಾಹಸಿಗ ಆದರೆ ವಿಷಯಾಸಕ್ತತೆಯು ಇವನ ನಾಶಕ್ಕೆ ಕಾರಣ ವಾಯಿತು. ಕಲುಷನೆಂಬ ದುಷ್ಟ ಮಂತ್ರಿಯು ಈ ದುರ್ಬುದ್ಧಿಯನ್ನು ಕಲಿಸಿದನು. ಇದೇ ಚಿಂತೆಯಲ್ಲಿಯೇ ಶಿವಾಜಿ ಮರಣವಾದನೆನ್ನಬಹುದು. ಸಂಭಾಜಿಯು ಪನ್ಹಾಳಗಡದ ಸೆರೆಯಿಂದ ತಿರುಗಿ ಬರುವಷ್ಟರಲ್ಲಿಯೇ, ತಾರಾಬಾಯಿ ಮತ್ತು ಕೆಲ ಸರದಾರರು ರಾಜಾರಾಮನಿಗೆ ಪಟ್ಟಕಟ್ಟುವ ಪ್ರಯತ್ನದಲ್ಲಿದ್ದರು. ಆದರೆ ಸಂಭಾಜಿ ಈ ಒಳಸಂಚನ್ನು ಮುರಿದು ಉಗ್ರ ವಾಗಿ ದಂಡಿಸಿದನಲ್ಲದೆ, ತನ್ನ ತಂದೆ ಶಿವಾಜಿಯ ಮರಣದಿಂದ ತೆರವಾದ ರಾಜಗದ್ದುಗೆಯನ್ನು ಕ್ರಿ. ಶ. ೧೬೮೦ರಲ್ಲಿ ಏರಿದನು. ಮುಂದೆ ಸಂಭಾಜಿಯ ವಿಷಯಾಸಕ್ತತೆ ಹೆಚ್ಚಲು ರಾಜ್ಯದ ಬಂಧುರತೆ ಮುಗ್ಗಲಾಯಿತು. ಔರಂಗ ಜೇಬನು ಸಂಭಾಜಿಯನ್ನು ಸೆರೆಹಿಡಿದು ಮತಾಂತರಗೊಳ್ಳಲು ಬಲಾತ್ಕಾರಿಸಿ ದನು. ಕೆಚ್ಚೆದೆಯ ಸಂಭಾಜಿ ಒಪ್ಪದ್ದರಿಂದ ಔರಂಗಜೇಬನು ಇವನ ಕೊಲೆ ಮಾಡಿಸಿದನು.

೭. **ಬೆಳವಡಿ ಮಲ್ಲಮ್ಮ**:— ಶಿವಾಜಿಯು ತನ್ನ ಸೈನ್ಯದೊಡನೆ ಕರ್ನಾಟಕದ ಮೇಲೆ ದಂಡೆತ್ತಿ ಬಂದು ಅಂಕೋಲೆ, ಕಾರವಾರ, ಗೋಕರ್ಣ ಲಕ್ಷ್ಮೇಶ್ವರ, ಕೊಪ್ಪಳ, ಬಳ್ಳಾರಿ, ಗದಗು, ಮುಳಗುಂದಗಳನ್ನು ಸುಲಿದು ಬರುವಾಗ ದಾರಿಯಲ್ಲಿದ್ದ ಬೆಳವಡಿ ಸಂಸ್ಥಾನವನ್ನೂ ಮರಾಠಾ ಸೈನಿಕರು ಸುಲಿಯ ಹತ್ತಿದರು. ಸಂಸ್ಥಾನದ ಅರಸ ಈಶಪ್ರಭು ಸುಲಿಗೆಗಾರರನ್ನು

ಎದುರಿಸಿ ಯುದ್ಧದಲ್ಲಿ ಹತನಾದನು. ಆತನ ಪತ್ನಿ ಮಲ್ಲಮ್ಮ ದೇಸಾಯಿತಿಯು ವೀರಾವೇಶದಿಂದ ರಣಚಂಡಿಯಂತೆ ಮರಾಠರ ಚಂಡಾಡಿದಳು ಆದರೆ ಮರಾಠರ ದೊಡ್ಡ ಸೈನ್ಯದ ಮುಂದೆ ಈಕೆಯು ಕೈಸಾಗದೇ ಸೆರೆಯಾಳಾದಳು. ಶಿವಾಜಿಯು ಈಕೆಯ ಶೌರ್ಯ ಸಾಹಸವನ್ನು ಮೆಚ್ಚಿ ೨ ಊರುಗಳನ್ನು ಉಂಬಳಿಯನ್ನಾಗಿ ಕೊಟ್ಟನು.

**೮. ಬಾಳಾಜಿ ವಿಶ್ವನಾಥ:**—ಶಾಹುವು ೧೮ ವರ್ಷ ಔರಂಗಜೇಬನ ಸೆರೆಮನೆಯಲ್ಲಿ ಕಾಲಕಳೆದದ್ದರಿಂದ ಜೀವನವು ಭೋಗವಿಲಾಸದಕಡೆ ಒಲಿದಿತ್ತು, ರಾಜಕಾರಣ ಬೇಕಾಗಿರಲಿಲ್ಲ. ಆದ್ದರಿಂದ ತನ್ನ ರಾಜ್ಯದ ಆಡಳಿತೆಯ ಹೊಣೆಯನ್ನೆಲ್ಲಾ ಸಮರ್ಥನು, ಸ್ವಾಮಿನಿಷ್ಟನು ಆದ ಬಾಳಾಜಿ ವಿಶ್ವನಾಥನಿಗೆ ವಹಿಸಿದನು. ಬಾಳಾಜಿ ವಿಶ್ವನಾಥನು ಕೊಂಕಣದ ಶ್ರೀವರ್ಧನ ಗ್ರಾಮದ ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದನು. ಸಂಭಾಜಿಯ ಆಳಿಕೆಯ ಕಾಲದಲ್ಲಿ ಧನಾಜಿ ಜಾಧವನ ಕೈಯ್ಯಲ್ಲಿ ಕಾರಕೂನಿಕೆಗೆ ನಿಂತನು. ಶಾಹುವು ಹೊಸ ಸಿಂಹಾಸನವನ್ನು ಸ್ಥಾಪಿಸಲು ಸಾತಾರೆಗೆ ಬಂದಾಗ ವಿಶ್ವನಾಥನು ಸುಬೇದಾರನ ಪದವಿಗೇರಿದ್ದ. ಮುಂದೆ ತಾರಾಬಾಯಿಯೊಡನೆ ಕೈಕೊಂಡ ಯುದ್ಧದಲ್ಲಿ ಧನಾಜಿ ಶಾಹುವಿನ ಪಕ್ಷವಹಿಸಿ ಗೆದ್ದನು. ಆದರೆ ತಾರಾಬಾಯಿ ಮಹಾ ಚತುರೆ. ಸರದಾರರಲ್ಲಿ ಒಬ್ಬೊಬ್ಬರನ್ನೇ ಶಾಹುವಿನ ಪಕ್ಷದಿಂದ ಒಡೆದಳು. ಹೀಗಾಗಿ ಶಾಹುವಿನ ಪಕ್ಷ ಕುಗ್ಗಲು, ಬಾಳಾಜಿ ವಿಶ್ವನಾಥನು ಮುಂದೆ ಬಂದು ಶಾಹುವಿನ ಪಕ್ಷ ಕಟ್ಟಿದ. ಯುಕ್ತಿಪ್ರಯುಕ್ತಿಗಳಿಂದ ತಾರಾಬಾಯಿಯ ಸರದಾರರನ್ನು ತನ್ನಕಡೆ ಎಳೆದುಕೊಂಡನು. ಆದ್ದರಿಂದಲೇ ಶಾಹುವು ಇವನ ಬುದ್ಧಿ ಚಾತುರ್ಯ ಮುತ್ಸದ್ದಿತನವನ್ನು ಮೆಚ್ಚಿ ಇವನನ್ನು ತನ್ನ ಪೇಶ್ವೆಯನ್ನಾಗಿ ಮಾಡಿಕೊಂಡು ಆಡಳಿತವನ್ನೆಲ್ಲಾ ಅವನಿಗೆ ವಹಿಸಿದ.

ಬಾಳಾಜಿ ವಿಶ್ವನಾಥನು ಸುಪೇಜಿಲ್ಲೆಯ ಜಹಗೀರುದಾರ ದಾಮಾಜಿ ಥೋರಾತನನ್ನು ಸೆರೆಹಿಡಿದು ಪುರಂದರದಲ್ಲಿಟ್ಟನು. ಮರಾಠಾ ಹಡಗು ಪಡೆಯ ಮುಖ್ಯಸ್ಥ ಕಾನ್ಹೋಜೀ ಆಂಗ್ರ್ಯೆಯನ್ನು ಮನ ಒಲಿಸಿ ತನ್ನಕಡೆ ಎಳೆದುಕೊಂಡನು. ಮೊಗಲ ಸಿಂಹಾಸನದ (ದಿಲ್ಲಿ) ಮೇಲಾಟದಲ್ಲಿ ಸೈಯ್ಯದ್ ಬಂಧುಗಳ ಪಕ್ಷವಹಿಸಿ ಮುಹಮುದ್ ಶಾಹನಿಗೆ ಕ್ರಿ. ಶ. ೧೭೧೯ ರಲ್ಲಿ ದಿಲ್ಲಿಯ ಸಿಂಹಾಸನ ಕೊಡಿಸಿದನು. ಇದರಿಂದ ಮರಾಠಾ ವರ್ಚಸ್ಸು

ಹೆಚ್ಚಿತು. ಶಾಹುವು ರಾಜನೆಂದು ಮಾನ್ಯಮಾಡಲ್ಪಟ್ಟ. ಮೊಗಲರ ದಕ್ಷಿಣದ ಆರು ಸುಭೆಗಳಲ್ಲಿ ಚೌಥಾಯಿ, ಸರದೇಶಮುಖಿಯನ್ನು ವಸೂಲು ಮಾಡುವ ಅಧಿಕಾರ ದೊರೆಯಿತು. ಹೀಗೆ ಬಾಳಾಜಿಯು ತನ್ನ ಸಾಮರ್ಥ್ಯದಿಂದ ಛತ್ರಪತಿ ಸಿಂಹಾಸನದ ಖ್ಯಾತಿಯನ್ನು ಬೆಳಗಿಸಿ ಕ್ರಿ. ಶ. ೧೭೨೦ ರಲ್ಲಿ ಮರಣ ಹೊಂದಿದನು.

**೯. ಶಾಹೂ :**— ಇವನು ಸಂಭಾಜಿಯ ಮಗ. ತಾಯಿಯ ಹೆಸರು ಯೇಸೂಬಾಯಿ. ತಾಯಿ ಮಗ ಇಬ್ಬರೂ ಔರಂಗಜೇಬನ ಸೆರೆಯಲ್ಲಾಗಿದ್ದರು. ಮುಂದೆ ಇವರ ಬಿಡುಗಡೆಯಾಗಿ ಬರಲು ಸಿಂಹಾಸನಕ್ಕಾಗಿ ತಂಟೆ ಉದ್ಭವಿಸಿತು. ಕೆಲ ಸರದಾರರನ್ನು ಕೂಡಿಕೊಂಡು ತಾರಾಬಾಯಿಯನ್ನು ಸೋಲಿಸಿ ಸಾತಾರೆಯಲ್ಲಿ ಸಿಂಹಾಸನವನ್ನು ಸ್ಥಾಪಿಸಿದನು. ಇವನು ೧೮ ವರ್ಷಗಳನ್ನು ಸೆರೆಯಲ್ಲಿ ಭೋಗವಿಲಾಸದಲ್ಲಿ ಕಳೆದುದರಿಂದ ಇವನಿಗೆ ರಾಜಕಾರಣದ ಗೊಂದಲ ಬೇಡವಾಯಿತು. ಆದ್ದರಿಂದಲೇ ಆಡಳಿತೆಯನ್ನೆಲ್ಲಾ ಬಾ. ವಿಶ್ವನಾಥನಿಗೆ ವಹಿಸಿದ್ದನು. ಶಾಹುವು ಕ್ರಿ. ಶ. ೧೭೪೯ ರಲ್ಲಿ ಮರಣಹೊಂದಿದನು.

**೧೦. ೧ನೇ ಬಾಜೀರಾವ್ :**—ಇವನು ಬಾಳಾಜಿ ವಿಶ್ವನಾಥನ ಹಿರಿಯಮಗ. ಸಮರ್ಥ ಯೋಧನೂ, ರಾಜಕಾರಣ ಮುತ್ಸದ್ದಿಯೂ ಆದ ಇವನನ್ನು ಶಾವುರಾಜನು ಕ್ರಿ. ಶ. ೧೭೨೦ರಲ್ಲಿ ತನ್ನ ಪೇಶ್ವೆಯನ್ನಾಗಿ ನೇಮಿಸಿಕೊಂಡನು. ಆಗ ೧ನೇ ಬಾಜಿರಾಯನಿಗೆ ಕೇವಲ ೨೨ ವರ್ಷ ವಯಸ್ಸು, ಆದರೆ ಇವನು ತನ್ನ ತಂದೆಯ ಕೈಕೆಳಗೆ ರಾಜಕಾರಣ ಮತ್ತು ಯುದ್ಧದಲ್ಲಿ ಪಳಗಿದವನಾಗಿದ್ದನು. ಬಾಜೀರಾಯನಿಗೆ ಇಡೀ ಹಿಂದುಸ್ಥಾನವನ್ನೇ ವಶಪಡಿಸಿಕೊಳ್ಳಬೇಕೆಂಬ ಹಂಬಲವಿದ್ದಿತು. ಅಂತೆಯೇ ಉತ್ತರದಲ್ಲಿಯ ಮೊಗಲರ ಶೀಮೆಯನ್ನು ಸುಲಿದು ತನ್ನ ಸೈನ್ಯಶಕ್ತಿಯನ್ನು ಬೆಳಿಸಿದನು. ಇವನ ಮನೋಗತವನ್ನು ಕೈಗೂಡಿಸಲು ರಾಣೋಜಿ ಸಿಂಧೆ, ಮಲ್ಹಾರರಾವ್ ಹೋಳ್ಕರ್, ಉದಾಜಿ ಪವಾರ, ದಾಮಾಜಿ ಗಾಯಕವಾಡ, ಗೋವಿಂದಪಂತ ಖೇರ ಮೊದಲಾದ ಸರದಾರರು ಬಹಳ ಶ್ರಮಿಸಿದರು. ಬಾಜೀರಾಯನು ಮಾಳವ ಪ್ರಾಂತದ ಮೊಗಲ ಸುಬೇದಾರ ರಾಜಾಗಿರಿಧರನನ್ನೂ, ಭೋಪಾಳದ ಬಳಿಯಲ್ಲಿ ನಿಜಾಮ ಉಲ್ಮುಲ್ಕನನ್ನೂ, ಯುದ್ಧಗಳಲ್ಲಿ ಸೋಲಿಸಿದನು. ಕ್ರಿ. ಶ. ೧೭೩೫ರಲ್ಲಿ ಇಡೀ ಗುಜರಾತ ಪ್ರಾಂತವು ಮರಾಠರ

ಕೈವಶವಾಯಿತು. ಹೀಗೆ ಬಾಜೀರಾಯನು ಮರಾಠರ ಪ್ರಾಬಲ್ಯವನ್ನು ಹೆಚ್ಚಿಸಿ ಪೇಶ್ವೆಯರಲ್ಲಿ ಶ್ರೇಷ್ಠನೆನಿಸಿಕೊಂಡನು. ಕ್ರಿ. ಶ. ೧೭೪೦ರಲ್ಲಿ ಬಾಜೀರಾಯನು ನಾದಿರ್‌ಷಾಹ ಅಬದಾಲಿಯನ್ನು ಎದುರಿಸಲು ದಿಲ್ಲಿಗೆ ಹೋಗುತ್ತಿರುವಾಗ ಮಾರ್ಗದಲ್ಲಿ ರಾವೇರ್ ಎಂಬಲ್ಲಿ ಜ್ವರದಿಂದ ಮರಣ ಹೊಂದಿದನು

**೧೧. ಬಾಳಾಜಿ ಬಾಜಿರಾವ್ :**—ತಂದೆ ಬಾಜಿರಾಯನ ಮರಣ ಸಮಯದಲ್ಲಿ ಇವನಿಗೆ ಕೇವಲ ೧೮ ವರ್ಷ ವಯಸ್ಸು. ಇವನ ಮೇಲೆ ಶಾಹುರಾಜನಿಗೆ ಬಹಳ ಪ್ರೀತಿಯಿದ್ದುದರಿಂದ, ಶೂರನೂ, ಸರಳ ಸ್ವಭಾವದವನೂ, ಸಮರ್ಥನೂ ಆದ ಇವನನ್ನು ಪೇಶ್ವೆಯ ಪದವಿಗೆ ಆರಿಸಿಕೊಂಡನು. ಇದಕ್ಕಾಗಿ ರಾಘೋಜಿ ಭೋಸಲೆಯ ಮನಸ್ತಾಪ ಕಟ್ಟಿಕೊಳ್ಳಬೇಕಾಯ್ತು. ಬಾಳಾಜಿಯ ಕಾಲದಲ್ಲಿ ಮರಾಠರ ಕೀರ್ತಿ ಪತಾಕೆ ಕ್ರಿ. ಶ. ೧೭೫೮ರಲ್ಲಿ ಅಟಕದ ಮೇಲೆ ಹಾರಾಡಿತು, ಆದರೇನು ದುರ್ದೈವದ ಸೆಲೆಯೊಂದು ಬಲವಾಗಿ ಅಪ್ಪಳಿಸಿದ್ದರಿಂದ ಕೇವಲ ೩ ವರ್ಷದಲ್ಲಿಯೇ ಮರಾಠರು ದುರ್ದಿನಗಳನ್ನು ಕಾಣಬೇಕಾಯಿತು ಇವನ ಕಾಲದಲ್ಲಿ ರಾಘೋಜಿಯು ಕರ್ನಾಟಕದ ಮೇಲೆ ದಾಳಿಮಾಡಿ ಯಶಸ್ವಿಯಾದನು. ರಾಘೋಬನೇ ಬಂಗಾಲ, ಬಿಹಾರ, ಓಡಿಸಾದ ಸುಬೇದಾರರನ್ನು ಮೆತ್ತಗೆ ಮಾಡಿದನು. ಬಾದಶಾಹನಿಂದ ಮಾಳವ, ಆಗ್ರಾ, ಅಲಹಾಬಾದಗಳ ಸುಭೆಗಳಲ್ಲಿ ಚೌಥಾಯಿ ಮತ್ತು ಸರದೇಶಮುಖಿ ವಸೂಲು ಮಾಡುವ ಹಕ್ಕೂ ಮರಾಠರಿಗೆ ದೊರಿಯಿತು. ಕ್ರಿ ಶ. ೧೭೪೯ರಲ್ಲಿ ಶಾಹುವು ಮರಣ ಹೊಂದಲು ಅವನಿಗೆ ಮಕ್ಕಳಿಲ್ಲದ್ದರಿಂದ ಪೇಶ್ವೆಯೇ ಸರ್ವಾಧಿಕಾರಿಯಾದನು. ಶಾಹೂನ ಇಚ್ಛೆಯಂತೆ ರಾಮರಾಜ (ತಾರಾಬಾಯಿಯ ಮೊಮ್ಮಗ)ನ ಪರವಾಗಿ ಅಧಿಕಾರ ವಹಿಸಿಕೊಂಡು ಪುಣೆಗೆ ರಾಜಧಾನಿಯನ್ನು ಬದಲಾಯಿಸಿದನು. ಉತ್ತರ ಹಿಂದುಸ್ತಾನದ ರೋಹಿಲರನ್ನು ಕ್ರಿ. ಶ. ೧೭೫೦ರಲ್ಲಿ ಸೋಲಿಸಿ, ಅಯೋಧ್ಯೆಯ ನವಾಬನಿಂದ ಗಂಗಾ ಯಮುನಾ ನದಿಯ ಮಧ್ಯದ ಪ್ರದೇಶವನ್ನು ಪಡೆದನು. ರಾಘೋಬನು ದಿಲ್ಲಿ, ಲಾಹೋರಗಳನ್ನು ವಶಪಡಿಸಿಕೊಂಡು ಅಬ್ದಾಲಿಯ ಸುಬೇದಾರ ತಿಮೂರ ಶಾಹನನ್ನು ಹೊಡೆದೋಡಿಸಿದನು. ಅಟಕದವರೆಗೂ ಸಾಗಿ ಮರಾಠರ ಕೀರ್ತಿ ಪತಾಕೆಯನ್ನು ನೆಟ್ಟನು. ಮತ್ತೆ ಕ್ರಿ. ಶ ೧೭೫೯ರಲ್ಲಿ ಅಹಮ್ಮದ್ ಶಾಹ ಅಬ್ದಾಲ್ಲಿಯು ಲೊಹೋರಿನ ಮರಾಠಾ ಸರದಾರನನ್ನು

ಸೋಲಿಸಿ, ದಿಲ್ಲಿಯ ಮೇಲೆ ಏರಿಬಂದು ದತ್ತಾಜಿ ಸಿಂಧೆಯನ್ನು ಯುದ್ಧದಲ್ಲಿ ಕೊಂದನು. ಈ ಸುದ್ದಿಯನ್ನು ಕೇಳಿ ಬಾಳಾಜಿ ಬಾಜೀರಾಯ (ನಾನಾ ಸಾಹೇಬ್)ನು ಸದಾಶಿವರಾಯನ ಕೈಕೆಳಗೆ ೨೦,೦೦೦ ಸೈನ್ಯವನ್ನು ಕ್ರಿ. ಶ. ೧೭೬೦ರಲ್ಲಿ ಕಳುಹಿದನು. ಈ ಯುದ್ಧದಲ್ಲಿ ಬಾಳಾಜಿಯ ೧೭ ವರ್ಷ ವಯಸ್ಸಿನ ಮಗ ವಿಶ್ವಾಸರಾವ, ಬಳವಂತರಾವ್ ಮೆಹಂದಳೆ, ಸಮಶೇರ ಬಹದ್ದೂರ್, ವಿಠಲ ಶಿವದೇವ ಮೊದಲಾದ ಅನೇಕ ವೀರರು ಭಾಗವಹಿಸಿದ್ದರು. ಮರಾಠರು ದಿಲ್ಲಿಯ ಬಳಿ ಬರುತ್ತಲೇ ಅಬದಾಲಿ "ಕುಂಜಪುರಕ್ಕೆ" ಓಡಿ ಹೋದನು., ಮರಾಠರ ಸೈನ್ಯ ಪಾನೀಪತ್ತದಲ್ಲಿ ಬೀಡು ಬಿಡಲು ಅಬದಾಲಿಯು ಅವರಿಗೆ ಪೂರೈಕೆ ಕಟ್ಟಾಗುವಂತೆ ಮಾಡಿದನು. ಮರಾಠರಲ್ಲಿದ್ದ ಅನ್ನಾಹಾರವೆಲ್ಲ ತೀರಹತ್ತಿತು. ಸೈನಿಕರು ಹಸಿವೆಯಿಂದ ಬಳಲಿದರು. ಕೊನೆಗೆ ಕ್ರಿ. ಶ. ೧೭೬೧ ಜನವರೀ ೧೪ಕ್ಕೆ ಘೋರ ಸಂಗ್ರಾಮವಾಯಿತು. ಮೊದಲಿಗೇನೋ ಮರಾಠರ ಕೈ ಮೇಲಿತ್ತು ಆ ಮೇಲೆ ಎಲ್ಲಿಂದಲೋ ಬಂದ ಒಂದು ಗುಂಡು ಬಡಿದು ವಿಶ್ವಾಸರಾವ ಸತ್ತನು. ದಣಿದ ಮತ್ತು ಹಸಿದ ಸೈನಿಕರ ಮೇಲೆ ಅಬದಾಲಿಯ ಕಾದಿಟ್ಟ ಸೈನ್ಯ ಬಿದ್ದಿತು. ಯುದ್ಧದಲ್ಲಿ ಸದಾಶಿವರಾಯ, ಜನಕೋಜಿಸಿಂಧೆ, ಇಬ್ರಾಹಿಮಖಾನ, ಸಮಶೇರ ಬಹದ್ದೂರ್ ಮೊದಲಾದ ಶ್ರೇಷ್ಠ ಸರದಾರರು ಮಡಿದರು. ಮರಾಠರಿಗೆ ಪೂರ್ಣ ಸೋಲುಂಟಾಯಿತು. ಬಾಳಾಜಿಯು ತನ್ನ ಮಗನ ಮರಣವನ್ನೂ ಸೋಲಿನ ಸುದ್ದಿಯನ್ನೂ ಕೇಳಿ ಚಿಂತೆಯಿಂದ ಕ್ರಿ. ಶ. ೧೭೬೧ರಲ್ಲಿ ಮರಣವಾದನು.

೧೨. **ತಾರಾಬಾಯಿ** :—ಈಕೆಯು ರಾಜಾರಾಮನ ಹೆಂಡತಿ. ಹೆಂಗಸಾದರೂ ಈಕೆ ಮಹಾ ಮಹತ್ವಾಕಾಂಕ್ಷಿಣಿ, ಶೂರಳೂ ಆಗಿದ್ದಳು. ರಾಜಕಾರಣದಲ್ಲಿ ಗಂಡಸಿನಂತೆ ಮುತ್ಸದ್ದಿತನದಿಂದ ಕೆಲಸಮಾಡುತ್ತಿದ್ದಳು. ಶಿವಾಜಿಯ ಮರಣಾನಂತರ ಸಾಂಭಾಜಿ ಸೆರೆಯಲ್ಲಿದ್ದುದನ್ನು ಸಾಧಿಸಿ ತನ್ನ ಗಂಡನನ್ನೇ ಪಟ್ಟಕ್ಕೆ ಕೂಡಿಸುವ ಸಂಚು ನಡೆಯಿಸಿದ್ದಳು, ಆದರೆ ಅದು ಯಶಸ್ವಿಯಾಗಲಿಲ್ಲ. ರಾಜಾರಾಮನ ಮರಣಾನಂತರ ಮೂರುವಾರಗಳಲ್ಲಿಯೇ ಈಕೆಯ ಹಿರಿಯಮಗ ಕರ್ಣನೆಂಬವನು ಸತ್ತನು, ಆದ್ದರಿಂದ ತನ್ನ ಎರಡನೇ ಮಗನನ್ನೇ ರಾಜನೆಂದು ಸಾರಿ, ತಾನೇ ಆಡಳಿತ ನಡೆಸಹತ್ತಿದಳು. ಈಕೆಯ ಕಾರ್ಯಕ್ಷಮತೆಯಿಂದ ಹುರುಪುಗೊಂಡ ಮರಾಠರು ಮೊಗಲರ ಪ್ರದೇಶದ ಮೇಲೆ ನುಗ್ಗಿ ಸುಲಿಗೆಮಾಡಹತ್ತಿದರು. ತಾರಾ

ಬಾಯಿಯು ಕೊಲ್ಹಾಪುರದಲ್ಲಿ ಮರಾಠಾ ಸಿಂಹಾಸನವನ್ನು ಸ್ಥಾಪಿಸಿ ತನ್ನ ಮಗ ಶಿವಾಜಿಯನ್ನು ಪಟ್ಟಕ್ಕೆ ಕೂಡಿಸಿದಳು. ಶಾಹುರಾಜನ ಮರಣವಾದ ಕೂಡಲೇ ಈಕೆ ಮರಾಠಾ ರಾಜ್ಯದ ಆಡಳಿತವನ್ನೆಲ್ಲಾ ವಹಿಸಲು ಪ್ರಯತ್ನಿಸಿದಳು, ಆದರೆ ಬಾಳಾಜಿ ಬಾಜಿರಾಯನು ಈಕೆಯನ್ನು ಸೆರೆಹಿಡಿದಿಟ್ಟನು.

೧೩. **ಅಹಮದ್ ಷಹ ಅಬದಾಲಿ:**—ಇವನು ನಾದಿರ್‌ಶಾಹನ ತರುವಾಯ ಅಫಘಾನಿಸ್ಥಾನದಲ್ಲಿ ಆಳುತ್ತಿದ್ದನು ಕ್ರಿ. ಶ. ೧೭೪೮ರಿಂದ ಹಿಂದುಸ್ತಾನದ ಮೇಲೆ ದಾಳಿ ಇಡಹತ್ತಲು, ಆಗ ದಿಲ್ಲಿಯ ಅರಸನಾಗಿದ್ದ ಉಲ್ಮುಲ್ಕನ ಮಗನಾದ ಗಾಜಿಉದ್ದೀನನು ಹೆದರಿ ಮರಾಠರ ಸ್ನೇಹ ಬಯಸಿದನು. ಇದಕ್ಕಾಗಿ ಮರಾಠರಿಗೆ ಉತ್ತರಭಾರತದಲ್ಲಿ ಸಿಂಧೂ ನದಿಯ ವರೆಗಿನ ಪ್ರದೇಶದಲ್ಲಿ ಚೌಥಾಯಿ ಎತ್ತುವ ಹಕ್ಕನ್ನಿತ್ತನು. ಅಬದಾಲಿಯು ಮತ್ತೆ ದಾಳಿಮಾಡಿ ಲಾಹೋರ, ಮುಲ್ತಾನಗಳನ್ನು ವಶಪಡಿಸಿಕೊಂಡು, ದಿಲ್ಲಿಯ ಮೇಲೆ ನುಗ್ಗಿ ದತ್ತಾಜಿ ಶಿಂದೆಯನ್ನು ಯುದ್ಧದಲ್ಲಿ ಕೊಂದನು. ದಿಲ್ಲಿ ಅಬದಾಲಿಯ ಕೈಸೇರಿತು. ಇದನ್ನು ಕೇಳಿದ ಬಾಳಾಜಿ ಬಾಜೀರಾಯನು ಸದಾಶಿವರಾಯನ ಆದಿಪತ್ಯದಲ್ಲಿ ಅನೇಕ ಪ್ರಮುಖ ಮರಾಠಾ ಸರದಾರರನ್ನೂ, ದೊಡ್ಡ ಸೈನ್ಯವನ್ನೂ ಅಬದಾಲಿಯ ಮೇಲೆ ಕಳುಹಿದನು ಮರಾಠಾರ ಸೈನ್ಯ ದಿಲ್ಲಿಯ ಹತ್ತಿರ ಬರುತ್ತಲೆ ಅಬದಾಲಿ ದಿಲ್ಲಿಯನ್ನು ತೆರವು ಮಾಡಿ "ಕುಂಜಪುರಕ್ಕೆ" ಓಡಿಹೋದನು. ಮರಾಠರು ದಿಲ್ಲಿಯನ್ನು ವಶಪಡಿಸಿಕೊಂಡು ಪಾಣೀಪತ್ತದಲ್ಲಿ ಸೈನ್ಯ ಬೀಡು ಬಿಟ್ಟರು. ಇತ್ತ ಅಬದಾಲಿಯು ಮರಾಠರನ್ನು ಎದುರಿಸಧೇ ಅವರ ಪೂರೈಕೆಯ ಮಾರ್ಗಗಳನೆಲ್ಲಾ ಕಟ್ಟು ಮಾಡಿದನು. ಮರಾಠರಿಗೆ ಅನ್ನಾನ್ನಗಳ ಕೊರತೆಯಾಗಿ ಸೈನಿಕರು ಬಳಲ ಹತ್ತಿದರು. ಅಂತೂ ಕ್ರಿ. ಶ. ೧೭೬೧ ಜನೇವರಿ ೧೪ರದಿನ ಅಬದಾಲಿ ಪ್ರತ್ಯಕ್ಷವಾಗಿ ಯುದ್ಧಕ್ಕೆ ನಿಂತನು. ಮೊದಲು ಮರಾಠರ ಕೈಮೇಲಾಗಿತ್ತು ಆದರೆ ಸೈನ್ಯದ ಮಧ್ಯ ಭಾಗಕ್ಕೆ ಎಸೆದ ಗುಂಡೊಂದು ವಿಶ್ವಾಸರಾಯನನ್ನು ಆಹುತಿ ತೆಗೆದುಕೊಂಡಿತು. ಈಗ ಅಬದಾಲಿಯ ಕಾದಿಟ್ಟ ಸೈನಿಕರು ದಾಳಿಮಾಡಿದರು. ದಣಿದ ಮರಾಠಾ ಸೈನಿಕರು ದಾಳಿಯ ರಭಸಕ್ಕೆ ಹೆದರಿ ಓಡಹತ್ತಿದರು. ಕೆಲ ಸರದಾರರು ಕಲಿತನದಿಂದ ಕಾದಿ ವೀರಸ್ವರ್ಗವನ್ನೈದಿದರು. ಅಬದಾಲಿಗೆ ವಿಜಯ ಸಿಕ್ಕಿತು.

**೧೪. ೧ನೇ ಮಾಧವರಾಯ** :— ಇವನು ಬಾಳಾಜಿ ಬಾಜೀರಾಯನ ೨ನೇ ಮಗ. ಮಾಧವರಾಯ ಪೇಶ್ವೆಯಾದಾಗ ಇವನಿಗೆ ಕೇವಲ ೧೬ ವರ್ಷ ವಯಸ್ಸು. ಆದರೆ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು. ತನ್ನ ತಂದೆಯ ಆಳಿಕೆಯಲ್ಲಿ ಮರಾಠರಿಗೆ ಹತ್ತಿದ ಕಲಂಕವನ್ನು ತೊಡೆದೊಗೆಯಲು ಪಣತೊಟ್ಟನು. ಇವನ ಕಕ್ಕನಾದ ರಾಘೋಬನು ಮಾಧವರಾಯನಿನ್ನೂ ಚಿಕ್ಕವನೆಂಬ ನೆಪ ಮುಂದೆ ಮಾಡಿ ತಾನೇ ಆಡಳಿತೆ ನಡೆಸ ಹತ್ತಿದ್ದನು. ಮೊದಲಿಗೆ ಅಧಿಕಾರದಲ್ಲಿದ್ದ ಸರದಾರರನ್ನು ಬದಿಗೊತ್ತಿ, ತನ್ನ ಪಕ್ಷದವರನ್ನು ಅಧಿಕಾರಕ್ಕೆ ಇಟ್ಟುಕೊಳ್ಳಹತ್ತಿದನು. ಇದರಿಂದ ಮೊದಲಿನ ಅನೇಕ ಸರದಾರರು ಸಿಟ್ಟಿಗೆದ್ದು ನಿಜಾಮನ ಪಕ್ಷವನ್ನು ಸೇರಿದರು. ನಿಜಾಮನು ಈ ಸಂಧಿಯನ್ನು ಉಪಯೋಗಿಸಿಕೊಂಡು ಮಾಧವರಾಯನ ಮೇಲೆ ಏರಿ ಬಂದನು. ನಿಜಾಮನ ಸೈನ್ಯ ಇನ್ನೂ ಮಾರ್ಗದಲ್ಲಿರುವಾಗಲೇ ರಾಘೋಬನೂ, ಮಾಧವರಾಯನೂ ಸೈನ್ಯ ಸಮೇತ ಅವರ ಮೇಲೆ ಬಿದ್ದು ಅಭೂತಪೂರ್ವ ವಿಜಯ ಸಂಪಾದಿಸಿದರು. ನಿಜಾಮನು ಸೋತು ಒಪ್ಪಂದಮಾಡಿ ಕೊಂಡನು. ಮಾಧವರಾಯ ಆಡಳಿತೆ ತಾನೇ ವಹಿಸಿಕೊಂಡು ಹಳೆಯ ಸರದಾರರನ್ನೆಲ್ಲಾ ತನ್ನ ಕಡೆ ಎಳೆದುಕೊಂಡನು. ಮಾಧವರಾಯನು ಮೈಸೂರಿನ ಮೇಲೆ ಕ್ರಿ. ಶ. ೧೭೬೪ ರಲ್ಲಿ ಏರಿಹೋಗಿ ಹೈದರಾಲಿಯನ್ನು ಸೋಲಿಸಿ ಒಪ್ಪಂದ ಮಾಡಿಕೊಂಡನು. ಇದರಿಂದ ಮರಾಠರಿಗೆ ಕೃಷ್ಣಾ ತುಂಗಭದ್ರಾ ನದಿಗಳ ಮಧ್ಯಭಾಗವೂ ೩೦ ಲಕ್ಷ ರೂಪಾಯಿ ಕಪ್ಪುಕಾಣಿಕೆಯೂ ಸಿಕ್ಕಿತು. ಹೈದರಾಲಿಯು ಮತ್ತೆ ಪುಂಡಾಟಿಕೆ ನಡೆಸಲು ಕ್ರಿ. ಶ. ೧೭೬೬ ರಲ್ಲಿಯೂ ಮತ್ತು ಕ್ರಿ. ಶ. ೧೭೭೨ ರಲ್ಲಿಯೂ ಮಾಧವರಾಯನಿಂದ ಸೋಲಿಸಲ್ಪಟ್ಟನು. ಪ್ರತಿಸಲವೂ ಮಾಧವರಾಯನಿಗೆ ತಪ್ಪುದಂಡಕ್ಕಾಗಿ ಹಣ ಮತ್ತು ಭೂಭಾಗ ದೊರೆಯಿತು. ರಾಘೋಬನು ದುರಾಸೆಯಿಂದ ಅಮೃತರಾವ ಎಂಬ ಹುಡುಗನನ್ನು ದತ್ತಕ ತೆಗೆದುಕೊಂಡು ಅರ್ಧರಾಜ್ಯಕ್ಕಾಗಿ ತಂಟೆ ಹೂಡಿ ಯುದ್ಧಕ್ಕೆ ನಿಂತನು. ಮಾಧವರಾಯನು ಕೂಡಲೇ ಅವನನ್ನು ಹಣಿದು ಕ್ರಿ. ಶ. ೧೭೬೯ ರಲ್ಲಿ ಪುಣೆಯ ಶನಿವಾರವಾಡೆಯಲ್ಲಿ ಸೆರೆಯಿಟ್ಟನು. ಮಾಧವರಾಯ ತನ್ನ ಲಕ್ಷವನ್ನು ಉತ್ತರ ಹಿಂದುಸ್ತಾನದಕಡೆ ತಿರುಗಿಸಿ ರಜಪೂತಾಸ್ಥಾನದ ಮೇಲೆ ದಾಳಿಮಾಡಿ ೧೦ ಲಕ್ಷ ಚೌಥಾಯಿ ವಸೂಲು ಮಾಡಿದನು. ಜಾಟರು ಮತ್ತು ರೋಹಿಲ

ರನ್ನು ಹಣ್ಣುಮಾಡಲಾಯಿತು. ಇಂಗ್ಲೀಷರ ಸಂರಕ್ಷಣೆಯಲ್ಲಿದ್ದ ಶಹಾ ಆಲಮನನ್ನು ಕ್ರಿ. ಶ. ೧೭೭೧ ರಲ್ಲಿ ದಿಲ್ಲಿಯ ಪಟ್ಟದ ಮೇಲೆ ಕೂಡಿಸಿದನು. ಆದರೆ ಅಳಿದ ಕೀರ್ತಿಯನ್ನು ಗಳಿಸಿದ ಮಾಧವರಾಯ ಬಹಳ ದಿನ ಬದುಕಲಿಲ್ಲ. ಕೇವಲ ೨೮ ವರ್ಷದವನಿರುವಾಗಲೇ (೧೭೭೨) ರಲ್ಲಿ ಮರಣ ಹೊಂದಿದನು.

**೧೫. ನಾನಾ ಫಡಣವೀಸ್ :**— ಇವನ ಜನ್ಮ ಕ್ರಿ. ಶ. ೧೭೪೧ ರಲ್ಲಿ ಆಯಿತು. ಕ್ರಿ. ಶ. ೧೭೫೬ ರಲ್ಲಿ ತನ್ನ ತಂದೆಯ ಜಾಗೆಗೆ ಫಡಣವೀಸ್ ಆದನು. ಇವನು ಮಹಾಮೇಧಾವಿಯೂ, ಮುತ್ಸದ್ದಿಯೂ, ಸತ್ಯಶೀಲನೂ ಆಗಿದ್ದನು. ಕ್ರಿ. ಶ. ೧೭೭೫ ರಲ್ಲಿ ಸವಾಯಿ ಮಾಧವರಾಯನ ಜನನ ವಾಗಲು **ನಾನಾನು** ಆಡಳಿತಮಂಡಳವನ್ನು ಮಾಡಿಕೊಂಡು ತಾನು ಅವರ ಮುಖಂಡನಾದನು. ಇಂಗ್ಲೀಷರು **ರಾಘೋಬನ** ಪಕ್ಷಕಟ್ಟಿ ಯುದ್ಧಕ್ಕೆ ಬಂದರು. ಕೊನೆಗೆ **ಸಾಲಬಾಯಿ**ಯಲ್ಲಿ ಒಪ್ಪಂದವಾಯಿತು. ನಾನಾನ ದೇಶಪ್ರೇಮ ಅತುಲವಾಗಿತ್ತು, ಆದ್ದರಿಂದ ಸರದಾರರನ್ನೆಲ್ಲಾ ಒಟ್ಟುಗೂಡಿಸಿ ರಾಜ್ಯದ ಭದ್ರತೆಯನ್ನು ಕಾಯ್ದನು. ನಾನಾ ಫಡಣವೀಸನು ಕ್ರಿ. ಶ. ೧೮೦೦ರಲ್ಲಿ ಮರಣ ಹೊಂದಿದನು.

**೧೬. ಹೈದರಾಲಿ :**— ಇವನು ಫತ್ತೆ ಮಹಮೂದ ಎಂಬ ಸಣ್ಣ ಜಹಗೀರದಾರನ ಮಗ. ನಿರಕ್ಷರಿಯಾದರೂ, ಶೂರ, ಸಾಹಸಿ. ಆದ್ದರಿಂದಲೇ ಮೊದಲು ಸಿಪಾಯಿಯಾಗಿ ಸೇರಿದವನು ತನ್ನ ಶೌರ್ಯ ಸಾಮರ್ಥ್ಯದಿಂದ ಸೇನಾಧಿಪತಿಯ ಪದವಿಗೇರಿದ. ದೇವನ ಹಳ್ಳಿಯ ಮುತ್ತಿಗೆಯಲ್ಲಿ ಇವನು ತೋರಿದ ಸಾಹಸಕ್ಕೆ ಮೆಚ್ಚಿ ನಂಜರಾಜಯ್ಯನು ನಾಯಕನ ಕೆಲಸಕೊಟ್ಟನು. ಒಂದರಿಂದೊಂದು ಪದವಿಗೇರುತ್ತ ಮೈಸೂರು ಸೇನಾಧಿಪತಿಯಾದ. ಕೊನೆಗೆ ಅರಸನನ್ನೇ ಧಿಕ್ಕರಿಸಹತ್ತಿದ. ಇವನನ್ನು ಬಗ್ಗುಬಡಿಯಲು **ಇಮ್ಮಡೀ ಕೃಷ್ಣರಾಜರು** ಗುಪ್ತವಾಗಿ ಪೇಶ್ವೆಯರ ಸಹಾಯ ಕೇಳಲು ಇದರ ಸುಳಿವು ಹತ್ತಿ ಹೈದರಾಲಿಯು ಅರಸನನ್ನು ಕ್ರಿ. ಶ. ೧೭೬೧ರಲ್ಲಿ ಮೂಲೆಗೆ ತಳ್ಳಿ ಉಂಬಳಿಯನ್ನು ಗೊತ್ತುಪಡಿಸಿದನು. ಕೊಬ್ಬಿದ ಹೈದರಾಲಿಯು ಕರ್ನಾಟಕ ವನ್ನೆಲ್ಲಾ ಸುತ್ತಾಡಿ ಸುಲಿಗೆ ಮಾಡಿದ. ಇದನ್ನು ಕೇಳಿ ಪೇಶ್ವೇ ಮಾಧವ ರಾಯನು ಸೈನ್ಯ ಕಳಿಸಿ ಹೈದರಾಲಿಯನ್ನು ಸೋಲಿಸಿ ತಪ್ಪು ದಂಡವನ್ನೂ, ಭೂಮಿಯನ್ನೂ ಪಡೆದ. ಹೈದರಾಲಿ ಮತ್ತೆ ಮತ್ತೆ ಪುಂಡಾಟಿಕೆ ನಡೆಸಿದ್ದರಿಂದ

ಪೇಶ್ವೆ ಮತ್ತು ನಿಜಾಮರು ಸೈನ್ಯಕಳಿಸಿ ಹೈದರನನ್ನು ಸೋಲಿಸಿದರು. ಹೈದರನು ಕ್ರಿ. ಶ. ೧೭೮೦ ರಲ್ಲಿ ಇಂಗ್ಲೀಷರೊಡನೆ ಯುದ್ಧದಲ್ಲಿ ಮರಣ ಹೊಂದನು.

೧೭. **ಚಿದಂಬರ ದೀಕ್ಷಿತರು** :— ಇವರು ಮುರಗೋಡದಲ್ಲಿದ್ದ ಮಹಾ ಸತ್ಪುರುಷರು. ರಾಮದುರ್ಗದ ಬಳಿಯ ಗೊಣ್ಣಾಗರದಲ್ಲಿ ಯಜ್ಞ ಮಾಡಿದಶ್ರೇಷ್ಠ ಸತ್ಪುರುಷರು ಎನಿಸಿಕೊಂಡರು. ಇವರು ೨ನೇ ಬಾಜೀರಾಯ ನಿಗೆ ಅನೇಕ ರಾಜಕೀಯ ಸಲಹೆಗಳನ್ನಿತ್ತಿದ್ದರು. ಆದರೆ ಇವನು ಲಕ್ಷ್ಯಗೊಡ ಲಿಲ್ಲ. ದೀಕ್ಷಿತರು ಸರ್ವಜಾತಿಯವರನ್ನೂ ಸಮಾನತ್ವದಿಂದ ಕಾಣುತ್ತಿದ್ದು ದರಿಂದ ಎಲ್ಲ ಜಾತಿಯವರೂ ಇವರಿಗೆ ನಡೆದುಕೊಳ್ಳುತ್ತಿದ್ದರು.

೧೮. **೨ನೇ ಬಾಜೀರಾಯ** :— (೧೭೯೬–೧೮೧೮) ಸವಾಯಿ ಮಾಧವರಾಯನು ಅಪಮೃತ್ಯುಗೀಡಾಗಲು ೨ನೇ ಬಾಜೀರಾಯ ಪೇಶವೆ ಯಾದನು. ಇವನು ಆನಂದೀಬಾಯಿಯಮಗ. ತಾಯಿಯ ಮಹತ್ವಾ ಕಾಂಕ್ಷೆಯೂ ದುರ್ಬುದ್ಧಿಯೂ ಇವನಲ್ಲಿ ಒಡೆದು ಕಾಣುತ್ತಿದ್ದುವು. ನಾನ. ಫಡಣವೀಸನ ಮರಣದಿಂದ ಈ ಅವಿವೇಕಿಗೆ ಹಿಡಿಯುವವರೇ ಇಲ್ಲವಾದರು. ಇದರಿಂದ ಆಡಳಿತೆಯ ಭದ್ರತೆ ತಪ್ಪಿ ಸರದಾರರು ಸ್ವತಂತ್ರರಾಗಹತ್ತಿದರೂ ಅಲ್ಲಲ್ಲಿ ಕೊಲೆ, ಸುಲಿಗೆ ದೊಂಬೆಗಳು ಹುಟ್ಟಿಕೊಂಡವು. ಇವನು ಇಂಗ್ಲೀಷರ ಮೊರೆಹೊಕ್ಕು **ವಸಯಿಯ**ಲ್ಲಿ ಹೇಯವಾದ ಕರಾರುಗಳಿಂದ ಒಪ್ಪಂದಮಾಡಿ ಕೊಂಡನು. ಇವನು ಮತ್ತೆ ಇಂಗ್ಲೀಷರ ಮೇಲೆ ತಿರುಗಿ ಬೀಳಲು ಪ್ರಯತ್ನಿ ಸಲು ಇಂಗ್ಲೀಷರು ಕೋರೇಗಾವಿನಲ್ಲಿ ಇವನನ್ನು ಪೂರ್ಣಪರಾಭವಗೊಳಿ ಸಿದರು. ಇವನನ್ನು ಪದಚ್ಯುತಗೊಳಿಸಿ ವರ್ಷಾಶನ ಗೊತ್ತುಮಾಡಿ ಬಹ್ಮಾ ವರ್ತದಲ್ಲಿಟ್ಟರು. ಮರಾಠರ ರಾಜ್ಯವೆಲ್ಲಾ ಇಂಗ್ಲೀಷರ ಕೈಸೇರಿತು. ಬಾಜೀರಾಯನೇ ಪೇಶ್ವೆಯರ ಆಳಿಕೆಯ ವಿನಾಶಕ್ಕೆ ಕಾರಣನಾದನು.

೧೯. **ರಾಮಶಾಸ್ತ್ರಿ ಪ್ರಭುಣೆ** :— ಇವರು ಮಾಹುಲಿಗ್ರಾಮದ ಒಂದು ಬಡಕುಟುಂಬದಲ್ಲಿ ಜನಿಸಿದರು. ಒಬ್ಬರು ಇವನ ಬಡತನವನ್ನು ಹೀಯಾಳಿಸಲು ಪಣತೊಟ್ಟು ಕಾಶಿಗೆ ಹೋಗಿ ಅತಿ ಕಷ್ಟದಿಂದ ವಿದ್ಯಾರ್ಜನೆ ಮಾಡಿ ಹಿಂತಿರುಗಿ ಪೇಶ್ವೆಯ ರಾಜ್ಯದಲ್ಲಿ ನ್ಯಾಯಾಧೀಶರಾದರು. ಇವರು ಮೇಧಾವಿಗಳೂ, ಗಟ್ಟಿ ಮನಸ್ಸಿನವರೂ, ನ್ಯಾಯಪರರೂ ಆದ್ದರಿಂದ ಅಸತ್ಯತೆ ಅನ್ಯಾಯವನ್ನು ಯಾರೇ ಮಾಡಿದ್ದರೂ ಲೆಕ್ಕಿಸದೆ ಟೀಕಿಸುತ್ತಿದ್ದರು. ಇವರು

೧ನೇ ಮಾಧವರಾಯನಿಗೆ ತನ್ನ ಕರ್ತವ್ಯವನ್ನು ಮಾಡಲು ಎಚ್ಚರಿಸಿದ ಘಟನೆ ಬಹು ಸ್ವಾರಸ್ಯವಾಗಿದೆ. ಇವರು **ರಾಘೋಬನೇ** ನಾರಾಯಣರಾಯನ ಕೊಲೆಗಾರನೆಂದು ಸಾರಿ ಮರಣದಂಡನೆ ವಿಧಿಸಿದ್ದರು. ಇವರು ಕ್ರಿ. ಶ. ೧೭೮೯ರಲ್ಲಿ ಕಾಲವಾದರು.

**ಪ್ರಶ್ನೆ :—ಕೆಳಗಿನ ವಾಕ್ಯಗಳನ್ನು ಸಕಾರಣವಾಗಿ ಸ್ಪಷ್ಟೀಕರಿಸಿರಿ.**

(೧) ಜೀಜಾಬಾಯಿ ವೀರಪತ್ನಿಯಿದ್ದಂತೆ ವೀರಮಾತೆಯೂ ಅಹುದು.
(೨) ಶಿವಾಜಿಯ ಸ್ವರಾಜ್ಯಸ್ಥಾಪನೆಗೆ ಒಳ್ಳೇ ಯೋಗ ಒದಗಿದ್ದಿತು.
(೩) ಶಿವಾಜಿಯ ಸ್ವರಾಜ್ಯಸ್ಥಾಪನೆಯ ಕಾರ್ಯದಲ್ಲಿ ಜನಬಲವಿದ್ದಂತೆ ವಿಧಿಬಲವೂ ಇದ್ದಿತೆನ್ನಬಹುದು.
(೪) ಶಿವಾಜಿಯು ಪರಸ್ತ್ರೀಯರನ್ನು ತಾಯಿಯಂತೆ ಕಾಣುತ್ತಿದ್ದನು.
(೫) ಬಾಜಿಪ್ರಭು ತನ್ನ ಸ್ವಾಮಿಗಾಗಿ ಜೀವವನ್ನರ್ಪಿಸಿದನು.
(೬) ಶಿವಾಜಿಯು ಮೊಗಲರ ಸರದಾರರಾದ ಜಸವಂತಸಿಂಗ ಮತ್ತು ದಿಲೇರಖಾನರೊಡನೆ ಒಪ್ಪಂದಮಾಡಿಕೊಂಡನು.
(೭) ಶಿವಾಜಿಯು ಔರಂಗಜೇಬನ ಮೋಸಕ್ಕೆ ಪ್ರತಿಮೋಸಮಾಡಿ ತೋರಿಸಿದನು.
(೮) ಶಿವಾಜಿಯು ತನ್ನ ಮಗನ ನಡತೆಯಿಂದ ವ್ಯಥೆಪಟ್ಟು ಕೊರಗಿ ಸತ್ತನು.
(೯) ಶಾಹುರಾಜನ ಸಿಂಹಾಸನ ಉಳಿಯಲು ಬಾಳಾಜಿ ವಿಶ್ವನಾಥನೇ ಕಾರಣನಾಗಿದ್ದನು.
(೧೦) ಬಾಳಾಜಿ ಮಂತ್ರಿಯಾದ ಮೇಲೆ ಮರಾಠಾ ರಾಜ್ಯದಲ್ಲಿ ಹೊಸ ಯುಗವೇ ಪ್ರಾರಂಭವಾಯಿತು.
(೧೧) ಬಾಳಾಜಿ ವಿಶ್ವನಾಥನು ದಿಲ್ಲಿಯ ಬಾದಶಹನಮೇಲೆ ತನ್ನ ವರ್ಚಸ್ಸು ಸ್ಥಾಪಿಸಿದನು.
(೧೨) ಬಾಳಾಜಿ_ಜಹಗೀರಿ (ಸರಂಜಾಮಿ) ಪದ್ಧತಿಯನ್ನು ಆರಂಭ ಮಾಡಿದನು.
(೧೩) ೧ನೇ ಬಾಜೀರಾಯನಿಗೆ ಕೇವಲ ೨೦ವರ್ಷ ವಯಸ್ಸಾಗಿದ್ದರೂ ಶಾಹು ಇವನನ್ನೇ ಪೇಶ್ವೆಯ ಪದಕ್ಕೆ ಆರಿಸಿದನು.

(೧೪) ಬಾಳಾಜಿ ಬಾಜಿರಾಯನಿಗೆ ನಾನಾಸಾಹೇಬ್ ಎಂದು ಕರೆಯು ತ್ತಿದ್ದರು.

(೧೫) ತಾರಾಬಾಯಿ ಮಹತ್ವಾಕಾಂಕ್ಷೆಯಿಂದ ಒಳಸಂಚು ನಡೆಸಿದ್ದಳು.

(೧೬) ೩ನೇ ಪಾಣಿಪತ್ತದ ಯುದ್ಧದಲ್ಲಿ ಎಲ್ಲ ಹಿಂದುಗಳ ಸಹಕಾರ ಮರಾಠರಿಗೆ ಸಿಗಲಿಲ್ಲ.

(೧೭) ೩ನೇ ಪಾಣಿಪತ್ತದ ಯುದ್ಧದಲ್ಲಿ ಮರಾಠರ ಸೋಲಿಗೆ ಅಹಂಭಾವ ಮುಂದಾಲೋಚನೆಯ ಅಭಾವವೂ ಕಾರಣವಾಗಿದ್ದವು.

(೧೮) ನಾನಾಸಾಹೇಬನ ಮರಣದ ತರುವಾಯ ಅವನ ೨ನೇ ಮಗ ೧ನೇ ಮಾಧವರಾಯನಿಗೆ ಪೇಶ್ವೇಪದ ದೊರಕಿತು.

(೧೯) ೨ನೇ ಬಾಜೀರಾಯನಿಂದ ಪೇಶ್ವೆಯರ ಅಧಿಕಾರವು ಮಣ್ಣು ಗೂಡಿತು.

(೨೦) ಅಹಲ್ಯಾಬಾಯಿ ಹೋಳ್ಕರ್ ಬಹಳ ಜನಾದರಣೀಯವಾ ಗಿದ್ದಳು.

**ಉತ್ತರ:**—೧. ಜೀಜಾಬಾಯಿಯು ತನ್ನ ಮಗನಾದ ಶಿವಾಜಿಯಲ್ಲಿ ಧರ್ಮನಿಷ್ಟೆ, ಸಚ್ಚಾರಿತ್ಯ, ಸ್ವಾತಂತ್ರ್ಯ, ದೇಶಭಿಮಾನ ಮುಂತಾದ ಶ್ರೇಷ್ಠ ಗುಣಗಳು ಒಡಮೂಡುವಂತೆ ಶ್ರಮಿಸಿದ್ದರಿಂದ ಈಕೆಗೆ ವೀರಮಾತೆ ಎನ್ನ ಬಹುದು.

೨. ಮಹಮ್ಮದೀಯರ ದಬ್ಬಾಳಿಕೆಯಿಂದ ಜರ್ಜರಿತಗೊಂಡ ಹಿಂದೂ ಜನತೆ, ತಮ್ಮ ಧರ್ಮ ಮತ್ತು ಜೀವರಕ್ಷಣೆಗಾಗಿ ಯಾರಾದರೂ ಮುಂದೆ ಬಂದಾರೆಯೇ ಎಂದು ಇದಿರು ನೋಡುತ್ತಿದ್ದಿತು. ಅಂಥಹ ಸಮಯದಲ್ಲಿ ಶಿವಾಜಿಯು ಮುಂದೆ ಬಂದುದರಿಂದ ಎಷ್ಟೋ ಜನರು ಇವನನ್ನು ದೇವರಂತೆ ಭಾವಿಸಿ ಸರ್ವದಾ ಅವನ ಬೆಂಬಲಕ್ಕೆ ನಿಂತಿದ್ದರು.

೩. ಶಿವಾಜಿಯು ತನ್ನ ಸ್ವತಂತ್ರ್ಯ ಸಂಗ್ರಾಮಕ್ಕೆ ಸಿದ್ಧನಾಗಿ ಮೊದಲು ತೋರಣಕೋಟೆಯನ್ನು ವಶಪಡಿಸಿಕೊಂಡು, ಕೋಟೆಯ ದುರಸ್ತಿ ನಡೆಯಿಸಿದಾಗ ಅಲ್ಲಿ ಇವನಿಗೆ ಅಪಾರ ಹಣ ದೊರೆಯಿತು, ಆದ್ದರಿಂದ ಇವನಿಗೆ ಜನಬಲವಿದ್ದಂತೆ ವಿಧಿಬಲವೂ ಇದ್ದತೆನ್ನಬಹುದು.

೪. ಅಬಾಜಿ ಸರದಾರನೆಂಬವನು ಕಲ್ಯಾಣದ ಮುಸಲ್ಮಾನ ಸರದಾ ರನ ಸುಂದರ ಸೊಸೆಯನ್ನು ಸೆರೆಹಿಡಿದು ಶಿವಾಜಿಯ ಎದುರಿಗೆ ತಂದು ನಿಲ್ಲಿಸಿದನು. ಆಗ ಶಿವಾಜಿಯು ತನ್ನ ಸರದಾರನಿಗೆ ಸಿಟ್ಟುಮಾಡಿದುದಲ್ಲದೆ,

"ಇಂತಹ ಸುಂದರ ತಾಯಿಯ ಹೊಟ್ಟೆಯಲ್ಲಿ ನಾನು ಹುಟ್ಟಿದ್ದರೆ ಆದೆಷ್ಟು ಸುಂದರನಾಗುತ್ತಿದ್ದೆನೋ ಎಂದನಂತೆ!" ಇದರಿಂದ ಶಿವಾಜಿಯು ಪರಸ್ತ್ರೀಯ ರನ್ನು ಎಷ್ಟು ಗೌರವದಿಂದ ಕಾಣುತ್ತಿದ್ದನೆಂಬುದು ವ್ಯಕ್ತವಾಗುವುದು.

೫. ಶಿವಾಜಿಯು ಪನ್ಹಾಳಗಡದಲ್ಲಿ ಇಳಿದುಕೊಂಡಾಗ ಅಫಝುಲ ಖಾನನ ಮಗನಾದ ಫಾಜಲಖಾನನೂ, ಸಿದ್ದೀಜೋಹರನೆಂಬ ಸರದಾರನೂ ಕೋಟೆಯನ್ನು ಮುತ್ತಿದರು. ಮುತ್ತಿಗೆ ಬಲವಾಗಿದ್ದುದರಿಂದ ಶಿವಾಜಿಯು ಬಹಳ ಪ್ರಯಾಸದಿಂದ ಕೋಟೆಯಿಂದ ತಪ್ಪಿಸಿಕೊಂಡು ಓಡಹತ್ತಿದನು. ವೈರಿಸೈನಿಕರು ಶಿವಾಜಿಯನ್ನು ಬೆನ್ನುಹತ್ತಲು ಬಾಜಿಪ್ರಭು ವೈರಿಗಳನ್ನು ಅಡ್ಡಗಟ್ಟಿ ಶಿವಾಜಿಯು ಪಾರಾಗುವವರೆಗೆ ವೀರಾವೇಶದಿಂದ ಕಾದಿ ಮಡಿದನು.

೬. ಔರಂಗಜೇಬನು ಜಸವಂತಸಿಂಗ ಮತ್ತು ದಿಲೇರಖಾನರೊಡನೆ ಕಳಿಸಿದ ಸೈನ್ಯವು ಬಹಳ ದೊಡ್ಡದಿತ್ತು. ಅಲ್ಲದೆ ಜಸವಂತಸಿಂಗನಿಗೆ ಗನೀ ಮಿಕಾ ಯುದ್ಧ ಮತ್ತು ಗುಡ್ಡಗಾಡು ಪ್ರದೇಶದ ಪರಿಚಯವಿತ್ತು. ಇದರಿಂದ ಶಿವಾಜಿಯು ತನ್ನ ಆಟ ಸಾಗುವುದಿಲ್ಲವೆಂಬುದನ್ನು ತಿಳಿದು ಒಪ್ಪಂದ ಮಾಡಿಕೊಂಡನು.

೭. ಔರಂಗಜೇಬನು ಶಿವಾಜಿಯನ್ನು ತನ್ನ ಸಮಾರಂಭಕ್ಕೆ ಕರೆಯಿಸಿ ಅಪಮಾನಗೊಳಿಸಿ ಸೆರೆಯಿಟ್ಟನು, ಆದರೆ ಶಿವಾಜಿಯು ಪ್ರತಿಉಪಾಯ ಹೂಡಿ ಸೆರೆಮನೆಯಿಂದ ಪಾರಾಗಿ ಔರಂಗಜೇಬನ ಮೋಸಕ್ಕೆ ಪ್ರತಿಮೋಸ ಮಾಡಿದನು.

೮. ಸಂಭಾಜಿಯು ಕಲುಷನೆಂಬ ಬ್ರಾಹ್ಮಣ ಮಂತ್ರಿಯಿಂದ ದುರ್ವ್ಯಸನಕ್ಕೆ ಬಿದ್ದನು. ಇದನ್ನು ತಡೆಯಲು ಶಿವಾಜಿ ಮಾಡಿದ ಪ್ರಯತ್ನ ವೆಲ್ಲ ವ್ಯರ್ಥವಾಯಿತು. ಆದ್ದರಿಂದ ಶಿವಾಜಿ ಚಿಂತೆಯಿಂದ ಸತ್ತನು.

೯. ಶಾಹುವು ಔರಂಗಜೇಬನ ಸೆರೆಯಲ್ಲಿದ್ದಾಗ ಮಹತ್ವಾಕಾಂಕ್ಷಿಣಿ ಯಾದ ತಾರಾಬಾಯಿಯು ಕೆಲ ಸರದಾರರನ್ನು ತನ್ನಕಡೆ ಎಳೆದುಕೊಂಡು ಕೊಲ್ಹಾಪುರದಲ್ಲಿ ಸಿಂಹಾಸನವನ್ನು ಸ್ಥಾಪಿಸಿದಳು. ಆಗ ಶಾಹುವಿನ ಬಿಡು ಗಡೆಯಾದುದರಿಂದ ರಾಜ್ಯಕ್ಕಾಗಿ ತಂಟೆ ಹುಟ್ಟಿತು. ಶ್ರೇಷ್ಠ ಸರದಾರರೆಲ್ಲಾ ತಾರಾಬಾಯಿಯಕಡೆಗೆ ಒಲಿದಿದ್ದರಿಂದ ಶಾಹುವಿನ ಈ ಕೆಲಸ ಬಹಳ ಗಡುಚಾಗಿತ್ತು. ಆದರೆ ಬಾಳಾಜಿ ವಿಶ್ವನಾಥನು ಮುಂದೆ ಬಂದು ಶಾಹುವಿನ

ಪಕ್ಷ ಕಟ್ಟಿದನು ವಿಶ್ವನಾಥನು **ಧನಾಜಿ ಜಾಧವ, ಪರಶುರಾಮುಪಂತ** ರನ್ನು ತನ್ನಕಡೆ ಒಲಿಸಿಕೊಂಡನು. ಮರಾಠರಿಗೆ ತೊಂದರೆ ಕೊಡುತ್ತಿದ್ದ ಮೊಗಲ ಸರದಾರ ಕೃಷ್ಣರಾವ ಖಟಾವಕರನನ್ನು ಹಣಿದನು. ಮರಾಠಾ ಸೈನ್ಯದ ನೌಕಾಧಿಪತಿ **ಕಾನ್ಹೋಜಿ ಆಂಗ್ರೆಯುನ್ನು** ಬಾಳಾಜಿವಿಶ್ವನಾಥನು ಶ್ರೇಷ್ಠ ಮುತ್ಸದ್ದಿತನದಿಂದ ಶಾಹುವಿನ ಪಕ್ಷಕ್ಕೆ ತಿರುಗಿಸಿದ್ದನು. ಹೀಗೆ ವಿಶ್ವನಾಥನು ತನ್ನ ಶೌರ್ಯ ಮತ್ತು ಮುತ್ಸದ್ದಿತನದಿಂದ ಶಾಹುವಿನ ಪಕ್ಷ ವಹಿಸದಿದ್ದರೆ ಶಾಹು ಅರಸನಾಗಿ ಉಳಿಯುವುದೇ ದುಸ್ಸಾಧ್ಯವಿತ್ತು.

೧೦. ಶಾಹುವಿಗೆ ವಿಶ್ವನಾಥನಂತ ಪ್ರಭಾವಶಾಲಿ ಸ್ವಾಮಿನಿಷ್ಠ ವ್ಯಕ್ತಿ ಸಿಕ್ಕದ್ದರಿಂದ, ಅವನಿಗೆ ರಾಜಕಾರಣದಲ್ಲಿ ಹೆಚ್ಚು ತಲೆ ಕೆಡಿಸಿಕೊಳ್ಳುವುದು ಬೇಡವಾಗಿತ್ತು. ಆದ್ದರಿಂದ ವಿಶ್ವನಾಥನಿಗೆ ಕಾರಭಾರದ ಎಲ್ಲ ಹೊಣೆ ಹೊರಿಸಿ ಪೇಶ್ವೆಯನ್ನಾಗಿ ಮಾಡಿದನು. ಇದರಿಂದ ಮುಂದಿನ ಮರಾಠಾ ಅರಸರೆಲ್ಲಾ ನಾಮಮಾತ್ರರಾಗಿದ್ದರು. ಆದ್ದರಿಂದ ವಿಶ್ವನಾಥನು ಮಂತ್ರಿ ಯಾದ ಮೇಲೆ ಹೊಸಯುಗವೇ ಪ್ರಾರಂಭವಾಯಿತೆನ್ನಬಹುದು.

೧೧. ಬಾಳಾಜಿ ವಿಶ್ವನಾಥನು ಸಯ್ಯದ ಬಂಧುಗಳ ಪಕ್ಷವಹಿಸಿ ಮುಹಮದ್ ಶಾಹನನ್ನು ಪಟ್ಟಕ್ಕೆ ಕೂಡಿಸಿದನು. ಇದಕ್ಕಾಗಿ ಮು. ಶಾಹನು ಮರಾಠರಿಗೆ ಕೆಲಭಾಗದ ಚೌಥಾಯಿ ಮತ್ತು ಸರದೇಶಮುಖಿಯನ್ನು ಎತ್ತುವ ಹಕ್ಕು ಕೊಟ್ಟನು. ಶಾಹುವನ್ನೂ ರಾಜನೆಂದು ಒಪ್ಪಿಕೊಂಡನು. ಹೀಗೆ ದಿಲ್ಲಿಯ ಮೇಲೆ ವರ್ಚಸ್ಸು ಸ್ಥಾಪಿಸಿದನು.

೧೨. ಮರಾಠಾ ರಾಜ್ಯವು ಪ್ರಬಲವಾಗಿ ಉಳಿಯಬೇಕಾದರೆ ದೊಡ್ಡ ಸೈನ್ಯ ಮತ್ತು ಶ್ರೇಷ್ಠ ಸರದಾರರನ್ನು ಇಟ್ಟುಕೊಳ್ಳುವುದು ಅವಶ್ಯಕವಿತ್ತು. ಆದ್ದರಿಂದ ವಿಶ್ವನಾಥನು ರಾಜ್ಯದ ಕೆಲಭಾಗವನ್ನು ಶೂರ ಸರದಾರರಿಗೆ ಕೊಟ್ಟು, ಅವರಿಗೆ ಆ ಭಾಗದ ಸಂರಕ್ಷಣೆ ಮತ್ತು ಕಂದಾಯ ವಸೂಲಿಯ ಹಕ್ಕು ಬಾಧ್ಯತೆಯನ್ನು ಕೊಟ್ಟನು. ಈ ಸರದಾರರು ತಮ್ಮ ಆಯವ್ಯಯ ಗಳನ್ನು ಅರಸನಿಗೆ ಒಪ್ಪಿಸಬೇಕಾಗುತ್ತಿದ್ದಿತಲ್ಲದೆ, ಅರಸನ ರಾಜ್ಯಬೆಳವಣಿಗೆ ಗಾಗಿಯೂ, ಯುದ್ಧ ಸಮಯದಲ್ಲಿಯೂ ತಮ್ಮ ಸೈನ್ಯದೊಡನೆ ಬಂದು ಸಹಾಯಮಾಡಬೇಕಾಗುತ್ತಿದ್ದಿತು. ಈ ಪದ್ಧತಿಗೆ ಸರಂಜಾಮಿ ಅಥವಾ ಜಹಗೀರಿ ಪದ್ಧತಿ ಎನ್ನುವರು.

೧೩. ೧ನೇ ಬಾಜೀರಾಯನು ತನ್ನ ತಂದೆಯ ಜೊತೆಗೆ ಕಾರಭಾರ ಮತ್ತು ಯುದ್ಧದಲ್ಲಿ ಭಾಗವಹಿಸುತ್ತಿದ್ದುದರಿಂದ ಪ್ರಸಂಗಾವಧಾನಿಯೂ, ಶೂರನೂ ಆದ ಬಾಜೀರಾಯನಿಗೆ ರಾಜಕಾರಣ ಮತ್ತು ಮುತ್ಸದ್ದಿತನಗಳು ಗೊತ್ತಿದ್ದುವು. ಆದ್ದರಿಂದ ಶಾಹುರಾಜನು ಇವನನ್ನೇ ಪೇಶ್ವೆಯ ಜಾಗೆಗೆ ಆರಿಸಿದನು.

೧೪. ಬಾಳಾಜಿ ಬಾಜೀರಾವನಿಗೆ ಈತನ ಅಜ್ಜನ ಹೆಸರಿನಿಂದ ಕರೆಯುತ್ತಿದ್ದುದರಿಂದ ಇವನಿಗೆ "**ನಾನಾಸಾಹೇಬ್ ಪೇಶವೇ**" ಎಂಬ ಹೆಸರು ರೂಢಿಯಾಗಿತ್ತು.

೧೫. ತಾರಾಬಾಯಿಯು ಶಾಹು ಸೆರೆಯಲ್ಲಿದ್ದಾಗ ತನ್ನ ಗಂಡನನ್ನು ಪಟ್ಟಕ್ಕೆ ಕೂಡಿಸಲು ಒಳಸಂಚು ನಡೆಯಿಸಿದ್ದಳು. ಆದರೆ ಅದು ವಿಫಲವಾಯ್ತು. ಮುಂದೆ ಶಾಹುವಿನ ಮರಣಾನಂತರವೂ ಮಹತ್ವಾಕಾಂಕ್ಷಿಣಿಯಾದ ತಾರಾಬಾಯಿಯು ತನ್ನ ಮೊಮ್ಮಗ ರಾಜಾರಾಮನನ್ನು ಪಟ್ಟಕ್ಕೆ ಕೂಡಿಸಿ ತಾನೇ ಸರ್ವಾಧಿಕಾರಿಣಿಯಾಗಬೇಕೆಂದು ಪ್ರಯತ್ನಿಸಿದಳು. ಈಗಲೂ ನಾನಾಸಾಹೇಬನು ಈಕೆಯ ತಂತ್ರವನ್ನು ಮುರಿದು ಸೆರೆಯಲ್ಲಿಟ್ಟು ತಾನೇ ಸರ್ವಾಧಿಕಾರಿಯಾದನು.

೧೬. ಮರಾಠರಿಗೆ ದೊರೆತ ಚಿಕ್ಕ ಪುಟ್ಟ ವಿಜಯಗಳಿಗಾಗಿ ತಾವೇ ಶ್ರೇಷ್ಠರೆಂಬ ಅಹಂಭಾವ ಮೂಡಿತ್ತು. ಇದರಿಂದ ಅವರು ರೋಹಿಲರನ್ನೂ, ಜಾಟರನ್ನೂ, ಕೆಲ ರಜಪೂತರನ್ನೂ ತಿರಸ್ಕಾರದಿಂದ ಕಾಣುತ್ತಿದ್ದರು. ಆದ್ದರಿಂದ ೩ನೇ ಪಾಣೀಪತ್ತ ಯುದ್ಧದಲ್ಲಿ ಮರಾಠರಿಗೆ ಕೆಲಹಿಂದೂಗಳ ಪೂರ್ಣ ಸಹಕಾರ ಸಿಗಲಿಲ್ಲ.

೧೭. ಮರಾಠರು ತಮ್ಮಲ್ಲಿದ್ದ ಪರಿಸ್ಥಿತಿಯಲ್ಲಿಯೇ ವಿಜಯಿಗಳಾಗುವೆವೆಂದು ನಂಬಿ, ಮುಂದಿನ ಪೂರೈಕೆಯ ಯೋಜನೆಯ ಕಡೆ ಲಕ್ಷ ಹಾಕದ್ದರಿಂದಲೂ, ಹೊರಗಿನ ಸಂಪರ್ಕ ತಪ್ಪಿದ್ದರಿಂದಲೂ ಹೆಚ್ಚಿನ ಸಹಾಯ ಬರಲಿಲ್ಲ. ಇದ್ದ ಆಹಾರ ಧಾನ್ಯತೀರಿತು. ಇದರಿಂದ ಸೈನಿಕರು ಹಸಿವೆಯಿಂದ ಬಳಲಿ ಅಶಕ್ತರಾದರು. ಇದೂ ಮರಾಠರ ಸೋಲಿಗೆ ಒಂದು ಕಾರಣ.

೧೮. ನಾನಾಸಾಹೇಬ್ ಪೇಶ್ವೆಯ ಹಿರಿಯಮಗ ವಿಶ್ವಾಸರಾಯನು ೩ನೇ ಪಾಣಿಪತ್ತದ ಯುದ್ಧದಲ್ಲಿ ಮರಣ ಹೊಂದಿದ್ದರಿಂದ ಶೂರನೂ, ಚತುರನೂ ಆದ ೧೮ ವರ್ಷ ವಯಸ್ಸಿನ ಮಾಧವರಾಯನಿಗೆ (೨ನೇ ಮಗ) ಪೇಶ್ವೇಪದ ದೊರಕಿತು.

೧೯. ೨ನೇ ಬಾಜೀರಾಯನು ದುರ್ನಡತೆಗಳ ತೌರೂರು, ಹೇಡಿ ಆದ್ದರಿಂದ ರಾಜ್ಯದ ಭದ್ರತೆಕೆಟ್ಟು, ಸರದಾರರೆಲ್ಲಾ ಸ್ವತಂತ್ರರಾಗಹತ್ತಿದರು. ಇವನು ಇಂಗ್ಲೀಷರ ಮರೆಹೊಕ್ಕು **ವಸಯಿ**ಯಲ್ಲಿ! ಅಪಮಾನಕಾರಕ ಒಪ್ಪಂದಮಾಡಿಕೊಂಡನು. ಆದರೆ ಮುಂದೆ ಕೂಡಿ ನಡೆಯದೆ ಇಂಗ್ಲೀಷ ರೊಡನೆ ಯುದ್ಧಮಾಡಿ ಕೋರೇಗಾವಿನಲ್ಲಿ ಪೂರ್ಣ ಸೋತನು. ಮರಾಠಾ ರಾಜ್ಯ ಇಂಗ್ಲೀಷರ ಹಸ್ತಗತವಾಯಿತು. ಇದರಿಂದ ಪೇಶ್ವೆಯರ ಆಳಿಕೆಯು ಕೊನೆಯಾಯಿತು.

೨೦. **ಅಹಲ್ಯಾಬಾಯಿ ಹೋಳ್ಕರ್** :—ಈಕೆಯು ಮಲ್ಹಾರ ರಾವ್ ಹೋಳ್ಕರನ ಸೊಸೆ. ಈಕೆಯ ಗಂಡನಾದ **ಖಂಡೇರಾವ್ ಹೋಳ್ಕರನು ಮಲ್ಹಾರರಾಯನ** ಜನನದ ನಂತರ ಮರಣ ಹೊಂದಿದನು. ಆಗ ಅಹಲ್ಯಾಬಾಯಿಯು ರಾಜ್ಯಭಾರವನ್ನು ವಹಿಸಿಕೊಂಡು, ಜನರಿಗೆ ಹಿತಕರ ವಾಗುವಂತೆ ಕೆರೆ, ಭಾವಿ, ಅನ್ನಛತ್ರ, ರಸ್ತೆಯ ನಿರ್ಮಾಣ ಇತ್ಯಾದಿ ಇನ್ನೂ ಅನೇಕ ಲೋಕೋಪಯೋಗಿ ಕಾರ್ಯಗಳನ್ನು ಮಾಡಿದಳು. ಈಕೆಯು ಧಾರ್ಮಿಕ ವೃತ್ತಿಯವಳೂ, ಮಹಾಸಾಧ್ವಿಯೂ, ಧರ್ಮಿಷ್ಠಳೂ ಆಗಿದ್ದುದ ರಿಂದ ಕೆಲ ಜನರು ಈಕೆಯನ್ನು ದೇವತೆಯಂತೆ ಭಾವಿಸಿದ್ದರು. ಈಕೆಯು ಶೂರಳೂ, ಚತುರಳೂ, ದಕ್ಷ ಆಡಳಿತೆಗಾರಳೂ ಆಗಿದ್ದಳು. ಕ್ರಿ. ಶ. ೧೭೯೫ ರಲ್ಲಿ ಮರಣಹೊಂದಿದಳು.

**ಕೆಳಗೆ ಕೊಟ್ಟ ಐತಿಹಾಸಿಕ ಸಂಗತಿಗಳು ತಪ್ಪೋ ಒಪ್ಪೋ ಎಂಬುದನ್ನು ಹೇಳಿರಿ.**

೧. ಬಾಳಾಜಿ ವಿಶ್ವನಾಥನು ಜಹಗೀರಿ ಪದ್ಧತಿಯನ್ನು ತೆಗೆದು ಹಾಕಿದನು.

೨. ಸವಾಯಿ ಮಾಧವರಾಯನನ್ನು ಪೇಶ್ವೆಯರಲ್ಲಿ ಅತಿ ದೊಡ್ಡವ ನೆಂದು ತಿಳಿದಿದ್ದಾರೆ.

೩. ಪೇಶವೆಯರ ಆಳಿಕೆ ಕ್ರಿ. ಶ. ೧೮೧೮ ರಲ್ಲಿ ಕೊನೆಗೊಂಡಿತು.

೪. ನಾನಾಸಾಹೇಬ್ ಪೇಶ್ವೆಯು ತಾರಾಬಾಯಿಯ ಪ್ರಯತ್ನ ಗಳನ್ನು ಸದೆಬಡೆದು ತಾನೇ ಸರ್ವಾಧಿಕಾರಿಯಾದನು.

೫. ಮರಾಠರ ಧ್ವಜ, ಭಗವಾ ಝೆಂಡಾ.

**ಉತ್ತರ:**— (೧) ಅಲ್ಲ. (೨) ಅಲ್ಲ. (೩) ಹೌದು. (೪) ಹೌದು. (೫) ಹೌದು.

**ಕೆಳಗಿನ ವಾಕ್ಯಗಳಲ್ಲಿ ಅರ್ಥವು ಸರಿಹೋಗುವಂತೆ ಯೋಗ್ಯ ಶಬ್ದಗಳನ್ನು ತುಂಬಿರಿ.**

(೧) ಖುದೇಜಾ ಬೀಬಿ ಮ. ಪೈಗಂಬರರ...........(ತಾಯಿ, ಹೆಂಡತಿ ತಂಗಿ )

(೨) ಮಿಹಿರ್ ಭೋಜನು ಇಮ್ಮಡಿ ನಾಗಭಟ್ಟನ ........... (ತಂದೆ, ಮಗ, ಮೊಮ್ಮಗ)

(೩) ಸಬಕ್ತಗೀನನು ತುರ್ಕಸ್ಥಾನದ ಅಲಪ್ತಗೀನನ.......(ಒಡೆಯ, ಗುಲಾಮ, ಅಳಿಯ)

(೪) ಗಿಝನಿ ಮಹಮೂದನು ಸಬಕ್ತಗೀನನ.........(ಮಗ, ತಮ್ಮ, ಅಳಿಯ)

(೫) ಪೃಥ್ವಿಯರಾಜನು ಜಯಚಂದನ .......... (ಮಗ, ಮಾವ, ಅಳಿಯ)

(೬) ಸಂಯುಕ್ತೆ ಪೃಥ್ವಿರಾಜನ............. (ಹೆಂಡತಿ, ಮಗಳು, ತಾಯಿ)

(೭) ಜಯಚಂದ ಸಂಯುಕ್ತೆಯ..........(ಮಾವ, ತಂದೆ, ತಮ್ಮ)

(೮) ಗುಲಾಮ ಅರಸರು ........ ( ಪಠಾಣರು, ಅಫ್ಘಾನರು, ತುರ್ಕೀ ಜನರು.)

(೯) ಕುತುಬ ಮಿನಾರನ್ನು ............ನು ಕಟ್ಟಿಸಿದನು (ನಾಸಿರುದ್ದೀನ ಬಲ್ಬನ್, ಕುತುಬುದ್ದೀನ)

(೧೦) ಅಲ್ಲಾವುದ್ದೀನ ಖಿಲ್ಜಿ ಮಲಿಕಾಫರನ ......... ( ಗುಲಾಮ, ಒಡೆಯ, ತಂದೆ)

(೧೧) ಮಹಮುದ್ ತಘಲಕನು, ಘಿಯಾಸುದ್ದೀನ ತಘಲಕನ..... (ಮಗ, ಅಳಿಯ, ತಮ್ಮ )

(೧೨) ತೈಮೂರ ಲಂಗನು.........ಜಾತಿಯವನು (ಪಠಾಣ, ತುರ್ಕೀಯ ಮಂಗೋಲ ಅಫ್ಘಾನಿ )

(೧೩) ರಾಮಾನಂದರು...........ಜಾತಿಯಲ್ಲಿ ಹುಟ್ಟಿದರು (ಹೊಲೆಯ, ಮರಾಠಾ, ಬ್ರಾಹ್ಮಣ)

(೧೪) ಬುಕ್ಕರಾಯನು ಹರಿಹರ...........(ಮಗ, ಅಣ್ಣ, ತಮ್ಮ)

(೧೫) ಸಾಳ್ವ ನರಸಿಂಹ ........... ವಂಶದವನು ( ತುಳು, ಸಾಳ್ವ, ಅರವೀಡು )

(೧೬) ವಿಜಯನಗರದ ಅವನತಿ ಕ್ರಿ. ಶ. ........... ರಲ್ಲಿ ಆಯಿತು ( ೧೩೯೭, ೧೪೪೬, ೧೫೬೫ )

(೧೭) ಹಸನಗಂಗೂ ........... ವಂಶದ ಮೂಲ ಪುರುಷ ( ಖಿಲ್ಜೀ, ತಘಲಕ, ಬಹಮನೀ )

(೧೮) ಅಕಬರ ಬಾದಶಹನು ಬಾಬರನ ........... ( ಅಳಿಯ, ಮಗ, ಮೊಮ್ಮಗ )

(೧೯) ಖುಸ್ರುವು ಮಾನಸಿಂಗನ ........... (ಗೆಳೆಯ, ಸೋದರಳಿಯ, ಅಣ್ಣ )

(೨೦) ೨ನೇ ಬಾಜೀರಾಯನ ತಾಯಿಯ ಹೆಸರು ........ ........ ( ಜೀಜಾಬಾಯಿ, ಅಹಲ್ಯಾಬಾಯಿ, ಆನಂದೀಬಾಯಿ )

**ಉತ್ತರ**:—(೧) ಹೆಂಡತಿ. (೨) ಮೊಮ್ಮಗ. (೩) ಗುಲಾಮ ಅಥವಾ ಅಳಿಯ. (೪) ಮಗ. (೫) ಅಳಿಯ. (೬) ಹೆಂಡತಿ. (೭) ತಂದೆ. (೮) ತುರ್ಕೀ ಜನರು. (೯) ಕುತುಬುದ್ದೀನ. (೧೧) ಒಡೆಯ. (೧೧) ಮಗ. (೧೨) ತುರ್ಕೀ ಮಂಗೋಲ. (೧೩) ಬ್ರಾಹ್ಮಣ. (೧೪) ತಮ್ಮ. (೧೫) ಸಾಳ್ವ. (೧೬) ೧೫೬೫. (೧೭) ಬಹಮನೀ (೧೮) ಮೊಮ್ಮಗ. (೧೯) ಸೋದರಳಿಯ. (೨೦) ಆನಂದೀ ಬಾಯಿ.

**ಶಿವಾಜಿಯು ರಚಿಸಿದ ಅಷ್ಟ ಪ್ರಧಾನ ಮಂತ್ರಿಮಂಡಲದಲ್ಲಿ ಯಾರು ಯಾರು ಇದ್ದರು ಮತ್ತು ಯಾವ ಕಾರ್ಯವನ್ನು ಮಾಡುತ್ತಿದ್ದರು ?**

ಶಿವಾಜಿಯು ತಾನು ಗಳಿಸಿದ ಪ್ರದೇಶದಲ್ಲಿ ಸುವ್ಯವಸ್ಥೆಯು ಆಡಳಿತವಿರಬೇಕೆಂಬ ಆಶೆಯಿಂದ ಅಷ್ಟ ಪ್ರಧಾನ ಮಂತ್ರಿಮಂಡಲವನ್ನು ನಿರ್ಮಿಸಿದನು ಅವರ ಹೆಸರು ಮತ್ತು ಕಾರ್ಯಗಳು ಕೆಳಗಿನಂತೆ ಇದ್ದುವು.

| | | |
|---|---|---|
| ೧. ಮೋರೋಪಂತ ಪಿಂಗಳೆ | ಪಂತಪ್ರಧಾ | (ರಾಜ್ಯದ ಆಡಳಿತ) |
| ೨. ಆಬಾಜಿ ಮತ್ತು ನೀಳೋ ಸೋನದೇವ | ಪಂತ ಅಮಾತ್ಯ | (ಕಂದಾಯ ವಸೂಲಿ) |
| ೩. ಅಣ್ಣಾಜಿ ದತ್ತೋ | ಪಂತಸಚಿವ | (ಕಾಗದ ಪತ್ರಗಳ ಸಂಗ್ರಹ) |
| ೪. ದತ್ತಾಜಿಪಂತ ಬೋಕಿಲ | ಮಂತ್ರಿ | (ಸ್ವಂತದ ಆಡಳಿತೆ) |
| ೫. ಪ್ರತಾಪರ್ರಾವ್ ಮತ್ತು ಹಂಬೀರರಾವ್ | ಸೇನಾಪತಿ | (ಸೈನ್ಯಖಾತೆ) |
| ೬. ಸೋಮನಾಥ ಪಂತ | ಸುಮಂತ | (ವಿದೇಶ ವ್ಯವಹಾರ) |
| ೭. ಬಾಳಾಜಿ ಮತ್ತು ನೀರಾಜಿರಾವಜಿ | ನ್ಯಾಯಾಧೀಶ | (ನ್ಯಾಯಖಾತೆ) |
| ೮. ರಘುನಾಥ ಪಂತ | ಪಂಡಿತರಾವ್ | (ಧಾರ್ಮಿಕ ಖಾತೆ) |

**ಶಿವಾಜಿಯ ಆಡಳಿತವನ್ನು ಸಂಕ್ಷಿಪ್ತವಾಗಿ ಬಣ್ಣಿಸಿರಿ.**

ಶಿವಾಜಿಯು ರಾಜ್ಯಆಡಳಿತೆಯಲ್ಲಿ ಸುವ್ಯವಸ್ಥೆ ಉಂಟಾಗಲು ಬೇರೆ ಬೇರೆ ಭಾಗಗಳನ್ನು ನಿರ್ಮಿಸಿ ಅವುಗಳಿಗೆ ಎಂಟುಮಂದಿ ಮಂತ್ರಿಗಳನ್ನು ನೇಮಿಸಿ ಅವರಿಗೆ ಸಂಬಳ ಕೊಡುತ್ತಿದ್ದನು. ರಾಜ್ಯವನ್ನು ೧೨ ಸುಭೆಗಳಲ್ಲಿ ವಿಂಗಡಿಸಿದನು. ಬೆಳೆಯ ೧/೫ ಅಂಶವು ಸರಕಾರಿ ತೆರಿಗೆಯಾಗಿತ್ತು. ಹಳ್ಳಿಗಳ ನ್ಯಾಯದಾನವನ್ನು ಗ್ರಾಮಪಂಚಾಯಿತಿಗಳೇ ನಡೆಯಿಸುತ್ತಿದ್ದವು. ಸೈನಿಕರಿಗೆ ೪ ರಿಂದ ೧೨ ರೂ. ನವರೆಗೂ ಸಂಬಳವಿತ್ತು. ಬಲವಾದ ಕಾಲ್ದಳ, ನಾವಿಕ ಪಡೆ ಮುಂತಾದುವುಗಳಿಂದ ರಾಜ್ಯವು ರಕ್ಷಿಸಲ್ಪಡುತ್ತಿತ್ತು. ಜನರಿಗೆ ಧರ್ಮ ಮತ್ತು ವ್ಯವಹಾರದ ಸ್ವಾತಂತ್ರ್ಯವಿತ್ತು.

**ಬಾರಾಭಾಯಿ ಕಾರಸ್ಥಾನದ ಬಗ್ಗೆ ನಿಮಗೇನುಗೊತ್ತಿದೆ?**

ರಘುನಾಥರಾಯನೂ, ಅವನ ಹೆಂಡತಿ ಆನಂದೀಬಾಯಿಯೂ ನಾರಾಯಣರಾವ್ ಪೇಶ್ವೆಯ ಕೊಲೆಮಾಡಿದರು. ಆಗ ರಾಮಶಾಸ್ತ್ರಿ ಎಂಬ ನ್ಯಾಯಾಧೀಶನು ರಘುನಾಥರಾಯನೇ ಕೊಲೆಪಾತಕನೆಂದು ತೀರ್ಮಾನಿಸಿದನು. ಮುಂದೆ ಕೆಲ ದಿವಸಗಳಲ್ಲಿ ಹುಟ್ಟಿದ ನಾರಾಯಣರಾಯನ ಹೆಂಡತಿಯ ಕೂಸಿಗೆ ನಾನಾಫಡಣವೀಸ್ ಮುಂತಾದ ಮಂತ್ರಿಗಳು ಸಂಚುನಡೆಯಿಸಿ ಪಟ್ಟಗಟ್ಟಿದರು. ಇದಕ್ಕೇ ಬಾರಾಭಾಯಿ ಕಾರಸ್ತಾನವೆಂಬ ಹೆಸರು ಬಂದಿದೆ.

## ಕೆಳಗಿನವುಗಳ ಬಗ್ಗೆ ನಿಮಗೇನು ಗೊತ್ತುಂಟು?

(೧) ಚೌಥಾಯಿ (೨) ಸರದೇಶಮುಖಿ (೩) ಗನೀಮಿಕಾ (೪) ವ್ಯಾಘ್ರನಖ (೫) ಸರದಾರಮಂಡಲ.
(೬) ಸ್ವರಾಜ್ಯ

(೧) **ಚೌಥಾಯಿ:**—ಬಾದಶಹನಾಗಲೀ ಅಥವಾ ಯಾವನೇ ಅರಸನಾಗಲೀ ತನ್ನ ರಾಜ್ಯದ ಸಂರಕ್ಷಣೆಗಾಗಿ ಮರಾಠರ ನೆರವು ಪಡೆದುಕೊಂಡರೆ, ತಮ್ಮ ಒಟ್ಟು ಉತ್ಪನ್ನದ ಒಂದುನಾಲ್ಕಾಂಶ ಭಾಗ ಹಣವನ್ನು ಮರಾಠರಿಗೆ ಕೊಡಬೇಕಾಗುತ್ತಿದ್ದಿತು. ಈ ಪದ್ಧತಿಗೆ ಚೌಥಾಯಿ ಎಂದು ಹೆಸರು. ಇದೇ ಘೂಪರಿಯ ಸಹಾಯವನ್ನೀಯುವ ಪದ್ಧತಿಯನ್ನು" **ಸಹಾಯಕಸೈನ್ಯ ಪದ್ಧತಿ**" ಎಂಬ ಹೆಸರಿನಿಂದ ಲಾರ್ಡ್ ವೆಲ್ಲೆಸ್ಲಿಯು ಕ್ರಿ.ಶ. ೧೭೯೮ ರಲ್ಲಿ ಆಚರಣೆಗೆ ತಂದನು. ಆದರೆ ಇಂಗ್ಲೀಷರು ಹಾಕಿದ ಕೆಲಕರಾರುಗಳು ಬಹಳ ಬಿಗುವಾಗಿದ್ದವು.

೨. **ಸರದೇಶಮುಖಿ:**— ಇದು ಮರಾಠಾ ಸರದಾರರಿಗೆ ವಂಶಪಾರಂಪರ್ಯವಾಗಿ ಸಲ್ಲುತ್ತಿದ್ದ ಹಕ್ಕು. ಈ ಸರದಾರರು ರಾಜನಿಂದ ದೊರಕಿಸಿಕೊಂಡ ಭೂಭಾಗದ ಸಂರಕ್ಷಣೆ ಮತ್ತು ಕಂದಾಯ (ತೆರಿಗೆ) ವಸೂಲಿಯ ಹೊಣೆಯನ್ನು ನಿರ್ವಹಿಸಿ, ವಸೂಲಾದ ಒಟ್ಟು ತೆರಿಗೆಯ ಹತ್ತನೇ ಒಂದಾಂಶ (೧/೧೦)ವನ್ನು ಇಟ್ಟುಕೊಂಡು ಉಳಿದುದನ್ನು ರಾಜನಿಗೆ ಸಕಾಲದಲ್ಲಿ ಮುಟ್ಟಿಸಬೇಕಾಗುತ್ತಿತ್ತು.

೩. **ಗನೀಮಿಕಾ:**—ಇದು ಮರಾಠರು ಅನುಸರಿಸುತ್ತಿದ್ದ ಒಂದು ಯುದ್ಧತಂತ್ರ. ವೈರಿಯ ಸೈನ್ಯ ಸಂಖ್ಯೆ ದೊಡ್ಡದಿದ್ದಾಗ ಗುಡ್ಡದಲ್ಲಿ ಅಡಗಿಕೊಂಡು ಒಮ್ಮಿಂದೊಮ್ಮೆಯೇ ವೈರಿಯ ಮೇಲೆಬಿದ್ದು ಹಣಿಯುತ್ತಿದ್ದರು. ಈ ಯುದ್ಧತಂತ್ರಕ್ಕೆ ಗನೀಮಿಕಾಯುದ್ಧವೆಂದು ಹೆಸರು.

೪. **ವ್ಯಾಘ್ರನಖ:**—ಹುಲಿಯ ಉಗುರು. ಇವು ಉಕ್ಕಿನಲ್ಲಿ ಮಾಡಲ್ಪಟ್ಟು ಹದನಾಗಿರುತ್ತಿದ್ದವು. ಇವನ್ನು ಕೈಬೆರಳಿಗೆ ಹಾಕಿಕೊಂಡು ಮುಚ್ಚಿಡಲು ಬರುತ್ತಿತ್ತು. ಈ ಉಗುರಿನಿಂದಲೇ ಶಿವಾಜಿಯು ಆದಿಲ್ ಶಾಹನ ಸರದಾರ ಅಫಝುಲ್‌ಖಾನನನ್ನು ಇರಿದುಕೊಂದನು.

೫. **ಸರದಾರ ಮಂಡಲ:**—ಇದು ಬಾಳಾಜಿಬಾಜಿರಾಯನ ಆಳಿಕೆಯ ಕಾಲಕ್ಕೆ ಸ್ಥಾಪಿಸಲ್ಪಟ್ಟಿತು. ಈ ಮಂಡಲಕ್ಕೆ ಸೇರಿದ ಮರಾಠಾ

ಸರದಾರರೆಲ್ಲರೂ ಶಾಹುರಾಜನಿಗೆ ವಿಧೇಯರಾಗಿರಬೇಕಾಗುತ್ತಿತ್ತು. ಮಂಡಲದ ಒಬ್ಬ ಸದಸ್ಯನ ಮೇಲೆ ಮತ್ತೊಬ್ಬನು ದಾಳಿಮಾಡುವಂತಿರಲಿಲ್ಲ. ಎಲ್ಲರೂ ಶಾಹುರಾಜನ ಮಧ್ಯಸ್ತಿಕೆಗೆ ಒಪ್ಪಿಕೊಳ್ಳಬೇಕಾಗುತ್ತಿತ್ತು. ಯುದ್ಧಕಾಲವಲ್ಲಿ ತಮ್ಮ ಸೈನ್ಯದೊಂದಿಗೆ ರಾಜನ ನೆರವಿಗೆ ಬರಬೇಕಾಗುತ್ತಿತ್ತು. ಈ ಮಂಡಲದ ಸರದಾರರಿಗೆಲ್ಲಾ ಅವರ ಶೂರತ್ವ, ಸ್ವಾಮಿನಿಷ್ಠೆಗನುಸರಿಸಿ ಭೂಮಿಯನ್ನು ಹಂಚಿಕೊಡುತ್ತಿದ್ದರು. ಸರದಾರರು ಆ ಭಾಗದ ಸಂರಕ್ಷಣೆಯ ಹೊಣೆ ಹೊತ್ತು ತೆರಿಗೆಯನ್ನು ವಸೂಲು ಮಾಡುತ್ತಿದ್ದರು. ಸರದಾರರು ರಾಜನಿಗೆ ತಮ್ಮ ವಾರ್ಷಿಕ ಆಯವ್ಯಯದ ಲೆಕ್ಕವನ್ನು ಒಪ್ಪಿಸಬೇಕಾಗುತ್ತಿದ್ದಿತು.

**೬. ಸ್ವರಾಜ್ಯ :**—ಮರಾಠರು ತಾವು ಗೆದ್ದು ಅಧೀನಪಡಿಸಿಕೊಂಡು ಆಡಳಿತೆ ನಡೆಸುತ್ತಿದ್ದ ಭಾಗವನ್ನೇ ಸ್ವರಾಜ್ಯ ಎಂದು ಕರೆಯುತ್ತಿದ್ದರು. ಇದಕ್ಕೆ ದಿಲ್ಲಿಯ ಬಾದಶಹನಿಂದ ಮಾನ್ಯತೆಯ ಸನದು ದೊರೆಯುತ್ತಿತ್ತು.

## ಬ್ರಿಟಿಶರ ಆಳಿಕೆ.

**೧೫ ನೇ ಶತಮಾನವು ಹಿಂದುಸ್ತಾನಕ್ಕೆ ಸುವರ್ಣಯುಗವೆಂದು ಕರೆಯಲು ಕಾರಣವೇನು?**

ಹಿಂದುಸ್ತಾನವು ೧೫ ನೇ ಶತಮಾನದಲ್ಲಿ ಜಗತ್ತಿನಲ್ಲಿಯೇ ಸರ್ವ ಸಂಪನ್ನ ದೇಶವಾಗಿತ್ತು. ಇಲ್ಲಿಯ ಬಂಗಾರ, ಮಸಿಲಿನ್ ಬಟ್ಟೆ, ಗಂಧದ ಎಣ್ಣೆ ಮತ್ತು ಅದರ ಕೆತ್ತನೆಯ ಸಾಮಾನು, ಮಸಾಲೆ ಸಾಮಾನುಗಳು, ವಜ್ರ ಮತ್ತು ಹಸ್ತಿದಂತ, ಆಹಾರಧಾನ್ಯ ಮುಂತಾದ ಸರಕುಗಳಿಗಾಗಿ ಮುಸ್ಲಿಂರಾಷ್ಟ್ರಗಳವರೂ, ಯೂರೋಪಿಯನ್ನರೂ ಬರಹತ್ತಿದ್ದರು. ಆಗ ಹಿಂದುಸ್ತಾನದ ಕಲಾಕೌಶಲ್ಯ ವಿದ್ಯೆ, ವ್ಯಾಪಾರೋದ್ಯೋಗಗಳು ಉನ್ನತ ಸಿಖರಕ್ಕೇರಿದ್ದುವು. ಆದ್ದರಿಂದ ಈ ಕಾಲಕ್ಕೆ "**ಹಿಂದುಸ್ತಾನದ ಸುವರ್ಣಯುಗ**" ವೆಂದು ಕರೆಯುತ್ತಿದ್ದರು.

**ವಿದೇಶೀಯರು ಭಾರತಕ್ಕೆ ಜಲಮಾರ್ಗ ಶೋಧಿಸಿದ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ ?**

ಅಲೆಗ್ಝಾಂಡರನ ದಾಳಿಯ ತರುವಾಯ ಹಿಂದುಸ್ಥಾನದೊಡನೆ ಯುರೋಪ್ ಖಂಡದ ರೋಮನ್ ಸಾಮ್ರಾಜ್ಯದ ವ್ಹೆನಿಸ್ ಮತ್ತು ಜಿನೋವಾ ಪಟ್ಟಣದವರು ವ್ಯಾಪಾರಮಾಡಿ ಬಹಳ ಧನಿಕರಾಗಿದ್ದರು. ೭ ನೇ ಶತಮಾನದಲ್ಲಿ ಅರಬ ದೇಶದ ಖಲೀಫನು ರೋಮನ್ ಸಾಮ್ರಾಜ್ಯಕ್ಕೊಳಪಟ್ಟಿದ್ದ ಈಜಿಪ್ತ, ಸಿರಿಯಾ, ಮೆಸೊಪೊಟೋಮಿಯಾ, ಇರಾಣ ಮುಂತಾದ ದೇಶಗಳನ್ನು ಗೆದ್ದನಾದ್ದರಿಂದ ಯುರೋಪಿಯನ್ನರು ಹಿಂದುಸ್ಥಾನದೊಡನೆ ಪ್ರತ್ಯಕ್ಷ ವ್ಯಾಪಾರ ಮಾಡುವುದು ನಿಂತಿತು. ಯುರೋಪಿಯನ್ನರು ಅರಬ್, ತುರ್ಕಸ್ತಾನದವರ ಮುಖಾಂತರ ಹಿಂದುಸ್ಥಾನದೊಡನೆ ವ್ಯಾಪಾರ ಮಾಡಬೇಕಾಯಿತು. ಮಸಾಲೇ ಸಾಮಾನು ಮತ್ತು ಜೀವನಾವಶ್ಯಕ ವಸ್ತುಗಳಿಗಾಗಿ ಯುರೋಪಿಯನ್ನರಿಗೆ ಹಿಂದುಸ್ಥಾನವನ್ನೇ ಅವಲಂಬಿಸಬೇಕಾಗಿತ್ತು, ಆದ್ದರಿಂದ ಅರಬ ಮತ್ತು ತುರ್ಕಸ್ತಾನದವರ ಮಧ್ಯಸ್ತಿಕೆ ತಪ್ಪಿಸಲು ಯುರೋಪಿಯನ್ನರು ಪೂರ್ವದಿಂದ ಹಿಂದುಸ್ಥಾನಕ್ಕೆ ಜಲಮಾರ್ಗ ಶೋಧಿಸತ್ತಿದರು. ಇದೇ ಕಾಲದಲ್ಲಿ ಹೋಕಾಯಂತ್ರದ ಶೋಧವೂ ಆಗಿದ್ದರಿಂದ ಜಲಪರ್ಯಟನ ಕಾರ್ಯಕ್ಕೆ ಮತ್ತೂ ಪ್ರೋತ್ಸಾಹ ದೊರೆಯಿತು.

ಕ್ರಿ. ಶ. ೧೪೯೨ರಲ್ಲಿ **ಕೋಲಂಬಸ್** ಎಂಬ ನಾವಿಕನು ಸ್ಪೇನದಿಂದ ಹಿಂದುಸ್ಥಾನದ ಶೋಧನೆಗೆ ಆಟ್ಲಾಂಟಿಕ್ ಮಹಾಸಾಗರದಲ್ಲಿ ಪಶ್ಚಿಮಾಭಿಮುಖವಾಗಿ ಹೊರಟನು. ಮಾರ್ಗದಲ್ಲಿ ಒಂದು ಭೂಪ್ರದೇಶ ಕಾಣಲು ಇದೇ ಹಿಂದುಸ್ಥಾನವಿರಬೇಕೆಂದು ತಿಳಿದಿದ್ದನು. ಮುಂದೆ ಅದು ಹಿಂದುಸ್ಥಾನವಲ್ಲವೆಂದು ತಿಳಿದದ್ದರಿಂದ ಅದಕ್ಕೆ ವೆಸ್ಟ್ ಇಂಡೀಜ್ ಎಂಬ ಹೆಸರು ಬಿದ್ದಿತು.

ಪೋರ್ತುಗೀಜರೂ ಹಿಂದುಸ್ಥಾನಕ್ಕೆ ಜಲಮಾರ್ಗ ಶೋಧಿಸಲು ಪ್ರಯತ್ನಿಸಿದರು. ಈ ಪ್ರಯತ್ನಕ್ಕಾಗಿ ಹೊರಟ ಮೊದಲನೇ ಪ್ರವಾಸಿಯು ಆಫ್ರಿಕಾಖಂಡದ ಪಶ್ಚಿಮತೀರದಲ್ಲಿರುವ ಸೆನೆಗಾಲ ನದಿಯವರೆಗೂ, ಎರಡನೇ ಪ್ರವಾಸಿಯಾದ **ಬೋರ್ಥೊಲೋಮೋ ಡಿಯಾಝನು** ಕ್ರಿ. ಶ. ೧೪೮೭ರಲ್ಲಿ ಆಫ್ರಿಕೆಯ ದಕ್ಷಿಣ ತುದಿ ಕೇಪ್‌ಆಫ್ ಗುಡ್ಹೋಪನ್ನು ದಾಟಿ **ಫೋರ್ಟ್ ಇಲೆಜೆಬತ್** ನವರೆಗೂ ಬಂದು ಹಿಂದಿರುಗಿದನು. ಮುಂದೆ ಕ್ರಿ. ಶ. ೧೪೯೭ ರ ಜುಲೈನಲ್ಲಿ **ವಾಸ್ಕೋಡಾಗಾಮಾ** ಎಂಬುವನು

ಆಫ್ರಿಕೆಯ ತೀರದ ಜಾಂಝಿಬಾರಿನಿಂದ ೨೦೦ ಮೈಲಿ ದೂರದಲ್ಲಿರುವ ಒಂದುಬಂದರಕ್ಕೆ ಬಂದನು. ಅಲ್ಲಿಂದ ಒಂದು ದೋಣಿಯಲ್ಲಿ ಕುಳಿತು ಕೋಚಿನ್ ಬಂದರದಲ್ಲಿ ಇಳಿದನು. ಈ ಶೋಧಕ್ಕಾಗಿ ಇವನಿಗೆ ೧೦ ತಿಂಗಳು ಅವಧಿ ಹಿಡಿಯಿತು. ನಂತರ ಪೋರ್ತುಗೀಜ್, ಡಚ್, ಇಂಗ್ಲೀಷ್, ಮತ್ತು ಫ್ರೆಂಚ್ ವ್ಯಾಪಾರಿಗಳು ಒಬ್ಬರ ಹಿಂದೊಬ್ಬರು ಬರಹತ್ತಿದರು.

**ಫ್ರಾನ್ಸಿಸ್‌ಕೊ ಅಲ್ಮೆಡಾ ಮತ್ತು ಅಲ್ಫಾನ್ಸೋ ಅಲ್ಬುಕರ್ಕ ಇವರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.**

ಪೋರ್ತುಗೀಜ ಅರಸರು ಕ್ರಿ. ಶ. ೧೫೦೫ರಲ್ಲಿ **ಫ್ರಾನ್ಸಿಸ್‌ಕೋ ಅಲ್ಮೆಡಾನನ್ನು** ಹಿಂದುಸ್ಥಾನದಲ್ಲಿ ತಮ್ಮ ಗವರ್ನರನೆಂದು ನೇಮಿಸಿದನು. ಇವನು ತಮ್ಮ ಮಾಲುಮತ್ತೆಯ ಸಂರಕ್ಷಣೆಗಾಗಿ ಸೈನ್ಯವನ್ನಿಟ್ಟಿದ್ದುದರಿಂದ ಸಮುದ್ರಗಳ್ಳರ ಕಾಟ ಎಷ್ಟೋ ಕಡಿಮೆಯಾಯಿತು. ಜಲಮಾರ್ಗ ಶೋಧವಾದಂದಿನಿಂದ ಈಜಿಪ್ತದ ಮಧ್ಯಸ್ಥಿಕೆಯ ವ್ಯಾಪಾರವು ನಿಂತಿತು. ಇದರಿಂದ ಈಜಿಪ್ತದ ಮುಸಲ್ಮಾನರು ಸಿಟ್ಟಿಗೆದ್ದು ಪೋರ್ತುಗೀಜರ ಮೇಲೆ ಕ್ರಿ. ಶ. ೧೫೦೮ರಲ್ಲಿ ಸೈನ್ಯಕಳಿಸಿದರು. ಅಲ್ಮೆಡಾನು ದಾಳಿಗಾರರನ್ನು ಹಣಿದು ಹಿಮ್ಮೆಟ್ಟಿಸಿದನು.

**ಅಲ್ಫಾನೋ ಅಲ್ಬುಕರ್ಕ** :—ಈತನು ಅಲ್ಮೆಡಾನ ತರುವಾಯ ಕ್ರಿ. ಶ. ೧೫೦೯-೧೫೧೫ರ ವರೆಗೆ ಹಿಂದುಸ್ಥಾನದಲ್ಲಿ ಗವ್ಹರ್ನರನಾಗಿದ್ದನು. ಪೂರ್ವ ಸಮುದ್ರದಲ್ಲಿ ಸೈನ್ಯ ಬಲವನ್ನು ಹೆಚ್ಚಿಸಿ ಪೋರ್ತುಗೀಜ್ ರಾಜ್ಯ ಸ್ಥಾಪನೆಗಾಗಿ ಇವನು ಕಳಿಸಲ್ಪಟ್ಟಿದ್ದನು. ಇವನು ಕ್ರಿ. ಶ. ೧೫೧೦ರಲ್ಲಿ ಗೋವೆಯನ್ನು ವಶಪಡಿಸಿಕೊಂಡು ಅಲ್ಲಿ ತಮ್ಮ ಸೈನ್ಯ ಮತ್ತು ವ್ಯಾಪಾರದ ಕೇಂದ್ರ ಸ್ಥಾಪಿಸಿದನು. ಕ್ರಿ. ಶ. ೧೫೧೧ರಲ್ಲಿ ಮಲಕ್ಕಾದ್ವೀಪ ವಶಪಡಿಸಿಕೊಂಡದ್ದರಿಂದ ಮಸಾಲೆಯ ವ್ಯಾಪಾರವೆಲ್ಲಾ ಪೋರ್ತುಗೀಜರ ಕೈಗೆ ಸಿಕ್ಕಂತಾಯಿತು, ಅಲ್ಲದೆ ಚೀನ, ಜಪಾನ್ ದೇಶಗಳೊಡನೆ ವ್ಯಾಪಾರವೂ ಬೆಳೆಯಿತು. ಕ್ರಿ. ಶ. ೧೫೧೫ರಲ್ಲಿ ಇರಾಣ ಆಖಾತದಲ್ಲಿಯ ಓಮೇಜ್ ದ್ವೀಪವನ್ನು ವಶಪಡಿಸಿಕೊಂಡದ್ದರಿಂದ ಆ ಭಾಗದ ಬಂದರುಗಳೊಡನೆ ವ್ಯಾಪಾರವು ಬೆಳೆಯಿತು. ಅಲ್ಬುಕರ್ಕನು ಶೂರನೂ ಚತುರನೂ ಇದ್ದಂತೆ ನ್ಯಾಯಾಳುವೂ ಉದಾರಿಯೂ ಇದ್ದುದರಿಂದ ಹಿಂದುಸ್ಥಾನದಲ್ಲಿ ಪೋರ್ತುಗೀಜ ಸತ್ತೆ ಬೆಳೆಯಲು ಅನುಕೂಲವಾಯಿತು. ಇವನು ಹಿಂದೀಯರನ್ನು

ಒಳ್ಳೆಯ ರೀತಿಯಿಂದ ನಡೆಯಿಸಿಕೊಳ್ಳುತ್ತಿದ್ದನು. ಕ್ರಿ. ಶ. ೧೫೧೫ರಲ್ಲಿ ಇವನು ಗೋವೆಯಲ್ಲಿಯೇ ಮರಣವಾದನು.

**ಹಿಂದುಸ್ತಾನದಲ್ಲಿ ಪೋರ್ತುಗೀಜ ಸತ್ತೆಯ ಉತ್ಕರ್ಷ ಮತ್ತು ನಾಶದ ಕಾರಣಗಳನ್ನು ಸ್ವಲ್ಪದರಲ್ಲಿ ವಿವೇಚಿಸಿರಿ.**

ಪೋರ್ತುಗೀಜರು ಹಿಂದುಸ್ತಾನಕ್ಕೆ ಜಲಮಾರ್ಗದಿಂದ ಬಂದ ಯುರೋಪಿಯನ್ನರಲ್ಲಿ ಮೊದಲಿಗರಾದ್ದರಿಂದಲೂ ಅವರ ಮೊದಲಿನ ಗವ್ಹರ್ನರರಾದ ಅಲ್ಮಿಡಾ, ಅಲ್ಬುಕರ್ಕರು ಮಹತ್ವದ ಪ್ರದೇಶಗಳನ್ನು ವಶಪಡಿಸಿಕೊಂಡು ಪೋರ್ತುಗೀಜರ ವ್ಯಾಪಾರ ಬೆಳೆಯಿಸಿದ್ದರು. ಇವರು ಸಮರ್ಥ ಮತ್ತು ನ್ಯಾಯಪರ ಆಡಳಿತಗಾರರಿದ್ದುದರಿಂದ ಭಾರತೀಯರ ಸಹಕಾರ ದೊರೆತು ರಾಜ್ಯ ಉತ್ಕರ್ಷ ಹೊಂದಹತ್ತಿದ್ದಿತು.

ಮುಂದೆ ೧೬ನೇ ಶತಮಾನದಲ್ಲಿ ಪೋರ್ತುಗಾಲವು ಸ್ಪೇನ್ ಜನರ ಅಧೀನಕ್ಕೊಳಪಟ್ಟಿದ್ದರಿಂದ ಹಿಂದುಸ್ತಾನದಲ್ಲಿಯೂ ಪೋರ್ತುಗೀಜರಿಗೆ ತಮ್ಮ ವರ್ಚಸ್ಸು ಉಳಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಮುಂದೆ ಸ್ಪೇನಿನವರನ್ನು ಸೋಲಿಸಿ ಇಂಗ್ಲೀಷರು ತಮ್ಮ ಅಧಿಕಾರ ಸ್ಥಾಪಿಸಿದರು. ಡಚ್ಚರು ಪೂರ್ವ ಠಾಣೆಗಳನ್ನು ವಶಪಡಿಸಿಕೊಂಡರು. ಇರಾಣದ ಶಹಾನು ಓರ್ಮೆಜ್ ವಶಪಡಿಸಿಕೊಂಡನು. ಪೋರ್ತುಗೀಜರು ಹಿಂದುಸ್ತಾನದಲ್ಲಿ ಬಲಾತ್ಕಾರದಿಂದ ಜನರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಸಹತ್ತಿದರು. ಇದರಿಂದ ಇವರಿಗೆ ಮರಾಠರಿಂದ ವಿರೋಧ ಉಂಟಾಗಿ ಪೋರ್ತುಗೀಜ ಸತ್ತೆ ಕ್ಷೀಣವಾಗತೊಡಗಿತು. ಸಧ್ಯ ಅವರ ವಶದಲ್ಲಿ ಗೋವಾ, ದಮನ ದೀವ ಈ ಭಾಗಗಳಿವೆ. ಭಾರತವು ಸ್ವತಂತ್ರವಾಗಿರುವುದರಿಂದ ಮೇಲಿನ ಮೂರು ಭಾಗಗಳನ್ನು ಭಾರತದಲ್ಲಿ ವಿಲೀನಗೊಳಿಸಲು ಪ್ರಯತ್ನನಡೆದಿದೆ.

**೧೭ನೇ ಶತಮಾನದಲ್ಲಿ ಮಸಾಲೇ ಸಾಮಾನಿನ ಗುತ್ತಿಗೆ ವ್ಯಾಪಾರವನ್ನು ಡಚ್ಚರು ಹೇಗೆ ತಮ್ಮ ವಶಕ್ಕೆ ತೆಗೆದುಕೊಂಡರು?**

ಇಂಗ್ಲೀಷರೂ ಡಚ್ಚರೂ ಕೂಡಿ ಸ್ಪೇನ್ ರಾಜ್ಯವನ್ನು ಮುರಿದರು. ಆಗ ಡಚ್ಚರ ನಾವಿಕಪಡೆಯು ಜಗತ್ತಿನಲ್ಲಿ ಹೆಚ್ಚು ಪ್ರಬಲವಾಗಿತ್ತು. ಇವರು ಮಸಾಲೆ ಸಾಮಾನಿನ ವ್ಯಾಪಾರ ಮಾಡುವದಕ್ಕಾಗಿ "ಡಚ್ ಪೂರ್ವ ಹಿಂದುಸ್ತಾನದ ಸಂಸ್ಥೆ" ( ಡಚ್ ಈಸ್ಟ ಇಂಡಿಯಾ ಕಂಪನಿ ) ಯನ್ನು ಕ್ರಿ. ಶ. ೧೬೦೨ ರಲ್ಲಿ ಸ್ಥಾಪಿಸಿದರು. ಮೊದಲು ಪೋರ್ತುಗೀಜರನ್ನು

ಜಾವಾ, ಸುಮಾತ್ರಾದಿಂದ ಹೊರಡೂಡಿ ಅಲ್ಲಿಯ ಮಸಾಲೀ ವ್ಯಾಪಾರವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಈ ಕಾಲದಲ್ಲಿ ( ಕ್ರಿ. ಶ. ೧೬೦೦ ರಲ್ಲಿ) ಸ್ಥಾಪಿತವಾದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯವರು ಇಲ್ಲಿ ಸ್ವಲ್ಪ ಪ್ರಮಾಣದಿಂದ ವ್ಯಾಪಾರ ಸಾಗಿಸಿದ್ದರು. ಡಚ್ಚರೂ ಇಂಗ್ಲೀಷರೂ ಮೊದಲು ಸ್ವಲ್ಪ ಕಾಲ ಕೂಡಿನಡೆದರು. ವ್ಯಾಪಾರದಲ್ಲಿ ಎರಡೂ ಕಂಪನಿಗಳಿಗೆ ಪೈಪೋಟಿ ಹೆಚ್ಚಾಗಲು ತಂಟೆ ಉತ್ಪನ್ನವಾದುವು. ಕ್ರಿ. ಶ. ೧೬೨೩ ರಲ್ಲಿ ಅಂಬಾಯನಾ ದ್ವೀಪದಲ್ಲಿ ಡಚ್ಚರು ಬ್ರಿಟಿಶರ ಕೊಲೆ ಮಾಡಿದರು. ಇದರಿಂದ ಬ್ರಿಟಿಶರು ನಿದಾನವಾಗಿ ಅಲ್ಲಿಂದ ಕಾಲುಕಿತ್ತು ಹಿಂದುಸ್ತಾನವನ್ನು ಹೊಕ್ಕರು. ಡಚ್ಚರು ಪೋರ್ತುಗೀಜರಿಂದ ಮಲಾಕ್ಕಾ, ಸಿಲೋನ್, ಅಂಬೋಯನಾ, ಕೊಚೀನ್ ಗಳನ್ನು ಗೆದ್ದುಕೊಂಡರು. ಹಿಂದೀ ಅರಸರ ಅಪ್ಪಣೆ ಪಡೆದುಕೊಂಡು ನಾಗಪಟ್ಟಣ, ಕಾಲಿಕತ್ತ, ಚಿನ್‌ಸುರಾ ಮುಂತಾದಕಡೆ ತಮ್ಮ ವಖಾರ (ಗೋಡೌನ)ಗಳನ್ನು ಕಟ್ಟಿದರು. ಹೀಗೆ ಡಚ್ಚರು ಪೂರ್ವದೇಶದ ಮಸಾಲೆ ವ್ಯಾಪಾರವನ್ನು ತಮ್ಮ ವಶಕ್ಕೆ ಪಡೆದುಕೊಂಡರು.

### ಹಿಂದುಸ್ತಾನದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ವಖಾರಗಳು ಹೇಗೆ ಸ್ಥಾಪಿತವಾದವು ?

ಪೂರ್ವ ದೇಶಗಳೊಡನೆ ವ್ಯಾಪಾರ ಮಾಡುವದಕ್ಕಾಗಿ ಕ್ರಿ. ಶ. ೧೬೦೦ ರಲ್ಲಿ ಈಸ್ಟ್ ಇಂಡಿಯಾ ಕಂಪನಿಯನ್ನು ಇಂಗ್ಲೆಂಡಿನಲ್ಲಿ ಸ್ಥಾಪಿಸಿದರು. ೧ನೇ ಜೇಮ್ಸನಿಂದ ಕಳಿಸಲ್ಪಟ್ಟ ಕ್ಯಾಪ್ಟನ್ ಹಾಕಿನ್ಸನು ಜಹಂಗೀರನಿಂದ ಸವಲತ್ತು ಪಡೆದು ಸುರತದಲ್ಲಿ ವಖಾರ ಕಟ್ಟಿದನು. ಇಂಗ್ಲೆಂಡಿನ ರಾಣಿಯಾದ **ಎಲಿಝಬೆತ್ತಳಿಂದ** ಒಂದು ( ಸನದು ) ಪತ್ರ ತೆಗೆದುಕೊಂಡು **ಸರ್ ಥಾಮಸ್ ರೋ** ಎಂಬುವನು ಜಹಂಗೀರ್ ಬಾದಶಾಹನ ಹತ್ತರ ಬಂದು ಕ್ರಿ. ಶ. ೧೬೧೫ ರಲ್ಲಿ ಕೆಲ ವ್ಯಾಪಾರೀ ಸವಲತ್ತುಗಳನ್ನು ಪಡೆದು ತಮ್ಮ ವಖಾರವನ್ನು ಕಟ್ಟಿದನು. ಮುಂದೆ ಇಂಗ್ಲೀಷ್ ವೈದ್ಯರು ದಿಲ್ಲಿಯ ಬಾದಶಹ ಷಾಹೆಜಹನನ ಮಗಳನ್ನೂ ಫರೂಕ್‌ಶೆಅರ್ ಎಂಬ ಅರಸನನ್ನೂ ಚಿಕಿತ್ಸೆ ಮಾಡಿ ಖಾಯಿಲೆಯಿಂದ ಗುಣ ಪಡಿಸಿದ್ದಕ್ಕೆ ಇಬ್ಬರೂ ಬಾದಶಾಹರು ಇಂಗ್ಲೀಷರಿಗೆ ವಿಶೇಷ ವ್ಯಾಪಾರಿ ಸವಲತ್ತುಗಳನ್ನು ಕೊಟ್ಟರು. ಇಂಗ್ಲೀಷರು ದಕ್ಷಿಣ ಹಿಂದುಸ್ತಾನದಲ್ಲಿ ಚಂದ್ರಗಿರಿ ಮಹಾರಾಜನಿಂದ ಕೆಲ ಭೂಮಿಯನ್ನು ಕೊಂಡುಕೊಂಡು ಅಲ್ಲಿ " **ಫೋರ್ಟ್**

**ಜಾರ್ಜ**" ಎಂಬ ಕೋಟೆಯನ್ನು ಕಟ್ಟಿ ಅಲ್ಲಿ ವಖಾರವನ್ನು ಸ್ಥಾಪಿಸಿದರು. ಅದೇ ಕೋಟೆಯೇ ಈಗಿನ ಮದ್ರಾಸ ಪಟ್ಟಣವಾಗಿದೆ. ಮುಂದೆ ಇಂಗ್ಲೀಷರು ಬಂಗಾಲದ ಹುಗಳೀ ನದಿಯ ದಂಡೆಯಮೇಲೆ ಒಂದು ಕೋಟೆ ಕಟ್ಟಿ ವಖಾರವನ್ನು ಸ್ಥಾಪಿಸಿ **ಫೋರ್ಟವಿಲ್ಯಮ್** ಎಂಬ ಹೆಸರಿಟ್ಟರು. ಅದೇ ಈಗಿನ ಕಲ್ಕತ್ತಾ ಪಟ್ಟಣ. "ಮುಂಬೈ ದ್ವೀಪವನ್ನು ಪೋರ್ತುಗೀಜ್ ಅರಸನು ಇಂಗ್ಲೆಂಡಿನ ರಾಜನಿಗೆ ವರದಕ್ಷಿಣೆಯಾಗಿ ಅರ್ಪಿಸಿದ್ದನು. ಅದನ್ನು ಕಂಪನಿಯವರು ರಾಜನಿಂದ ವರ್ಷಕ್ಕೆ ೧೦ ಪೌಂಡು ಭೂ ಭಾಡಿಗೆ ಗೊತ್ತು ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡರು. ಹೀಗೆ ಇಂಗ್ಲೀಷರು ಸುಮಾರು ೭೫ ವರ್ಷಗಳಲ್ಲಿ ಹಿಂದುಸ್ತಾನದ ಸುರತ, ಅಹಮದಾಬಾದ, ಮುಂಬಯಿ, ಮದ್ರಾಸ, ಮಚ್ಛಲಿಪಟ್ಟಣ, ಹುಗಳಿ, ಪಾಟಣಾ ಮತ್ತು ಕಾಶೀಮ್ ಬಜಾರ್ ಮುಂತಾದ ಕಡೆ ತಮ್ಮ ವಖಾರಗಳನ್ನು ಕಟ್ಟಿ ವ್ಯಾಪಾರ ಬೆಳಿಸಿದರು.

ಇಂಗ್ಲೆಂಡಿನ ಇತರ ವ್ಯಾಪಾರೀ ಕಂಪನಿಗಳು ಈಸ್ಟ್ ಇಂಡಿಯಾ ಕಂಪನಿಯೊಡನೆ ಪೈಪೋಟಿ ನಡೆಯಿಸಿದ್ದರಿಂದ ಇದನ್ನು ತಡೆಯಲು ಎಲ್ಲ ಕಂಪನಿಗಳನ್ನು ಕೂಡಿಸಿ ಕ್ರಿ. ಶ. ೧೭೦೮ರಲ್ಲಿ ಒಂದೇ ಸಂಸ್ಥೆಯನ್ನಾಗಿ ಮಾಡಿ ಅವಕ್ಕೆ "ಸಂಯುಕ್ತ ಪೂರ್ವ ಇಂಡಿಯಾದ ಕಂಪನಿ" ಎಂಬ ಹೆಸರಿಟ್ಟರು.

### ಹಿಂದುಸ್ತಾನದಲ್ಲಿ ಫ್ರೆಂಚ ವ್ಯಾಪಾರಿ ಮಂಡಳಗಳು ಎಲ್ಲೆಲ್ಲಿ ವಖಾರಗಳನ್ನು ಸ್ಥಾಪಿಸಿದರು ಎಂಬ ಬಗ್ಗೆ ಬರೆಯಿರಿ.

ಇತರ ಯೂರೋಪ್ ರಾಷ್ಟ್ರಗಳನ್ನು ನೋಡಿ ಫ್ರೆಂಚರು ಕ್ರಿ. ಶ. ೧೬೧೫ರಲ್ಲಿ ಫ್ರೆಂಚ ವ್ಯಾಪಾರಿ ಮಂಡಳವನ್ನು ಸ್ಥಾಪಿಸಿ ಪೂರ್ವ ದೇಶಗಳೊಡನೆ ವ್ಯಾಪಾರ ಮಾಡಹತ್ತಿದರು. ಆದರೆ ಡಚ್ಚರು ತಮ್ಮ ಆಧೀನದಲ್ಲಿದ್ದ ದೇಶಗಳಲ್ಲಿ ಫ್ರೆಂಚರಿಗೆ ಮಸಾಲೇ ಸಾಮಾನಿನ ವ್ಯಾಪಾರ ಮಾಡಲು. ಅವಕಾಶ ಕೊಡಲಿಲ್ಲ. ಆದ್ದರಿಂದ ಅವರು ಹಿಂದುಸ್ಥಾನಕ್ಕೆ ಬಂದು ಆಗಿನ ಆಯಾಭಾಗದ ಅರಸರುಗಳಿಂದ ಅಪ್ಪಣೆಗಳನ್ನು ಪಡೆದು ವಖಾರಗಳನ್ನು ಕಟ್ಟಿದರು. ಕ್ರಿ. ಶ. ೧೬೬೮ ರಲ್ಲಿ ಸುರತಿನಲ್ಲಿಯೂ, ಕ್ರಿ. ಶ. ೧೬೬೯ರಲ್ಲಿ ಮಛಲೀ ಪಟ್ಟಣದಲ್ಲಿಯೂ ವಖಾರಗಳನ್ನು ಕಟ್ಟಿದರು. ಕ್ರಿ. ಶ. ೧೬೭೪ ರಲ್ಲಿ ಬಿಜಾಪುರದ ಆದಿಲ್‌ಶಾಹನಿಂದ ಪೂರ್ವತೀರದಲ್ಲಿರುವ ಪಾಂಡಿಚರಿ ಬಂದರವನ್ನು ಖರೀದಿಗೆ ತೆಗೆದುಕೊಂಡು ಅಲ್ಲಿ ವಖಾರ ಸ್ಥಾಪಿಸಿದರು.

ಇದಕ್ಕೆ ಆಗ ಪುದುಚೆರಿ ಎಂಬ ಹೆಸರಿತ್ತು. ಇಲ್ಲಿ ಫ್ರೆಂಚರು ತಮ್ಮ ಸೈನ್ಯವ ನ್ನಿಟ್ಟರು. ದೇಶೀ ಸೈನಿಕರಿಗೆ ಬಂದೂಕುಗಳನ್ನು ಕೊಟ್ಟು ತಮ್ಮ ಸೈನ್ಯ ಬೆಳೆಯಿಸಿ ಇಲ್ಲಿಯ ದೇಶಿಯ ರಾಜರುಗಳನ್ನು ಗೆಲ್ಲಲು ಹೊಂಚಿಕೆ ಹಾಕಿದರು. ಮುಂದೆ ಇವರು ಫ್ರೆಂಚಪಟ್ಟಾ, ಬಲಸೋರ್, ಡಾಕ್ಕಾ, ಪಾಟಣಾ, ಕಾಶೀಮ ಬಜಾರ, ಮಾಹಿ, ತ್ರಿಕೋಮಾಲಿಗಳಲ್ಲಿ ವಖಾರಗಳ ನ್ನಿಟ್ಟು ಬ್ರಿಟಿಶರೊಡನೆ ವ್ಯಾಪಾರದಲ್ಲಿ ಪೈಪೋಟಿ ನಡೆಯಿಸಿದರು.

## ಹಿಂದುಸ್ತಾನದ ರಾಜಕಾರಣದಲ್ಲಿ ಪ್ರವೇಶಿಸಲು ಇಂಗ್ಲೀಷ್ ಮತ್ತು ಫ್ರೆಂಚರಿಗೆ ಯಾವ ಕಾರಣಗಳು ದೊರೆತವು?

ಹಿಂದೀ ಅರಸರು ತಮ್ಮತಮ್ಮಲ್ಲಿಯೇ ಬಡಿದಾಡಹತ್ತಿದ್ದರು. ಔರಂಗಜೇಬನು ಬಿತ್ತಿದ ವಿಷದ ಬೀಜದಿಂದಾಗಿ ವೈರಿಗಳುದ್ಭವಿಸಿ ಮೊಗಲ ಸಾಮ್ರಾಜ್ಯವು ಹಾಳಾಗಹತ್ತಿದ್ದಿತು. ಹಿಂದೀ ಸೈನಿಕರಿಗೆ ಅಧುನಿಕ ಶಸ್ತ್ರಾಸ್ತ್ರ, ಯುದ್ಧಪದ್ಧತಿಗಳು ಗೊತ್ತಿಲ್ಲದೇ ಇದ್ದುದರಿಂದ ಯುದ್ಧದಲ್ಲಿ ಇಂಗ್ಲೀಷ್ ಮತ್ತು ಫ್ರೆಂಚರ ಕೈಮೇಲಿತ್ತು. ಇವರು ಯಾವುದಾದರೂ ಒಂದು ಪಕ್ಷವನ್ನು ಕಟ್ಟಿ ಹೋರಾಡಿ ಅವನಿಗೆ ರಾಜಗದ್ದುಗೆಯನ್ನು ದೊರೆಕಿಸಿ ಕೊಡುತ್ತಿದ್ದರು, ಅಲ್ಲದೆ ತಾವು ಅವರಿಂದ ವಿಶೇಷ ವ್ಯಾಪಾರೀ ಸವಲತ್ತು ಗಳನ್ನೂ, ದ್ರವ್ಯವನ್ನೂ, ಭೂಮಿಯನ್ನೂ ಪಡೆಯಹತ್ತಿದರು. ಹೀಗೆ ಅವರು ಹಿಂದೀ ರಾಜಕಾರಣದಲ್ಲಿ ತಮ್ಮ ವರ್ಚಸ್ಸನ್ನು ಬೆಳೆಯಿಸಿಕೊಂಡರು.

## ಫ್ರೆಂಚ ಮತ್ತು ಇಂಗ್ಲೀಷರಲ್ಲಿ ಯುದ್ಧಗಳಾಗಲು ಕಾರಣಗಳೇನು?

ಫ್ರೆಂಚರಿಗೂ ಇಂಗ್ಲೀಷರಿಗೂ ವ್ಯಾಪಾರದಲ್ಲಿ ಪೈಪೋಟಿ ಹೆಚ್ಚಾದ್ದ ರಿಂದ ಅವರಲ್ಲಿ ವೈಮನಸ್ಸು ಹೆಚ್ಚಾಗಿತ್ತು. ಈರ್ವರೂ ರಾಜಕಾರಣದಲ್ಲಿ ತಮ್ಮ ವರ್ಚಸ್ಸು ಸ್ಥಾಪಿಸಲು ಸೈನ್ಯ ಸಂಖ್ಯೆಯನ್ನು ಬೆಳೆಯಿಸುವುದಕ್ಕಾಗಿ ಹಿಂದೀ ಜನರಿಗೆ ಕವಾಯತ ಮತ್ತು ಶಸ್ತ್ರಾಸ್ತ್ರಗಳ ಉಪಯೋಗವನ್ನು ಕಲಿಸಿ ಸೈನ್ಯದಲ್ಲಿ ಸೇರಿಸಿಕೊಂಡರು. ಕ್ರಿ. ಶ. ೧೭೪೬ ರಲ್ಲಿ ಯುರೋಪಿನಲ್ಲಿ ಆರಂಭವಾದ " **ಆಸ್ಟ್ರಿಯನ್ ವಾರಸಾ ಹಕ್ಕಿನ ಯುದ್ಧದಲ್ಲಿ** " ಇಂಗ್ಲೀಷ ಮತ್ತು ಫ್ರೆಂಚರು ಪರಸ್ಪರ ವಿರೋಧಿ ಗುಂಪು ಕಟ್ಟಿದ್ದರಿಂದ **ಯುದ್ಧ** ಆರಂಭವಾಯಿತು. ಆಗ ಹಿಂದುಸ್ತಾನದ ಫ್ರೆಂಚ್ ಗವ್ಹರ್ನರನಾದ ಡುಪ್ಲೆಯು ಇಂಗ್ಲೀಷರಮೇಲೆ ಯುದ್ಧಸಾರಿ **ಲ್ಯಾಬರ್ಡೋನೆ** ಎಂಬ

ಫ್ರೆಂಚ ಸರದಾರನಿಂದ ಮದ್ರಾಸಿನ ಕೋಟೆಯನ್ನು ವಶಪಡಿಸಿಕೊಂಡನು ಮುಂದೆ ಕ್ರಿ. ಶ. ೧೭೪೮ ರಲ್ಲಿ ಯೂರೋಪಿನಲ್ಲಿ ಒಪ್ಪಂದವಾಗಿ ಯುದ್ಧ ನಿಲ್ಲಲು ಇಲ್ಲಿಯೂ ಯುದ್ಧ ನಿಂತಿತು. ಒಪ್ಪಂದದ ಪ್ರಕಾರ ಮದ್ರಾಸ ಇಂಗ್ಲೀಷರಿಗೆ ತಿರುಗಿ ಕೊಡಲ್ಪಟ್ಟಿತು.

**ಕರ್ನಾಟಕದ ೧ನೇ ಯುದ್ಧದ ಬಗ್ಗೆ ಸಂಕ್ಷಿಪ್ತವಾಗಿ ಬರೆಯಿರಿ.**

ಕ್ರಿ. ಶ. ೧೭೪೯ರಲ್ಲಿ ಅರ್ಕಾಟಿನ ಗಾದಿಯ ಮೇಲಿದ್ದ ಅನ್ವರುದ್ದೀನನಿಗೂ, ಚಂದಾಸಾಹೇಬನಿಗೂ ಗಾದಿಯ ಬಗ್ಗೆ ತಂಟೆ ಹತ್ತಿತು. ಇದೇ ರೀತಿ ಹೈದರಾಬಾದದ ಗಾದಿಯ ಬಗ್ಗೆ ನಾಸೀರ ಜಂಗನಿಗೂ, ಮುಜಫರ್ ಜಂಗನಿಗೂ, ತಂಟೆ ಉತ್ಪನ್ನವಾಗಿತ್ತು. ಚಾಂದಾಸಾಹೇಬನು ಫ್ರೆಂಚರ ಸಹಾಯವನ್ನು ಬೇಡಿದನು. ಡುಪ್ಲೆಯು ಚಂದಾಸಾಹೇಬನ ಸಹಾಯಕ್ಕಾಗಿ **ಬುಸಿ** ಎಂಬ ಸರದಾರರೊಡನೆ ಸೈನ್ಯ ಕಳಿಸಿದನು. ಚಾಂದಾಸಾಹೇಬನ ಸಹಾಯಕ್ಕೆ ಮುಜಫರ್‌ಜಂಗನೂ ಬಂದನು. **ಅಂಬೂರ್** ಎಂಬಲ್ಲಿ ಅನ್ವರುದ್ದೀನನು ಫ್ರೆಂಚರನ್ನು ಎದುರಿಸಿ ಯುದ್ಧದಲ್ಲಿ ಸತ್ತನು ಮತ್ತು ಅವನ ಮಗ ಮಹಮ್ಮದ್ ಅಲ್ಲಿಯು ತಿರುಚನಾಪಳ್ಳಿಗೆ ಓಡಿಹೋದನು. ಚಾಂದಾಸಾಹೇಬನಿಗೆ ಅರ್ಕಾಟದ ಗಾದಿದೊರೆಯಿತು.

**ಕ್ರಿ. ಶ. ೧೭೫೧ರಲ್ಲಿಯ ಅರ್ಕಾಟಕದ ಮುತ್ತಿಗೆಯ ಬಗ್ಗೆ ನಿಮಗೇನು ಗೊತ್ತುಂಟು?**

ಅರ್ಕಾಟದ ನವಾಬನಾದ ಚಂದಾಸಾಹೇಬನು ಮಹಮ್ಮದ್‌ಅಲ್ಲಿಯನ್ನು ಸೆರೆಹಿಡಿಯಲು ತ್ರಿಚಿನಾಪಲ್ಲಿಗೆ ಮುತ್ತಿಗೆ ಹಾಕಿದನು. ಮಹಮ್ಮದ್ ಅಲ್ಲಿಯು ಇಂಗ್ಲೀಷರ ಸಹಾಯಬೇಡಿದನು. ಇಂಗ್ಲೀಷರಲ್ಲಿ ಸಾಕಷ್ಟು ಸೈನ್ಯಬಲವಿಲ್ಲದ್ದರಿಂದ ಇವನಿಗೆ ಹೇಗೆ ಸಹಾಯನೀಡಬೇಕೆಂಬುದು ಶೋಚದಾಯ್ತು. ಆಗ ಕ್ಲೈವನೆಂಬ ವೀರ ಸಿಪಾಯಿಯು ಒಂದು ಯೋಜನೆ ಮಾಡಿದನು. ಅದು ಆಗಿನ ಇಂಗ್ಲೀಷ್ ಗವ್ಹರ್ನರನಿಗೆ ಒಪ್ಪಿಗೆಯಾಗಿದ್ದರಿಂದ ಕ್ಲೈವನೊಡನೆ ಸೈನ್ಯ ಕಳಿಸಿದನು. ಕ್ಲೈವನು ತ್ರಿಚಿನಾಪಲ್ಲಿಗೆ ಹೋಗದೇ ಅರ್ಕಾಟಕ್ಕೆ ಹೋಗಿ ಅದನ್ನು ವಶಮಾಡಿಕೊಂಡನು. ಆಗ ಚಂದಾಸಾಹೇಬನು ತನ್ನ ಮಗ ರಾಜಾಸಾಹೇಬನೊಂದಿಗೆ ಅರ್ಕಾಟನ್ನು ಗೆಲ್ಲಲು ದೊಡ್ಡ ಸೈನ್ಯ ಕಳಿಸಿದನು. ಇಷ್ಟರಲ್ಲಿ ಇಂಗ್ಲೆಂಡಿನಿಂದ ಹೊಸ ಸೈನ್ಯಸಹಾಯ ದೊರಕಿತು, ಅಲ್ಲದೆ ಮುಧೋಳದ ಮುರಾರಿರಾವ್ ಘೋರ್ಪಡೆಯು

ಶಾಂತಿ ಸುವ್ಯವಸ್ಥೆಯನ್ನು ಸ್ಥಾಪಿಸಿದನು. ಬಂಡಿನಲ್ಲಿದ್ದ ಕೆಲವರಿಗೆ ಕ್ಷಮಾಪಣೆ ಮಾಡಿದ್ದರಿಂದ ಇವನು ದಯಾಳುವಾಗಿದ್ದನೆಂಬುದು ತಿಳಿಯುವುದು.

(೧೭) ಕ್ರಿ. ಶ. ೧೮೫೭ರ ಬಂಡು ಹಿಂದೀಯರ ಜಾಗ್ರತಿಯ ಕುರುಹು ಆಗಿದ್ದಿತು ಎನ್ನಬಹುದು. ಏಕೆಂದರೆ ಪರಾಧೀನರಾದರೆ ತಮ್ಮ ಹಕ್ಕು ಬಾಧ್ಯತೆಗಳು ಹೇಗೆ ತುಳಿಯಲ್ಪಡುತ್ತವೆ ಎಂಬುದು ಹಿಂದೀಯರಿಗೆ ಮನವರಿಕೆಯಾಯಿತು. ಆದ್ದರಿಂದ ಹಿಂದೂ ಮುಸಲ್ಮಾನ ಅರಸರೂ, ಜಮೀನುದಾರರೂ, ಶ್ರೀಮಂತರೂ, ಸೈನಿಕರೂ ಎಲ್ಲರೂ ಒಟ್ಟಾಗಿ ಬಂಡೆದ್ದರು. ಆದ್ದರಿಂದಲೇ ಈ ಬಂಡನ್ನು ಹಿಂದೀಯರ "ಸ್ವಾತಂತ್ರ್ಯ ಸಂಗ್ರಾಮ" ವೆಂದೆನ್ನುವರು.

(೧೮) ಕ್ರಿ. ಶ. ೧೮೫೭ರ ಬಂಡಿನಿಂದಾಗಿ ಇಂಗ್ಲೆಂಡಿನ ಪಾರ್ಲಿಮೆಂಟು ಕಂಪನಿಯ ಆಡಳಿತೆಯ ಅಧಿಕಾರವನ್ನೆಲ್ಲಾ ಕಿತ್ತುಕೊಂಡು, ಹಿಂದುಸ್ಥಾನದ ಮೇಲೆ ಇಂಗ್ಲೆಂಡಿನ ರಾಣಿಯ ಸಾರ್ವಭೌಮಾಧಿಕಾರವನ್ನು ಸಾರಿದರು ಎಲ್ಲರೂ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಳ್ಳಕೂಡದೆಂಬ ಕಾಯದೆ ಮಾಡಿ, ಇದಕ್ಕಾಗಿ ಲೈಸೆನ್ಸ್ ಪದ್ಧತಿಯನ್ನು ಆರಂಭಿಸಿದರು. ಕಲ್ಕತ್ತಾ ಮುಂಬೈ, ಮದ್ರಾಸ್‌ಗಳಲ್ಲಿ ಹೈಕೋರ್ಟುಗಳೂ, ವಿಶ್ವವಿದ್ಯಾಲಯಗಳೂ, ಸ್ಥಾಪಿಸಲ್ಪಟ್ಟವು. ಲಾರ್ಡ್‌ಮೆಕಾಲೆ ಬರೆದ ಕ್ರಿಮಿನಲ್ ಪ್ರೊಸೀಜರ್ ಕೋಡು ಆಚರಣೆಯಲ್ಲಿ ಬಂದಿತು. ಕೌನ್ಸಿಲ್ ಆಕ್ಟ್ ಕಾಯಿದೆಯಂತೆ ಗವ್ಹರ್ನರರ ಸಹಾಯಕ್ಕೆ ಶಾಸನ ಮಂಡಲಗಳೂ, ಗ.ಜನರಲ್ಲನ ಸಹಾಯಕ್ಕೆ ವರಿಷ್ಠ ಶಾಸನ ಮಂಡಲಗಳೂ, ನಿರ್ಮಿಸಲ್ಪಟ್ಟವು. ರೈತರ ಲಾವಣಿ ನಿರ್ಧರಿಸಲ್ಪಟ್ಟಿತು. ಹೀಗೆ ಅನೇಕ ಬದಲಾವಣೆಗಳು ಮಾಡಲ್ಪಟ್ಟವು.

(೧೯) ಬ್ರಹ್ಮ ಸಮಾಜದಲ್ಲಿ ಹಿಂದೂಧರ್ಮದ ತತ್ವಜ್ಞಾನ, ಇಸ್ಲಾಂ ಧರ್ಮದ ಏಕೇಶ್ವರೀವಾದ, ಕ್ರಿಸ್ತೀ ಧರ್ಮನೀತಿ (ಅಸ್ಪೃಶ್ಯತಾ ನಿವಾರಣ, ಸ್ತ್ರೀಪುರುಷ ಸಮಾನತ್ವ)ಗಳು ಅಳವಡಿಸಿಕೊಳ್ಳಲ್ಪಟ್ಟಿದ್ದುವು. ಆದ್ದರಿಂದ ಇದಕ್ಕೆ ಹಿಂದು–ಮುಸಲ್ಮಾನ ಕ್ರಿಸ್ತೀ ಧರ್ಮಗಳ ಸಂಗಮ ಸ್ಥಾನವಾಗಿತ್ತೆನ್ನಬಹುದು.

(೨೦) ಹಿಂದೂ ಧರ್ಮದಲ್ಲಿ ರೂಢಿಯಲ್ಲಿದ್ದ ಕೀಳು ಮೇಲು ಜಾತಿ ಭಾವನೆ, ಹಲವಾರು ದೇವರುಗಳ ಪೂಜೆಯಿಂದ ಜನಬೇಸತ್ತಿತ್ತು. ಆದ್ದರಿಂದಲೇ ರಾಜಾರಾಮ್ ಮೋಹನರಾಯರಿಂದ "ಬ್ರಹ್ಮ ಸಮಾಜವೂ",

ಮಹದೇವ ಗೋವಿಂದ ರಾನಡೆ, ಡಾ. ರಾಮಕೃಷ್ಣ ಇಂದೂರ್‌ಕರ ಮೊದ ಲಾದವರಿಂದ "ಪ್ರಾರ್ಥನಾ ಸಮಾಜವೂ" ಮತ್ತು ದಯಾನಂದ ಸರಸ್ವತಿ ಯವರಿಂದ "ಆರ್ಯಸಮಾಜವೂ" ಸ್ಥಾಪಿಸಲ್ಪಟ್ಟವು.

**ಕೆಳಗಿನ ಐತಿಹಾಸಿಕ ಪುರುಷರ ಬಗ್ಗೆ ಟಿಪ್ಪಣಿ ಬರೆಯಿರಿ.**

(೧) ಸರ್ ಚಾರ್ಲಸ್ ಮೆಟಕಾಫ್ (೨) ಲಾರ್ಡ ಡಾಲ್ ಹೌಸಿ (೩) ದಯಾನಂದ ಸರಸ್ವತಿ (೪) ಮೇಡಮ್ ಬ್ಲಾವ್ಹಿಟಸ್ಕೀ (೫) ಆನಿಬೆಸೆಂಟ್ (೬) ರಾಮಕೃಷ್ಣ ಪರಮಹಂಸ (೭) ಸ್ವಾಮಿ ವಿವೇಕಾನಂದ (೮) ಲಕ್ಷ್ಮೀ ಬಾಯಿ ಝಾಂಸಿ (೯) ನ್ಯಾಯಮೂರ್ತಿ ರಾನಡೆ (೧೦) ಪ್ರೊ ಕರ್ವೆ (೧೧) ಲೋಕಮಾನ್ಯತಿಳಕ (೧೨) ಪಂ. ಈಶ್ವರಚಂದ್ರ ವಿದ್ಯಾಸಾಗರ (೧೩) ಮಹಾತ್ಮಾಜ್ಯೋತೀರಾವ್ ಫುಲೆ (೧೪) ನಾಮದಾರ್ ಗೋಖಲೆ.

೧. **ಸರ್ ಚಾರ್ಲಸ್ ಮೆಟಕಾಫ್:**—ಇವರು ಲಾರ್ಡ ಬೆಂಟಿಂ ಕನ ರಾಜೀನಾಮೆಯ ತರುವಾಯ ಕ್ರಿ. ಶ. ೧೮೩೫–೧೮೩೬ ರವರೆಗೆ ಗೌವರ್ನರ್ ಜನರಲ್ಲರಾಗಿದ್ದರು. ಬ್ರಿಟಿಷ್ ರಾಜ್ಯಸತ್ತೆ ಉಳಿಯ ಬೇಕಾ ದರೆ, ತಟಸ್ಥ ಧೋರಣದಿಂದ ಉಪಯೋಗವಿಲ್ಲ. ಜಗತ್ತಿನಲ್ಲಿ ಏಳುತ್ತಿರುವ ಬಿರುಗಾಳಿಯಲ್ಲಿ ಉಳಿಯಬೇಕಾದರೆ ತಾವು ಪ್ರಬಲರಾಗಬೇಕೆಂಬುದನ್ನು ಸ್ಪಷ್ಟಪಡಿಸಿದರು. ಕ್ರಿ. ಶ. ೧೮೦೯ ರಲ್ಲಿ ರಣಜಿತ್‌ಸಿಂಗನೊಡನೆ ಆದ ಒಪ್ಪಂದದಲ್ಲಿ ಮೆಟಕಾಫರು ಬಹುಪ್ರಮುಖ ಪಾತ್ರವಹಿಸಿದ್ದರು. ಇವರು ತಮ್ಮ ಒಂದು ವರ್ಷದ ಆಡಳಿತೆಯಲ್ಲಿ ಮುದ್ರಣ ಹಾಗು ವೃತ್ತಪತ್ರಿಕೆಗಳ ಮೇಲಿನ ನಿರ್ಬಂಧವನ್ನು ತೆಗೆದು ಹಾಕಿದರು. ಇದರಿಂದ ಆಡಳಿತೆಯ ಕೊಳೆಯನ್ನು ಟೀಕಿಸಲು ಸ್ವಾತಂತ್ರ್ಯದೊರೆತಂತಾಯ್ತು.

೨. **ಲಾರ್ಡ ಡಾಲ್ ಹೌಸಿ:**—(ಕ್ರಿ. ಶ. ೧೮೪೮–೧೮೫೬) ಲಾರ್ಡ ಎಲಿನ್ ಬರೋನ ನಂತರ ಗವ್ಹರ್ನರಜನರಲ್ಲನಾಗಿಬಂದ ಲಾರ್ಡ ಡಾಲ್ ಹೌಸಿಯು ದಕ್ಷನೂ, ಸತತೋದ್ಯೋಗಿಯೂ, ಮಹತ್ವಾಕಾಂಕ್ಷೆ ಉಳ್ಳವನೂ, ಸಿಟ್ಟಿನ ಸ್ವಭಾವದವನೂ ಆಗಿದ್ದನು. ಇವನಾದರೂ ತನ್ನ ಕರ್ತವ್ಯ ದಕ್ಷತೆಯಿಂದ ಉಚ್ಚ ದರ್ಜೆಗೇರುತ್ತ ಕೇವಲ ೩೫ ವರ್ಷ ದವನಿರುವಾಗಲೆ ಗ. ಜ. ನ. ಪದವಿ ದೊರಕಿಸಿಕೊಂಡನು. ಈ ವರೆಗೂ ಗ. ಜ. ನ ಜಾಗೆಗೆ ಬಂದವರಲ್ಲಿ ಇವನೇ ಎಲ್ಲರಿಗಿಂತಲೂ ಚಿಕ್ಕವನು. ಇವನು ಪ್ರಕೃತಿಯಿಂದ ಅಶಕ್ತನಿದ್ದರೂ, ಆಡಳಿತೆನಡೆಸುವಲ್ಲಿ ಮಹಾ

ದಕ್ಷನಾಗಿದ್ದನು. ತನ್ನ ಮನಸ್ಸಿಗೆ ಬಂದದ್ದನ್ನೇ ಸಾಧಿಸಿ, ವಿರೋಧಿಗಳ ಹುಟ್ಟಡಗಿಸುವವನು. ಅಂತೆಯೇ ಇವನು ದತ್ತಕಗಳನ್ನು ರದ್ದು ಗೊಳಿಸಿ, ರಾಜ್ಯದಲ್ಲಿ ಅವ್ಯವಸ್ಥೆಯಿದೆಯೆಂದು, ವಾರಸದಾರರು ಇಲ್ಲವೆಂದು ಹೀಗೆ ಬೇರೆ ಬೇರೆ ಕಾರಣಗಳನ್ನು ತೋರಿಸಿ ಅನೇಕ ಸಂಸ್ಥಾನ ಮತ್ತು ಜಹಗೀರಿ ಗಳನ್ನು ವಶಪಡಿಸಿಕೊಂಡು ಬ್ರಿಟಿಷ್ ಸಾಮ್ರಾಜ್ಯವನ್ನು ಬೆಳೆಸಿದನು. ಇವನ ಕಾಲದಲ್ಲಿಯೇ ಶೀಖರ ೨ ನೇ ಯುದ್ಧ ಮತ್ತು ಬ್ರಹ್ಮದೇಶದ ೨ ನೇ ಯುದ್ಧ ಗಳಾದುವು. ಇವನು ರೈಲ್ವೆ, ಟೆಲಿಗ್ರಾಫ್, ಪೊಸ್ಟ್ ಮುಂತಾದ ಲೋಕೋಪ ಯೋಗಿ ಕಾರ್ಯಗಳನ್ನು ಆಡಳಿತೆಯಲ್ಲಿ ಅನೇಕ ಸುಧಾರಣೆಗಳನ್ನು ಕೈಕೊಂಡನು. ಇವನು ದತ್ತಕ ಪ್ರಕರಣಗಳಲ್ಲಿ ಕೈ ಹಾಕಿದ್ದರಿಂದ ಅನೇಕ ಅರಸರ ಹಾಗೂ ಶ್ರೀಮಂತರ ವೈರ ಕಟ್ಟಿಕೊಂಡನು. ಆದರೆ ಇವನನ್ನು ಪ್ರತಿಭಟಿಸುವ ಎದೆಗಾರಿಕೆ ಯಾರಿಗೂ ಇರಲಿಲ್ಲ ವಾದ್ದರಿಂದ ಒಳಗೊಳಗೇ ಕುದಿಯುತ್ತಿದ್ದರು. ಇವನು ಕ್ರಿ. ಶ. ೧೮೫೬ ರಲ್ಲಿ ಇಂಗ್ಲೆಂಡಿಗೆ ಹಿಂತಿರುಗಿದರು.

೩. **ದಯಾನಂದ ಸರಸ್ವತಿ :—** ಇವರು ಮೊರವೀ ಸಂಸ್ಥಾನ ದಲ್ಲಿ ಕ್ರಿ. ಶ. ೧೮೨೪ ರಲ್ಲಿ ಶೈವಬ್ರಾಹ್ಮಣ ಕುಲದಲ್ಲಿ ಹುಟ್ಟಿದರು. ಇವರಿಗೆ ಚಿಕ್ಕಂದಿನಿಂದಲೂ ವಿಗ್ರಹಾರಾಧನೆಯ ಬಗ್ಗೆ ನಂಬಿಗೆ ಇರಲಿಲ್ಲ. ತಂದೆ ತಾಯಿಗಳು ಲಗ್ನ ಮಾಡುವ ಪ್ರಯತ್ನದಲ್ಲಿದ್ದಾಗ ಓಡಿಹೋಗಿ ಪೂರ್ಣಾನಂದ ಎಂಬುವದರಿಂದ ಸನ್ಯಾಸಿದೀಕ್ಷೆ ತೆಗೆದುಕೊಂಡು ದಯಾನಂದ ಸರಸ್ವತಿ ಎಂಬ ನಾಮ ಧಾರಣ ಮಾಡಿದರು. ಮಥುರೆಯ ಸ್ವಾಮಿ ವಿರಜಾನಂದ ರಿಂದ ವೈದಿಕ ಧರ್ಮ ಮತ್ತು ವೇದಾಂತವನ್ನು ಕಲಿತು ಅದರ ಪ್ರಚಾರ ಕ್ಕಾಗಿ ಹೊರಬಿದ್ದರು. ಇವರು ಕ್ರಿ. ಶ. ೧೮೭೫ ರಲ್ಲಿ ಮುಂಬಯಿಯಲ್ಲಿ ಆರ್ಯ ಸಮಾಜವನ್ನು ಸ್ಥಾಪಿಸಿದರು. "**ಸತ್ಯಾರ್ಥ ಪ್ರಕಾಶ**" ಎಂಬ ಗ್ರಂಥವನ್ನು ಇವರೇ ಬರೆದರು. ದಯಾನಂದರು ತಮ್ಮ ವಾಕ್ಪಟುತ್ವ, ಬುದ್ಧಿಬಲ, ಸತತೋದ್ಯೋಗದಿಂದ ಕೇವಲ ೫ ವರ್ಷಗಳಲ್ಲಿ ಭಾರತದ ತುಂಬಾ ಈ ವೈದಿಕ ಧರ್ಮದ ತತ್ವಜ್ಞಾನವನ್ನು ಹರಡಿದರು. ಇವರು ಕ್ರಿ. ಶ. ೧೮೮೩ ರಲ್ಲಿ ಜೋಧಪೂರದಲ್ಲಿ ವಿಷಪ್ರಯೋಗದಿಂದ ಮರಣ ಹೊಂದಿದರು.

೪. **ಮೇಡಮ್ ಬ್ಲಾವಿಟಸ್ಕೀ :** ಇವರು ಈಶ್ವರ ವಿಷಯ ದಲ್ಲಿ ಹೆಚ್ಚು ಜ್ಞಾನಾರ್ಜನೆಗಾಗಿ ಕ್ರಿ. ಶ. ೧೮೭೫ ರಲ್ಲಿ ನ್ಯೂಯಾರ್ಕಿನಲ್ಲಿ "ಥಿಯಾಸಫಿಕಲ್ ಸೊಸೈಟಿ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಘನೋದ್ದೇಶಕ್ಕೆ ಅನೇಕ ಶ್ರೇಷ್ಠವಿದ್ವನ್ಮಣಿಗಳ ಸಹಕಾರ ದೊರೆಯಿತು. ಅಂತೆಯೇ ಕ್ರಿ. ಶ. ೧೮೮೨ ರಲ್ಲಿ ಮದ್ರಾಸಿನ ಅಡ್ಯಾರ್ ಎಂಬಲ್ಲಿ ಕರ್ನಲ್ ಆಲ್ಕಾಟ್ ಎಂಬುವರು ಜಾಗೆಯನ್ನು ಕೊಂಡುಕೊಂಡು ಪ್ರಚಾರಕಾರ್ಯ ಕೈಕೊಂಡರು. ಈ ಸಂಸ್ಥೆಯಲ್ಲಿ ಲೇಡ್‌ಬೀಟರ್, ಅನಿಬೆಸೆಂಟ್ ಮೊದ ಲಾದವರಿದ್ದರು.

೫. **ಅನಿಬೆಸೆಂಟ್** :- - ಈ ಇಂಗ್ಲೀಷ ಮಹಿಳೆಯು ಕ್ರಿ. ಶ. ೧೮೪೭ ರಲ್ಲಿ ಹುಟ್ಟಿದಳು. ಕ್ರಿ ಶ. ೧೮೬೭ ರಲ್ಲಿ ರೆಫರ್ಡ್‌ಬೆಸೆಂಟ್ ಎಂಬು ವವರೊಡನೆ ಲಗ್ನವಾಗಿದ್ದಳು. ಒಮ್ಮೆ ತನ್ನ ಇಬ್ಬರು ಮಕ್ಕಳು ರೋಗ ಗ್ರಸ್ತರಾಗಲು ದೇವರಮೇಲಿನ ವಿಶ್ವಾಸ ಹಾರಿತು. ಗಂಡನಿಂದ ದೂರಿರ ಹತ್ತಿದಳು. ಈಕೆಯ ಲಕ್ಷ ಅಧ್ಯಾಯನ ಮತ್ತು ಲೇಖನದಕಡೆ ಹೊರಳಿತು. ಕ್ರಿ. ಶ. ೧೮೮೯ ರಲ್ಲಿ ಮೆಡಮ್ ಬ್ಲಾವಿಟಸ್ಕಿಯ ಸಂಬಂಧ ಬಂದು ತಾನೂ "ಥಿಯಾಸಫಿಸ್ಟಳಾದಳು". ಕ್ರಿ. ಶ. ೧೮೯೩ ರಲ್ಲಿ ಹಿಂದುಸ್ತಾನದಲ್ಲಿ ಸಂಚಾರ ಕೈಕೊಂಡು ಹಿಂದುಧರ್ಮ, ತತ್ವಜ್ಞಾನ, ಗೀತಾ, ರಾಮಾಯಣ, ಉಪನಿಷತ್ತುಗಳ ಬಗ್ಗೆ ವ್ಯಾಖ್ಯಾನ ಮಾಡಿದಳು. ಬನಾರಸಿನಲ್ಲಿ ಸೆಂಟ್ರಲ್ ಹಿಂದೂ ಕಾಲೇಜ್ ಸ್ಥಾಪಿಸಿ, ಅದರಿಂದ ಹಿಂದೂಧರ್ಮ ಶಿಕ್ಷಣಕ್ಕೆ ಅನು ಕೂಲತೆ ಮಾಡಿಕೊಟ್ಟಳು. ಕ್ರಿ. ಶ. ೧೯೦೭ ರಲ್ಲಿ ಥಿಯಾಸಫಿಕಲ್ ಸೊಸಾ ಯಟಿಯ ಅಧ್ಯಕ್ಷಳಾದಳು. ಕ್ರಿ. ಶ. ೧೯೦೮ ರಲ್ಲಿ ಪೃಥ್ವಿ ಪರ್ಯಟನ ಕೈಕೊಂಡಳು. ಕ್ರಿ. ಶ. ೧೯೧೩ ರಲ್ಲಿ ಹಿಂದೀ ರಾಜಕಾರಣದಲ್ಲಿ ಪ್ರವೇಶಿಸಿ, ಇಂಗ್ಲೆಂಡಿಗೆ ಹೋಗಿ ಅಲ್ಲಿ ಹಿಂದೀಯರ ಸ್ವಾತಂತ್ರ್ಯದ ಬಗ್ಗೆ ಪ್ರಚಾರ ಮಾಡಿದಳು. ಕ್ರಿ. ಶ. ೧೯೧೪ ರಲ್ಲಿ ಹಿಂದುಸ್ತಾನಕ್ಕೆ ಬಂದು ಸ್ವಾತಂತ್ರ್ಯ ಸಂಗ್ರಾಮ ಕೈಕೊಂಡಳು. ಕ್ರಿ. ಶ. ೧೯೧೬ ರಲ್ಲಿ ಮದ್ರಾಸಿನ "ಹೋಮ ರೂಲ್" ಚಳುವಳಿ ಈಕೆಯಿಂದಲೇ ಆರಂಭವಾಯಿತು. ಹಿಂದು–ಮುಸ್ಲಿಂ ಐಕ್ಯದಬಗ್ಗೆ ಈಕೆ ವಹಿಸಿದಪಾತ್ರ ಅಷ್ಟಿಷ್ಟಲ್ಲ. ಕಿ. ಶ. ೧೯೧೭ ರಲ್ಲಿ ಈಕೆ "ರಾಷ್ಟ್ರಸಭೆಯ" ಅಧ್ಯಕ್ಷಸ್ಥಾನ ವಹಿಸಿದಳು. ಅಡ್ಯಾರಿನ ಆಶ್ರಮದಲ್ಲಿ ಈಕೆಯ ದೇಹಾವಸಾನಾವಾಯಿತು. ಈಕೆಯ ಮೃತದೇಹಕ್ಕೆ ಅಗ್ನಿ ಸಂಸ್ಕಾರ ಕೊಡಲಾಯಿತು.

೬. **ರಾಮಕೃಷ್ಣ ಪರಮಹಂಸರು :—** ಇವರ ಮೊದಲಿನ ಹೆಸರು ಗದಾಧರ ಚಟ್ಟೋಪಾಧ್ಯಾಯ. ಚಿಕ್ಕಂದಿನಿಂದಲೂ ಧರ್ಮ ವಿಚಾರದಲ್ಲಿ ಆಸಕ್ತಿ ಹೆಚ್ಚಾಗಿದ್ದಿತು. ಇವರು ಕಾಳೀದೇವಿಯ ಸದ್ಭಕ್ತರು. ಅಸ್ಪೃಶ್ಯತೆಯಲ್ಲಿ ಇವರಿಗೆ ವಿಶ್ವಾಸವಿರಲಿಲ್ಲ. ಇಷ್ಟೇ ಅಲ್ಲ ತಾವು ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದರೂ, ತಾವು ಅಸ್ಪೃಶ್ಯರೆಂದು ಹೇಳಿಕೊಳ್ಳುತ್ತಲಿದ್ದರು. ಮುಂದೆ ಇವರು ತೋತಾಪುರಿ ಸನ್ಯಾಸಿಯವರಿಂದ ಸನ್ಯಾಸವನ್ನು ಸ್ವೀಕರಿಸಿ ರಾಮಕೃಷ್ಣ ಪರಮಹಂಸರೆಂಬ ನಾಮಧಾರಣ ಮಾಡಿದರು. ಇವರು ವೈದಿಕಧರ್ಮದ ಆಧ್ಯಾತ್ಮಜ್ಞಾನವನ್ನು ಜಗತ್ತಿಗೇ ಸಾರಿದರು. ಈಗ ಪ್ರಚಾರದಲ್ಲಿರುವ “ರಾಮಕೃಷ್ಣ ಮಿಶನ್” ಇವರ ಮರಣಾನಂತರ (೧೮೮೬) ಇವರ ತತ್ವಜ್ಞಾನ ಪ್ರಚಾರಾರ್ಥವಾಗಿ ಸ್ಥಾಪಿಸಲ್ಪಟ್ಟಿತು.

೭. **ಸ್ವಾಮಿ ವಿವೇಕಾನಂದ :—** ಇವರು ಕ್ರಿ. ಶ. ೧೮೬೩ ರಲ್ಲಿ ಬಂಗಾಲದಲ್ಲಿ ಜನ್ಮವೆತ್ತಿದರು. ಇವರ ಹೆಸರು ನರೇಂದ್ರನಾಥ ದತ್ತ. ಕಲ್ಕತ್ತೆಯ ಕಾಲೇಜಿನಿಂದ ಬಿ. ಎ. ಪದವಿ ದೊರಕಿಸಿಕೊಂಡು, ಭಾರತೀಯ ಮತ್ತು ಪಾಶ್ಚಾತ್ಯ ತತ್ವಜ್ಞಾನದ ಅಭ್ಯಾಸಮಾಡಿದರು. ಮೊದಲು ಇವರು ಬ್ರಹ್ಮ ಸಮಾಜದ ಕಡೆ ಎಳೆಯಲ್ಪಟ್ಟರು, ಆದರೆ ಬ್ರ. ಸಮಾಜದ ನಿರೀಶ್ವರೀ ವಾದ ಇವರಿಗೆ ಒಪ್ಪಿಗೆಯಾಗಲಿಲ್ಲ. ಮುಂದೆ ರಾಮಕೃಷ್ಣ ಪರಮಹಂಸರ ಪರಮ ಭಕ್ತರಾಗಿ ಸನ್ಯಾಸವನ್ನು ಸ್ವೀಕರಿಸಿದರು. “ರಾಮಕೃಷ್ಣ ಮಿಶನ್” ಇವರಿಂದಲೇ ಸ್ಥಾಪಿತವಾಯಿತು. ಕ್ರಿ. ಶ. ೧೮೯೩ ರಲ್ಲಿ ಚಿಕಾಗೋದಲ್ಲಿಯ “ಜಾಗತಿಕ ಧರ್ಮ” ಪರಿಷತ್ತಿನಲ್ಲಿ ಭಾರತೀಯ ವೇದಾಂತದ ಬಗ್ಗೆ ವ್ಯಾಖ್ಯಾನವನ್ನಿತ್ತು. ಅಮೇರಿಕನ್ನರನ್ನು ತಮ್ಮ ತತ್ವಜ್ಞಾನದ ಕಡೆ ಎಳೆದು ಕೊಂಡರು. ಅಮೇರಿಕೆಯಲ್ಲಿ “ರಾಜಯೋಗ” ಎಂಬ ಗ್ರಂಥ ಬರೆದರು. ೧೮೯೭ ರಲ್ಲಿ ಭಾರತಕ್ಕೆ ಮರಳಿ ರಾಮಕೃಷ್ಣ ಮಠವನ್ನು ಸ್ಥಾಪಿಸಿದರು. ಈ ಮಠ ಬಡ ಜನತೆಗೆ ಅನ್ನ, ವಸ್ತ್ರ, ಶಿಕ್ಷಣವನ್ನೀಯುವ ಕಾರ್ಯ ಕೈಕೊಂಡಿತು. ಇವರು ಕಷ್ಟಕಾರ್ಪಣ್ಯದಲ್ಲಿದ್ದ ದೀನ ಜನತೆಯ ಸೇವೆಯನ್ನು ಅವಿಶ್ರಾಂತವಾಗಿ ಕೈಕೊಂಡರು. ಸೇವೆ ಮತ್ತು ಧರ್ಮ ಐಕ್ಯವೇ ಇವರ ಸಂದೇಶವಾಗಿತ್ತು.

೮. **ಲಕ್ಷ್ಮೀಬಾಯಿ ಝಾಂಸಿ :—** ಈಕೆ ಝಾಂಸಿಯ ರಾಜ ಗಂಗಾಧರ ಪಂತನ ಪತ್ನಿ. ಪುತ್ರ ಸಂತಾನವಿಲ್ಲದ್ದರಿಂದ ದಾಮೋದರ ಪಂತ

ಎಂಬ ಬಾಲಕನನ್ನು ಗಂಗಾಧರ ಪಂತನು ತನ್ನ ಮರಣಸಮಯದಲ್ಲಿ ದತ್ತಕ ತೆಗೆದುಕೊಂಡಿದ್ದನು. ಆದರೆ ಡಾಲ್ ಹೌಸಿಯು ಈ ದತ್ತಕವನ್ನು ರದ್ದುಗೊಳಿಸಿ ರಾಜ್ಯವನ್ನು ವಶಪಡಿಸಿಕೊಂಡನು. ಲಕ್ಷ್ಮೀಬಾಯಿಯು ಈ ಸೇಡಿನ ಕಿಚ್ಚು ತೀರಿಸದೇ ಬಿಡಲಿಲ್ಲ. ಕ್ರಿ. ಶ. ೧೮೫೭ ಸಿಪಾಯಿ ದಂಗೆ ನಲ್ಲಿ ಈಕೆ ಪ್ರಮುಖ ಪಾತ್ರವಹಿಸಿ, ಯುದ್ಧದಲ್ಲಿ ರಣಚಂಡಿಯಂತೆ ಇಂಗ್ಲೀಷರ ಚೆಂಡಾಡಿದಳು. ಆದರೆ ಕೊನೆಗೆ ಇಂಗ್ಲೀಷರಿಗೇ ಜಯವಾಯಿತು. ಈ ವೀರ ರಮಣಿಯು ಕಾದುತ್ತ ಕ್ರಿ. ಶ. ೧೮೫೮ ರಲ್ಲಿ ಮರಣ ಹೊಂದಿದಳು.

೯. **ನ್ಯಾ. ರಾನಡೆ:**—ಕ್ರಿ. ಶ. ೧೮೪೨ ರಲ್ಲಿ ಇವರ ಜನನವಾಯಿತು. ಇವರು ತಮ್ಮ ಮೇಧಾವಿತ್ವದಿಂದ ಉಚ್ಚ ದರ್ಜೆಯಲ್ಲಿ ಪರೀಕ್ಷೆಯಲ್ಲಿ ಉತ್ತೀರ್ಣರಾಗುತ್ತ ಎಂ. ಎ. ಎಲ್. ಎಲ್. ಬಿ. ಪಾಸಾಗಿ ವಕೀಲವೃತ್ತಿಯನ್ನು ಕೈಕೊಂಡರು. ಮುಂದೆ ಇವರು ನ್ಯಾಯಾಧೀಶರಾದರು. ಇವರು ಕೈಕೊಂಡ ಸಮಾಜಸೇವೆ ಅಘಾದವಾದುದು. ಇವರು ಮುಂಬಯಿಯಲ್ಲಿ ಸ್ಥಾಪಿತವಾದ "ಪ್ರರ್ಥನಾ ಸಮಾಜದ" ಪ್ರಚೋದಕರಾಗಿದ್ದರು.

೧೦. **ಪ್ರೊ. ಕರ್ವೆ** :— ಇವರು ಕ್ರಿ. ಶ. ೧೮೫೮ ರಲ್ಲಿ ಕೊಂಕಣ ದಲ್ಲಿ ಜನ್ಮವಾದರು. ಪದವೀ ಧರರಾದನಂತರ ಫರ್ಗುಸನ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು. ಕ್ರಿ. ಶ. ೧೮೯೧ ರಲ್ಲಿ ಇವರು ವಿಧುರರಾಗಲು ಓರ್ವ ವಿಧವೆಯೊಡನೆ ವಿವಾಹವಾಗಿ ವಿಧವಾ ವಿವಾಹಕ್ಕೆ ಪ್ರೋತ್ಸಾಹನವನ್ನಿತ್ತರು. ಕ್ರಿ. ಶ. ೧೮೯೯ ರಲ್ಲಿ ಬಾಲಿಕಾಶ್ರಮವನ್ನು ಸ್ಥಾಪಿಸಿ ವಿಧವೆಯರ ಕಲ್ಯಾಣಮಾಡಿದರು. ೧೯೦೭ರಲ್ಲಿ ಹಿಂಗಣದಲ್ಲಿ ಮಹಿಲಾ ವಿದ್ಯಾಲಯ ಸ್ಥಾಪಿಸಿದರು. ಸ್ತ್ರೀ ಸುಧಾರಣೆಯ ಬಗ್ಗೆ ಇವರಿಗಿದ್ದ ಕಳಕಳಿ ಅದ್ಭುತವಾದುದು. ಅಂತೆಯೇ ವಿಠ್ಠಲದಾಸ್ ಠಾಕರಸಿ ಎಂಬುವರಿಂದ ದೊಡ್ಡ ದಾನಮಾಡಿಸಿ ಎರಂಡಣೆಯಲ್ಲಿ ಕ್ರಿ. ಶ. ೧೯೧೬ ರಲ್ಲಿ ಅಖಿಲ ಭಾರತೀಯ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು.

೧೧. **ಲೋಕಮಾನ್ಯ ತಿಳಕ** :—ಕ್ರಿ. ಶ. ೧೮೫೬ರಲ್ಲಿ ಚಿತ್ಪಾವನ ವಂಶದಲ್ಲಿ ಜನ್ಮವೆತ್ತಿದ ಇವರ ಹೆಸರು ಬಾಳಾಪಂತ. ಇವರ ತಂದೆ ಗಂಗಾಧರ ಪಂತರು ದೊಡ್ಡ ವಿದ್ವಾಂಸರು. ಲೊ. ತಿಳಕರಿಗೆ ಮನೆಯಲ್ಲಿಯೇ ಸಂಸ್ಕೃತ, ಗಣಿತ ಶಾಸ್ತ್ರದ ಅಭ್ಯಾಸವಾಯಿತು. ೧೮೭೨ರಲ್ಲಿ ಮ್ಯಾಟ್ರಿಕ್

ಪಾಸಾಗಿ ಡೆಕ್ಕನ್ ಕಾಲೇಜ್ ಸೇರಿದರು. ೧೮೭೬ರಲ್ಲಿ ಬಿ. ಎ., ೧೮೭೯ರಲ್ಲಿ ಎಲ್. ಎಲ್. ಬಿ. ಪದವಿಗಳನ್ನು ದೊರಕಿಸಿಕೊಂಡರು. ಇವರು ಸಮಾಜ ಸೇವೆಗಾಗಿ "ಕೇಸರೀ", "ಮರಾಠಾ" ಪತ್ರಿಕೆಗಳನ್ನೂ ಹೊರಡಿಸಿದರು. ನಿರ್ಭೀಡೆಯ ಸ್ವಭಾವದವರೂ, ಸ್ವಾತಂತ್ರ್ಯ ಪ್ರಿಯರೂ, ಆದ ಟಿಳಕರು ಒಮ್ಮೆ ಆಗಿನ ಸರಕಾರವನ್ನು ಟೀಕಿಸಿ ಸೆರೆಮನೆ ಕಂಡರು. ಹಿಂದೀಯರಿಗೆ ಯೋಗ್ಯ ಶಿಕ್ಷಣಕೊಡಲು ಡೆಕ್ಕನ ಎಜ್ಯುಕೇಶನ್ ಸೊಸ್ಯಾಟಿಯನ್ನು ಸ್ಥಾಪಿಸಿ ಇಂಗ್ಲೀಷ್ ಸ್ಕೂಲುಗಳನ್ನು ತೆರೆದರು. ಇದೇ ಸಂಸ್ಥೆಯೇ ಮುಂದೆ ಫರ್ಗ್ಯುಸನ್ ಕಾಲೇಜನ್ನು ಸ್ಥಾಪಿಸಿತು. ಉಗ್ರವಾದಿಗಳಾದ ಇವರು ಸ್ವಾತಂತ್ರ್ಯಕ್ಕಾಗಿ ಬಿಕ್ಕೆಬೇಡುವುದು ಸರಿಯಲ್ಲವೆಂಬ ಮತದವರಾಗಿದ್ದರು. ಇವರು ಮಂಡಾಲೆ ಸೆರೆಮನೆಯಲ್ಲಿದ್ದಾಗ **"ಗೀತಾರಹಸ್ಯ"**ವೆಂಬ ಗ್ರಂಥ ಬರೆದರು. ಹೋಮರೂಲ್ ಚಳುವಳಿಯಲ್ಲಿ ಭಾಗವಹಿಸಿ ಕ್ರಿ. ಶ. ೧೯೧೯ರಲ್ಲಿ ಹಿಂದೀ ಪ್ರತಿನಿಧಿಯಾಗಿ ಶಿಷ್ಯಮಂಡಲದ ಜೊತೆಗೆ ಇಂಗ್ಲೆಂಡಿಗೆ ಹೋಗಿ ಬಂದರು. ೧೯೨೦ ಅಗಸ್ಟ ೧ನೇ ದಿನ ಟಿಳಕರು ಕಾಲವಾದರು.

೧೨. **ಪಂ. ಈಶ್ವರಚಂದ್ರ ವಿದ್ಯಾಸಾಗರ:**—ಸ್ತ್ರೀ ಉನ್ನತಿಗಾಗಿ ಕಳಕಳಿಯಿಂದ ದುಡಿದವರಲ್ಲಿ ಇವರೂ ಒಬ್ಬರು. ಬಂಗಾಲಿಗಳಾದ ಇವರು ಅಲ್ಲಿಯೇ ಬಾಲಿಕಾ ಶಾಲೆಗಳನ್ನು ತೆರೆದು ಸ್ತ್ರೀಯರು ಶಿಕ್ಷಣಕ್ಷೇತ್ರದಲ್ಲಿ ಮುಂದುವರಿಯುವಂತೆ ಮಾಡಿದರು. ಬಾಲವಿಧವೆಯರಿಗೆ ಶಿಕ್ಷಣಕೊಟ್ಟು, ಅವರು ತಮ್ಮ ಕಾಲದಮೇಲೆ ನಿಂತು ಜೀವಿಸಲು ಅನುಕೂಲಮಾಡಿಕೊಟ್ಟರು. ವಿಧವಾ ವಿವಾಹ ಪ್ರೋತ್ಸಾಹನದ ಬಗ್ಗೆ ಪುಸ್ತಕ ಬರೆದು ಜನಮತವನ್ನು ಸಿದ್ಧಗೊಳಿಸಿದರು. ಮುಂದೆ ಡಾಲ್‌ಹೌಸಿಯು ವಿಧವಾ ವಿವಾಹ ಕಾಯದೆಯನ್ನು ಪಾಸು ಮಾಡಿದನು.

೧೩. **ಮಹತ್ಮಾ ಜ್ಯೋತಿರಾವ್ ಫುಲೆ:**— ಮಹಾರಾಷ್ಟ್ರದಲ್ಲಿ ಸ್ತ್ರೀಶಿಕ್ಷಣ ಮತ್ತು ಉನ್ನತಿಗಾಗಿ ಇವರು ಅವಿಶ್ರಾಂತವಾಗಿ ದುಡಿದರು. ಕ್ರಿ. ಶ. ೧೮೪೮ರಲ್ಲಿ ಪುಣೆಯಲ್ಲಿ ಬಾಲಿಕಾ ಶಾಲೆಯನ್ನು ಸ್ಥಾಪಿಸಿ ತಾವೂ ತಮ್ಮ ಪತ್ನಿಯೂ ಕೂಡಿ ದುಡಿದರು. ಇವರ ಕಾರ್ಯಕ್ಕೆ ಅನೇಕ ಸನಾತನಿಗಳ ವಿರೋಧ ಉಂಟಾಯ್ತು. ಆದರೂ ಹೆದರದೆ ಮುನ್ನಡೆದರು. ವಿಧವಾ ಆಶ್ರಮವನ್ನು ಸ್ಥಾಪಿಸಿ ವಿಧವೆಯರು ತಮ್ಮ ಕಾಲಮೇಲೆ ಉಪಜೀವನ ನಡೆಯಿಸಲು ದಕ್ಷರಾಗುವಂತೆ ಮಾಡಿದರು. ಇವರ ಪ್ರೋತ್ಸಾಹದಿಂದಲೇ

ಪಂಢರಪುರದ ಬಾಲಹತ್ಯಾ ಪ್ರತಿಬಂಧಕ ಗೃಹ ಸ್ಥಾಪಿತವಾಯಿತು. ದಲಿತರು, ಅಸ್ಪೃಶ್ಯರು, ಸ್ತ್ರೀಯರ ಸೇವೆಯಲ್ಲಿಯೇ ತಮ್ಮ ಜೀವನವನ್ನು ಸವೆಯಿಸಿ ಮಹಾತ್ಮರೆನಿಸಿಕೊಂಡರು.

೧೪. **ನಾಮದಾರ್ ಗೋಖಲೆ :**—ಗಣಿತ, ತತ್ವಜ್ಞಾನ, ಕಾಯಿದೆ ಶಾಸ್ತ್ರಗಳಲ್ಲಿ ಶ್ರೇಷ್ಠ ಪಂಡಿತರೆನಿಸಿದ ಗೋಪಾಲಕೃಷ್ಣ ಗೋಖಲೆಯವರು ರತ್ನಾಗಿರಿ ಜಿಲ್ಲೆಯ ಕಟ್ಲೂರ ಎಂಬಲ್ಲಿ ಕ್ರಿ. ಶ. ೧೮೬೬ ರಲ್ಲಿ ಜನಿಸಿದರು. ಅಗಾಧ ಮೇಧಾವಿಗಳಾದ ಇವರು ತಮ್ಮ ೧೮ನೇ ವಯಸ್ಸಿನಲ್ಲಿಯೇ (೧೮೮೪) ಎಲ್ಫಿನ್‌ಸ್ಟನ್ ಕಾಲೇಜಿನಿಂದ ಬಿ. ಎ. ಪದವಿ ದೊರಕಿಸಿದರು. ಇವರು "ನ್ಯೂ ಇಂಗ್ಲಿಷ್ ಸ್ಕೂಲಿ" ನಲ್ಲಿ ಶಿಕ್ಷಕರಾಗಿದ್ದರು. ಆಮೇಲೆ ಫರ್ಗುಸನ್ ಕಾಲೇಜಿನಲ್ಲಿ ಅಧ್ಯಾಪಕರಾದರು. ಗಣಿತದಲ್ಲಿ ಇವರ ಕೈ ಬಲು ಮೇಲು. ತಮ್ಮ ಉದ್ಯೋಗದ ನಡುವಿನ ವೇಳೆಯಲ್ಲಿ ಕಾಯಿದೆ ಅಭ್ಯಾಸ ಮಾಡಿ ಎಲ್. ಎಲ್. ಬಿ. ಪದವಿ ಪಡೆದರು. ಫರ್ಗುಸನ್ ಕಾಲೇಜಿನಲ್ಲಿ ಆಗರಕರರ ತರುವಾಯ ಇವರೇ ತತ್ವಶಾಸ್ತ್ರವನ್ನು ಹೇಳುತ್ತಿದ್ದರು. "ಸುಧಾರಕ" ಎಂಬ ಇಂಗ್ಲೀಷ, ಮರಾಠೀ ವಾರಪತ್ರಿಕೆಯೂ, "ಸಾರ್ವಜನಿಕ ಸಭೆ" ಎಂಬ ರಾಜಕೀಯ ಸಂಸ್ಥೆಯೂ ಇವರಿಂದ ಆರಂಭಿಸಲ್ಪಟ್ಟವು. ಇವರು ಕ್ರಿ. ಶ. ೧೮೮೯ ರಲ್ಲಿ ರಾಜಕೀಯ ರಂಗವನ್ನು ಪ್ರವೇಶಿಸಿ ಮುಂಬೈಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ "ಉಪ್ಪಿನಕರ ನಿಷೇಧ" ಗೊತ್ತುವಳಿ ತಂದು, ಅದನ್ನು ಸಮರ್ಥಿಸಿದರು. ಕ್ರಿ. ಶ. ೧೯೦೫ ರಲ್ಲಿ ತಮ್ಮ ೩೯ ನೇ ವಯಸ್ಸಿನಲ್ಲೇ ಕಾಶಿಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾದರು. ಮುಂದೆ ಮುಂಬೈ ಮತ್ತು ದಿಲ್ಲಿ ಶಾಸನ ಸಭೆಗಳ ಸಭಾಸದರಾದರು. ಇವರು ಸ್ಥಾಪಿಸಿದ "ಭಾರತ ಸೇವಕ ಸಂಘದ" ವತಿಯಿಂದ "ಜ್ಞಾನಪ್ರಕಾಶ", "ಹಿತವಾದ", "ಸರ್ವೆಂಟ್ ಆಫ್ ಇಂಡಿಯಾ" ಎಂಬ ಮರಾಠೀ, ಇಂಗ್ಲೀಷ್ ಪತ್ರಿಕೆಗಳು ಹೊರಟವು. ಇವರು ಕ್ರಿ ಶ. ೧೯೧೫ ರಲ್ಲಿ ಕಾಲವಾದರು.

೧೫. **ಪಂಡಿತ ರಮಾಬಾಯಿ :**— ಇವರು ಕ್ರಿ. ಶ. ೧೮೫೮ ರಲ್ಲಿ ಮಹಾರಾಷ್ಟ್ರದ ಒಂದು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದರು, ಇವರು ಸ್ತ್ರೀ ಉನ್ನತಿಯ ಸಾಧನೆಗೆ ಸ್ತ್ರೀ ಶಿಕ್ಷಣವೇ ಮೂಲವೆಂದು ಆರ್ಯ ಮಹಿಳಾ ಸಮಾಜದ ವತಿಯಿಂದ ಸ್ತ್ರೀಶಿಕ್ಷಣವನ್ನು ಆರಂಭಿಸಿದರು. ಈಕೆಯ ಈ

ಕಾರ್ಯಕ್ಕೆ ಸನಾತನಿಗಳಿಂದ ಪ್ರಬಲ ವಿರೋಧ ಉಂಟಾಯಿತು. ವಿದೇಶೀಸ್ತ್ರೀ ಜೀವನಕ್ರಮ ಅರಿಯಲು ಅಮೇರಿಕೆಗೆ ಹೋದಾಗ ಅಲ್ಲಿ ಕ್ರಿಸ್ತೀಧರ್ಮವನ್ನು ಅಂಗೀಕರಿಸಿವರು. ೧೮೮೯ ರಲ್ಲಿ ಹಿಂತಿರುಗಿ "ಶಾರದಾ ಸದನ" ಎಂಬ ಸಂಸ್ಥೆಯನ್ನು ಸ್ಥಾಪಿಸಿ ನಿರಾಶ್ರಿತ ಸ್ತ್ರೀಯರಿಗೆ ಶಿಕ್ಷಣ ಕೊಟ್ಟರು. ಮುಂದೆ ಈ ಸಂಸ್ಥೆಯು ಕೇಡೇಗಾವಿಗೆ ಬದಲಾಯಿಸಲ್ಪಟ್ಟಿತು. ಆಗ ಸಂಸ್ಥೆಯ ಹೆಸರನ್ನು ಬದಲಾಯಿಸಿ "ಮುಕ್ತಿ ಸದನ" ಎಂಬ ಹೆಸರನ್ನಿಟ್ಟರು. ಈಕೆಯು ಅನೇಕ ವಿಧವೆಯರನ್ನು ಕ್ರಿಸ್ತೀ ಧರ್ಮಕ್ಕೆ ಮತಾಂತರಿಸಿ ಲಗ್ನ ಮಾಡಿದರಿಂದ ಸನಾತನಿ ಹಿಂದೂಗಳ ಸಹಾಯ ನಿಂತುಹೋಯಿತು. ಆಗಿನಿಂದ ಈ ಸಂಸ್ಥೆಯು ಕ್ರಿಸ್ತೀಧರ್ಮಪ್ರಚಾರಕಾರ್ಯವನ್ನು ಕೈ[illegible]ದೆ

## ೫. ಕೊಟ್ಟ ಐತಿಹಾಸಿಕ ಸಂಗತಿಗಳು ತಪ್ಪೋ ಒಪ್ಪೋ ಎಂಬುದನ್ನು ಬರೆಯಿರಿ?

( ) [illegible]ವನು ಹಿಂದುಸ್ತಾನದ ಮೊದಲನೇ ಗವ್ಹರ್ನರ್ ಜನರಲ್ಲನು.

(೨) ಕಾರ್ನವಾಲೀಸನು ಸಹಾಯಕ ಸೈನ್ಯಪದ್ಧತಿಯನ್ನು ಜಾರಿಯಲ್ಲಿ ತಂದನು.

(೩) ಪ್ಲಾಸೀಕಾಳಗದ ಸೋಲಿಗೆ ಉಮೀಚಂದನೇ ಕಾರಣ.

(೪) ವಿಲಿಯಂ ಬೆಂಟಿಂಕನು ಪೆಂಡಾರಿಗಳನ್ನು ನಿರ್ಮೂಲ ಮಾಡಿದನು.

(೫) ಡಾಲ್ ಹೌಸಿಯು ಪೇಗೂಪ್ರಾಂತವನ್ನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಕೂಡಿಸಿದನು.

(೬) ರಾಣಿಯ ಜಾಹೀರನಾಮೆ ಡಾಲ್ ಹೌಸಿಯ ಕಾಲದಲ್ಲಿ ಮಾಡಲ್ಪಟ್ಟಿತು.

(೭) ಲಾರ್ಡ್ ಲಾರೆನ್ಸನು ಭೂತಾನ ಗುಡ್ಡಗಾಡು ಪ್ರದೇಶದ ಡ್ವಾರ್ಸ್ ಪ್ರಾಂತವನ್ನು ಒಪ್ಪಂದದಿಂದ ಪಡೆದುಕೊಂಡನು. ಇದಕ್ಕಾಗಿ ಭೂತಾನದವರಿಗೆ ಪ್ರತಿ ವರ್ಷ ೫ ಸಾವಿರ ಪೌಂಡು ಹಣ ಕೊಡಬೇಕಾಗುತ್ತಿತ್ತು.

(೮) ವಾಯ್‌ಸ್‌ರಾಯನಾದ ಲಾರ್ಡ್ ಲಾರೆನ್ಸನ ಆಳಿಕೆಯ ಕಾಲ ದಲ್ಲಿ (೧೮೬೬) ಹಿಂದುಸ್ತಾನದಲ್ಲಿ ಬರಗಾಲ ಉಂಟಾಗಿ ಅನೇಕರು ದುರ್ಮರಣಕ್ಕೆ ಈಡಾದರು.

(೯) ಲಾರ್ಡ್ ಮೇಯೋನು ಅಫ್‌ಘಾನಿಸ್ತಾನದ ಶೇರ್‌ಅಲ್ಲಿಯೊಡನೆ ಮಿತ್ರತ್ವದ ಒಡಂಬಡಿಕೆ ಮಾಡಿಕೊಂಡನು.

(೧೦) ಲಾರ್ಡ್ ನಾರ್ಥ್ ಬ್ರೂಕನ ಆಳಿಕೆಯಲ್ಲಿ ಬಂಗಾಲ, ಬಿಹಾರ ಗಳಲ್ಲಿ ಭಯಂಕರ ಬರಗಾಲ ಉಂಟಾಯಿತು.

**ಉತ್ತರ**:— ೧. ಅಲ್ಲ. ೨. ಅಲ್ಲ. ೩. ಹೌದು ೫. ಹೌದು. ೬. ಅಲ್ಲ. ೭. ಹೌದು. ೮. ಹೌದು. ೯. ಹೌದು. ೧೦. ಹೌದು.

## ಲಾರ್ಡ್ ರಿಪನ್ನನ ಸುಧಾರಣೆಗಳ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

ಕ್ರಿ. ಶ. ೧೮೮೦ ರಿಂದ ೧೮೮೪ ರವರೆಗೆ ಆಳಿಕೆ ನಡೆಯಿಸಿದ ೭ ನೇ ವಾಯ್‌ಸ್‌ರಾಯನಾದ ಲಾರ್ಡ್ ರಿಪ್ಪನ್ನನು ಶಾಂತಿಪ್ರಿಯ, ಉದಾರ ಮತವಾದಿ, ಆದ್ದರಿಂದ ಕೆಳಗಿನ ಅನೇಕ ಅನುಕೂಲತೆಗಳನ್ನು ಹಿಂದೀಯರಿಗೆ ಮಾಡಿಕೊಟ್ಟು ಜನಪ್ರಿಯನಾದನು.

೧. ವೃತ್ತಪತ್ರಗಳ ಮೇಲಿನ ನಿರ್ಬಂಧ ದೂರು ಮಾಡಿ, ಮುದ್ರಣ ಸ್ವಾತಂತ್ರ್ಯವನ್ನಿತ್ತನು. ೨. ಖಾಸಗೀ ಜನರು ಶಿಕ್ಷಣ ಸಂಸ್ಥೆಯನ್ನು ತೆರೆಯಲು ಅನುಮತಿ ಇತ್ತನು. ೩. ಯೂರೋಪಿಯನ್ ಅಪರಾಧಿಗಳನ್ನು ಜ್ಯೂರಿಯ ಮುಂದೆ ಹಿಂದೀ ನ್ಯಾಯಾಧೀಶರು ವಿಚಾರಣೆ ನಡೆಯಿಸಬಹು ದೆಂದು ಕಾಯಿದೆಮಾಡಿದನು. ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳನ್ನು ಸ್ಥಾಪಿಸಿ (ಮುನಿಸೀಪಾಲಿಟಿ, ಲೋಕಲ್ ಬೋರ್ಡ ಇತ್ಯಾದಿ) ಅವುಗಳ ಆಡಳಿತೆಗೆ ಚುನಾವಣೆ ನಡೆಯಿಸಿ, ಉಮೇದವಾರರನ್ನು ಆರಿಸಲು ಭಾರತೀಯರಿಗೆ ಸ್ವಾತಂತ್ರ್ಯವನ್ನಿತ್ತನು.

ಈ ಎಲ್ಲ ಸುಧಾರಣೆಗಳನ್ನು ಮಾಡಿ, ಲಾರ್ಡ್ ರಿಪ್ಪನ್ನನು ಜನಪ್ರಿಯ ನಾಗಿ ಕ್ರಿ. ಶ. ೧೮೮೪ ರಲ್ಲಿ ಇಂಗ್ಲಂಡಿಗೆ ಮರಳಿದನು.

## ಕೆಳಗೆ ಬಿಟ್ಟ ಜಾಗೆಯಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ.

(೧) ಕ್ರಿ. ಶ. ೧೮೮೭ ರಲ್ಲಿ ವಿಕ್ಟೋರಿಯಾ ರಾಣಿಯ ೫೦ ವರ್ಷ ಆಳಿಕೆಯ ಗೌರವಕ್ಕಾಗಿ "................" ವು ಭಾರತದಲ್ಲೆಲ್ಲಾ ಆಚರಿಸಲ್ಪಟ್ಟಿತು.

(೨) ಲಾರ್ಡ್ ಡಫ್ರಿನ್ನನು ................ ೩ ನೇ ಯುದ್ಧ ಮಾಡಿದನು.

(೩) ೬ ನೇ ವಾಯಿಸ್‌ರಾಯನಾದ ಲಾರ್ಡ್ ಲಿಟನ್ನನು ಶ್ರೇಷ್ಠ ............ ಯಾಗಿದ್ದನು.

(೪) ಲಾರ್ಡ್ ಲಿಟನ್ನನು ಒಂದು ಸಮಿತಿ ನೇಮಿಸಿ ............ ........ ಗಾಗಿ ೧೫ ಕೋಟಿ ರೂಪಾಯಿಗಳನ್ನು ಪ್ರತಿವರ್ಷವೂ ವೆಚ್ಚ ಮಾಡುವ ವ್ಯವಸ್ಥೆ ಮಾಡಿದನು.

(೫) ರಾಣಿಯ ಜಾಹಿರ ನಾಮೆ ಕ್ರಿ. ಶ. ........... ರಲ್ಲಿ ಮಾಡಲ್ಪ

(೬) ಕ್ರಿ. ಶ. ೧೮೯೨ ರ ಕೌನ್ಸಿಲ್ ಆಕ್ಟಿನಿಂದ ಪ್ರಾಂತಿಕ ಮತ್ತು ಕೇಂದ್ರ ಶಾಸನ ಮಂಡಲಗಳಿಗೆ ೧. ............... ೨. ............... ೩. ............ ೪. ............ ಮುಂತಾದುವುಗಳ ಪರವಾಗಿ ಪ್ರತಿನಿಧಿಗಳನ್ನು ಆರಿಸಿ ಕಳಿಸುವ ಹಕ್ಕು ದೊರೆಯಿತು.

(೭) ೧೦ ನೇ ವಾಯಿಸ್‌ರಾಯ ಲಾರ್ಡ್ ಎಲ್ಜಿನನ ಆಳಿಕೆಯಲ್ಲಿ ಮುಂಬೈಯಲ್ಲಿ ............ ಪಿಡುಗು ಹಬ್ಬಿದ್ದಿತು.

(೮) ಲಾರ್ಡ್ ಕರ್ಜನನು ............... ಪ್ರಾಂತವನ್ನು ರಚಿಸಿದನು.

(೯) ಲಾರ್ಡ್ ಕರ್ಜನನು ............... ಒತಕ್ಕಾಗಿ ಕೆಲ ಕಾಯಿದೆಗಳಲ್ಲಿ ತಿದ್ದುಪಡಿಮಾಡಿದನು.

(೧೦) ಲಾರ್ಡ್ ಕರ್ಜನನು ಬಂಗಾಲವನ್ನು ವಿಭಾಗಿಸಿದ್ದುದರ ವಿರುದ್ಧ ಕ್ರಿ ಶ. ೧೯೦೫ ರಲ್ಲಿ ಪ್ರಚಂಡ ................... ಚಳವಳಿ ಆರಂಭವಾಯಿತು.

**ಉತ್ತರ** :— ೧. ಸುವರ್ಣ ಮಹೋತ್ಸವ, ೨. ಬ್ರಹ್ಮದೇಶದ ಮೇಲೆ. ೩. ರಾಜಕಾರಣಿ. ೪. ಬರಗಾಲ ನಿವಾರಣೆ. ೫. ೧೮೫೭. ೬. ವ್ಯಾಪಾರಮಂಡಲ, ವಿಶ್ವವಿದ್ಯಾಲಯ, ಜಮೀನುದಾರರು, ಸ್ಥಾನಿಕ

ಸ್ವರಾಜ್ಯ ಸಂಸ್ಥೆಗಳು. ಪ್ಲೇಗಿನ. ೮. ವಾಯುವ್ಯ. ೯. ,ಕ್ಷಾಲಿ
ಗರ. ೧೦. ವಂಗಭಂಗ.

**ಕೆಳಗೆ ಕೊಟ್ಟವರಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.**

(೧) ಸುರೇಂದ್ರನಾಥ ಬ್ಯಾನರ್ಜಿ (೨) ದಾದಾಭಾಯಿ ವರೋಜಿ (೩) ಸರ್ ಆಲನ್ ಹೂಲ್ಯಮ್. (೪) ಸರ್ ಸಯ್ಯದ್ ಅಹಮದ್ ಖಾನ್. (೫) ಸರ್ ಜಮಶೇಟಜಿ ಟಾಟಾ. (೬) ಮಹತ್ಮಾ ಗಾಂಧಿ. (೭) ಲಾರ್ಡ್ ಆಯರ್ವಿನ್. (೮) ಲಾರ್ಡ್ ಲಿನ್ ಲಿಥ್ ಗೋ. (೯) ಲಾರ್ಡ್ ವಾವೆಲ್. (೧೦) ಬ್ಯಾ. ಜಿನ್ನಾ. (೧೧) ಸರದಾರ್ ವಲ್ಲಭ್ಭಾಯಿ ಪಟೇಲ್. (೧೨) ಪಂ. ಜವಾಹರ್‌ಲಾಲ್ ನೆಹರು. (೧೩) ಚ ರಾಜಗೋಪಾಲಾಚಾರಿ. (೧೪) ಡಾ. ರಾಜೇಂದ್ರಪ್ರಸಾದ್. (೧೫) ಡಾ. ಅಂಬೇಡ್‌ಕರ್. (೧೬) ಪಂ. ಮ. ಮೊ. ಮಾಲವೀಯ (೧೭) ಲಾರ್ಡ್ ಮೌಂಟ್‌ಬ್ಯಾಟನ್. (೧೮) ಡಾ. ರಾಧಾಕೃಷ್ಣನ್ (೧೯) ಅಬ್ದುಲ್ ಕಲಾಂ ಆಜಾದ್. (೨೦) ಸರ್. ಸಿ. ವಿ. ರಾಮನ್. (೨೧) ಸುಭಾಸ್‌ಚಂದ್ರ ಭೋಸ್. (೨೨) ಸರ್ ಎಂ. ವಿಶ್ವೇಶ್ವರಯ್ಯಾ. (೨೩) ಶ್ರೀಮತಿ ಸರೋಜಿನಿ ನಾಯ್ಡು. (೨೪) ಫಿರೋಜಶಹಾ ಮೆಹತಾ. (೨೫) ರವೀಂದ್ರನಾಥ್ ಟಾಗೂರ್. (೨೬) ಅರವಿಂದ ಘೋಷ್.

೧. **ಸುರೇಂದ್ರನಾಥ ಬ್ಯಾನರ್ಜಿ** :— ಲಾ. ಕರ್ಜನ್ನನ ಬಂಗಾಲ ವಿಭಜನೆಯನ್ನು ಪ್ರತಿಭಟಿಸಿ "ವಂಗಭಂಗ" ಚಳುವಳಿಯ ನೇತೃತ್ವ ವಹಿಸಿದ ವೀರಾಳುಗಳು ಇವರು. ಕ್ರಿ. ಶ. ೧೮೪೮ ರಲ್ಲಿ ಕಲ್ಕತ್ತೆಯಲ್ಲಿ ಹುಟ್ಟಿದರು. ಆಂಗ್ಲೋ ಇಂಡಿಯನ್ ಕಾಲೇಜಿನಿಂದ ಸ್ಕಾಲರ್‌ಸಿಪ್ ದೊರೆಕಿಸಿ, ಬಿ. ಎ. ಪಾಸಾದರು. ಇಂಗ್ಲೆಂಡಿನಲ್ಲಿ ಐ. ಸಿ. ಎಸ್. ಪಾಸಾಗಿ ಸಿಲ್ಹೆಟ್ ಜಿಲ್ಹೆಯ ಅಸಿಸ್ಟಂಟ್ ಕಲೆಕ್ಟರರಾಗಿದ್ದರು. ಆಗಿನ ಇಂಗ್ಲಿಷ್ ಸರಕಾರ ಇವರಮೇಲೆ ಸುಳ್ಳು ಆರೋಪ ಹೊರಿಸಿ, ಅನ್ಯಾಯವಾಗಿ ಇವರನ್ನು ಅಪರಾಧಿ ಎಂದು ನಿರ್ಣಯಿಸಿತು. ಸ್ವಾಭಿಮಾನಿಗಳೂ, ಮೇಧಾವಿಗಳೂ ಆದ ಬ್ಯಾನರ್ಜಿಯವರು ಸರಕಾರದ ದಬ್ಬಾಳಿಕೆಯನ್ನು ಪ್ರತಿಭಟಿಸ ಹತ್ತಿದರು. ಲಾ. ಲಿಟನ್ನನು ಹೇರಿದ ವೃತ್ತಪತ್ರಗಳ ಸ್ವಾತಂತ್ರ್ಯಾಪಹರಣ ಕಾಯಿದೆ, ಲಾ. ರಿಪನ್ನನ ಕಾಲದಲ್ಲಿ ದೂರವಾಗಲೂ, ಕ್ರಿ. ಶ. ೧೯೦೫ರಲ್ಲಿ ಲಾ. ಕರ್ಜನ್ನನು ಮಾಡಿದ ಬಂಗಾಲ ವಿಭಜನೆ, ಕ್ರಿ. ಶ. ೧೯೧೧ರಲ್ಲಿ

ಒಂದುಗೂಡಲೂ ಇವರು ಕಾರಣೀಭೂತರಾಗಿದ್ದರೆಂದರೆ ಅತಿಶಯೋಕ್ತಿಯೇನಲ್ಲ. ರಾಷ್ಟ್ರಾಭಿಮಾನಿಗಳಾದ ಇವರಿಗೆ ೨ ಸಾರೆ ಕಾಂಗ್ರೆಸ್ಸಿನ ಅಧ್ಯಕ್ಷಪದ ದೊರೆತಿತ್ತು. ಇವರು ವೃತ್ತಪತ್ರ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಅವಿಶ್ರಾಂತವಾಗಿ ದೇಶಸೇವೆ ಮಾಡಿ ೧೯೨೫ ರಲ್ಲಿ ಕಾಲವಾದರು.

೨. **ದಾದಾಭಾಯಿ ನವರೋಜಿ**:—ಹಿಂದೀಯರಿಗೆ "ಸ್ವಾತಂತ್ರ್ಯ ಸಂಗ್ರಾಮದ" ಕಹಳೆಯನ್ನೂದಿದವರಲ್ಲಿ ಇವರು ಮೊದಲಿಗರು. ಕ್ರಿ. ಶ. ೧೮೨೫ ರಲ್ಲಿ ಬಡ ಪಾರಶೀ ಕುಟುಂಬದಲ್ಲಿ ಜನಿಸಿದರು. ಚಿಕ್ಕಂದಿನಲ್ಲೇ ತಂದೆ ತೀರಿಕೊಂಡಿದ್ದರಿಂದ ಸ್ವಕಷ್ಟ ಮತ್ತು ತಾಯಿಯ ನೆರವಿನಿಂದ ಶಿಕ್ಷಣ ಪಡೆದರು. ಅಂತೆಯೇ ಇವರಲ್ಲಿ ಮಾತೃಭೂಮಿ ಮತ್ತು ಹಡದಮ್ಮನ ಮೇಲೆ ಅಘಾದ ಪ್ರೇಮವಿತ್ತು. ಪದವೀಧರರಾಗಿ ಕೆಲ ವರುಷ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಮುಂದೆ ಇವರ ಮನಸ್ಸು ಸಾರ್ವಜನಿಕ ಸೇವೆಯ ಕಡೆಗೆ ಎಳೆಯಿತು. ಇವರು ಕಾಮಾ ಕಂಪನಿಯ ಕಾಯದೆ ಸಲ್ಲಾಗಾರರಾಗಿ ಇಂಗ್ಲೆಂಡಿಗೆ ತೆರಳಿದರು. ಅಲ್ಲಿ ಭಾರತೀಯರ ಸ್ಥಿತಿಗತಿಯಬಗ್ಗೆ ಇಂಗ್ಲೀಷ ಜನತೆಗೆ ಕಲ್ಪನೆ ಮಾಡಿಕೊಟ್ಟರು. ಇವರ ವಿದ್ವತ್ತನ್ನು ಮೆಚ್ಚಿ ಬ್ರಿಟಿಶ ಸರಕಾರ ಪಾರ್ಲಮೆಂಟಿನ ಸದಸ್ಯತ್ವವನ್ನಿತ್ತಿತು. ಈ ಮಾನ್ಯತೆಯನ್ನು ಪಡೆದವರಲ್ಲಿ ಮೊದಲನೇ ಭಾರತೀಯರಾದ ಇವರು ಅಲ್ಲಿಯೂ ಭಾರತೀಯರ ಏಳ್ಗೆಗೆ ಅವಿಶ್ರಾಂತವಾಗಿ ದುಡಿದು, ಮಾತೃಭೂಮಿಗೆ ಹಿಂತಿರುಗಿದರು. ಕ್ರಿ. ಶ. ೧೮೮೬ ರ ೨ ನೇ ಕಾಂ. ಅಧಿವೇಶನದ ಅಧ್ಯಕ್ಷಸ್ಥಾನ ಇವರಿಗೆ ದೊರೆಯಿತು. ಕಾಂಗ್ರೆಸ್ಸಿನಲ್ಲಿ ೭೦ ವರ್ಷ ದುಡಿದು ದೇಶ ಸೇವೆ ಮಾಡಿದರು.

೩. **ಸರ್ ಆಲನ್ ಹ್ಯೂಮ್** :— ನಿವೃತ್ತ ಇಂಗ್ಲಿಷ್ ಅಧಿಕಾರಿಗಳಾದ ಇವರು ಲಾರ್ಡ್ ಡಫ್ರಿನ ಕಾಲದಲ್ಲಿ "ಭಾರತೀಯ ಮುಖಂಡರು ವರ್ಷಕ್ಕೊಮ್ಮೆ ಒಟ್ಟು ಗೂಡಿ ಚರ್ಚಿಸಿ, ರಾಜಕೀಯ ಸುಧಾರಣೆಗಳ ಬಗ್ಗೆ ಸರ್ಕಾರಕ್ಕೆ ಸಲಹೆಯನ್ನೀಯಬೇಕು" ಎಂಬ ಮತ ಪ್ರಕಟನೆ ಮಾಡಿದರು. ಇವರ ಈ ಸದುದ್ದೇಶಕ್ಕೆ ಪ್ರೋತ್ಸಾಹ ದೊರೆತು. ಕ್ರಿ. ಶ. ೧೮೮೫ ರಲ್ಲಿ ಪೂನಾದಲ್ಲಿ ಭಾರತಿಯ ಮುಖಂಡರ ಪರಿಷತ್ತು ಸೇರಿ "**ರಾಷ್ಟ್ರೀಯ ಸಭೆಯನ್ನು**" ( ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ) ರಚಿಸಿತು. ಈ ಕಾರ್ಯದಲ್ಲಿ ದಾದಾಭಾಯಿ ನವರೋಜಿ, ನ್ಯಾ. ರಾನಡೆ, ಸರ್ ಫಿರೋಜ್‌ಶಹಾ ಮೆಹತಾ, ದಿನಶಾ ವಾಛಾ, ತೇಲಂಗ್, ಸುಬ್ರಹ್ಮ

ಐಯ್ಯರ್, ಉಮೇಶಚಂದ್ರ ಬ್ಯಾನರ್ಜಿ, ಸುರೇಂದ್ರನಾಥ ಬ್ಯಾನರ್ಜಿ ಮುಂತಾದವರು ಭಾಗವಹಿಸಿದ್ದರು. ಸರ್ ಆಲನ್ ಹ್ಯೂಮರು ಈ ಸಭೆಯ ಮೊದಲನೇ ಕಾರ್ಯಕಾರಿಣಿ ( ಸೆಕ್ರೆಟರಿ ) ಯಾಗಿ ಕೆಲಸ ಮಾಡಿದರು

೪. **ಸರ್ ಸಯ್ಯದ್ ಅಹಮ್ಮದ್ ಖಾನ್ :—** ಬಡ ಕುಟುಂಬ ದಲ್ಲಿ ಹುಟ್ಟಿ ಬೆಳಕಿಗೆ ಬಂದ ವಿದ್ವನ್ಮಣಿಗಳಲ್ಲಿ ಇವರೂ ಒಬ್ಬರು. ಧಾರ್ಮಿಕ ವೃತ್ತಿಯವರೂ, ಸುಸಂಸ್ಕೃತರೂ ಆದ ಇವರು, ಕ್ರಿ. ಶ. ೧೮೧೭ ರಲ್ಲಿ ದಿಲ್ಲಿ ಯಲ್ಲಿ ಹುಟ್ಟಿದರು. ಇವರು ೧೮ ವರ್ಷ ತುಂಬುವುದರೊಳಗೇ ಅರಬೀ, ಪಾರ್ಶಿ ಭಾಷೆಗಳಲ್ಲಿ ಪಾಂಡಿತ್ಯಗಳಿಸಿದರು. ಕ್ರಿ. ಶ. ೧೮೩೯ ರಲ್ಲಿ ಮೊಗಲ ಸಾಮ್ರಾಜ್ಯದ ಆಗ್ರಾ ಕಮೀಶನರ ಕಚೇರಿಯಲ್ಲಿ ಸಿರಸ್ತೇದಾರರಾಗಿ ಸೇರಿ ಮುಂದೆ ಮುನ್ಸೀಫರಾದರು. ಶಿಕ್ಷಣವೇ ಮಾನವ ಪ್ರಗತಿಯ ಮೂಲವೆಂದು ತಿಳಿದು ತಮ್ಮ ಜಾತಿಬಾಂಧವರಿಗಾಗಿ ಮುರಾದಾಬಾದ್, ಫೈಜಾಬಾದ್ ಗಳಲ್ಲಿ ಇಂಗ್ಲೀಷ್ ಶಾಲೆಗಳನ್ನು ಆರಂಭಿಸಿದರು. ಕ್ರಿ. ಶ. ೧೮೭೫ ರಲ್ಲಿ ಅಲಿಗಡ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ ಶ್ರೇಯಸ್ಸು ಇವರದೆ. ಬ್ರಿಟಿಷ್ ಸರಕಾರ ಇವರ ಸೇವೆಗೆ ಮೆಚ್ಚಿ "ಸರ್" ಪದವಿಯನ್ನಿತ್ತಿತು. ಇವರು ಕ್ರಿ. ಶ. ೧೮೯೮ ರಲ್ಲಿ ಪೈಗಂಬರ ವಾಸಿಗಳಾದರು.

೫. **ಸರ್. ಜಮಶೇಡ್‌ಜೀ ಟಾಟಾ :—** ಬಡವ ಬಲ್ಲಿದನಾಗ ಬಲ್ಲನೆಂಬುದಕ್ಕೆ ಜೆಮಶೇಡಜೀಯವರು ಆದರ್ಶರು. ಹಿಂದುಸ್ಥಾನದಲ್ಲಿ ಔದ್ಯೋಗಿಕರಣದ ಗಾಳಿ ಇದರಿಂದಲೇ ಬೀಸಿತೆನ್ನಬಹುದು. ೧೮೩೯ರಲ್ಲಿ ಬಡೋದಾ ಜಿಲ್ಲೆಯ ನವಸಾರಿ ಎಂಬಲ್ಲಿ ಜನಿಸಿದರು. ಇವರ ತಂದೆ ಅಫು ವ್ಯಾಪಾರದಿಂದ ಸ್ವಲ್ಪ ಹಣಗಳಿಸಿದ್ದರು. ಉದ್ಯೋಗಪ್ರಿಯ ಜಮಶೇಡಜಿ ೧೮೫೮ರಲ್ಲಿ ಮ್ಯಾಟ್ರಿಕ್ ಪಾಸಾದಮೇಲೆ ಇಂಗ್ಲೆಂಡಿಗೆ ಹೋಗಿ ಅಫು ವ್ಯಾಪಾರ ದಲ್ಲಿ ಹಣಗಳಿಸಿದರು. ಮುಂದೆ ಹತ್ತಿಯ ವ್ಯಾಪಾರದಲ್ಲಿ ಕೈಹಾಕಿ ಹಿಂದು ಸ್ಥಾನಕ್ಕೆ ಮರಳಿ ಕೆಲ ಜನರನ್ನು ಕೂಡಿಕೊಂಡು ಮುಂಬೈಯಿಯಲ್ಲೂ, ನಾಗಪೂರಿನಲ್ಲೂ ನೂಲಿನ ಗಿರಣಿ ಸ್ಥಾಪಿಸಿದರು. ಹೀಗೆ ಜಮಶಡಜಿಯ ವರು ಹಿಂದುಸ್ಥಾನದಲ್ಲಿ ಔದ್ಯೋಗಿಕ ಕ್ರಾಂತಿಯೆಬ್ಬಿಸಿ ಕ್ರಿ. ಶ. ೧೯೦೪ರಲ್ಲಿ ಕಾಲವಾದರು.

ಮುಂದೆ ಇವರ ವಿಚಾರಸರಣಿಗನುಸಾರವಾಗಿ ಇವರ ಮಕ್ಕಳು ಬೆಂಗಳೂರಿನಲ್ಲಿ "ಟಾಟಾ ರೀಸರ್ಚ್ ಇನ್ಸಿಟ್ಯೂಟ್" ಗೆ ೩೦ ಲಕ್ಷ ರೂ.

ದಾನಮಾಡಿದರು. ಈಗ ಪ್ರಸಿದ್ಧವಾಗಿರುವ ಟಾಟಾ ಸ್ಟೀಲ್ ಕಂಪನಿ, ಟಾಟಾಪಾವರ್ ಹೌಸ (ವಿದ್ಯುಚ್ಛಕ್ತಿ ಕಾರಖಾನೆ), ಇತ್ಯಾದಿಗಳೆಲ್ಲಾ ಇವರ ಕನಸಿನ ಕೃತಿಗಳ ಪ್ರಾತ್ಯಕ್ಷಿಕೆ.

೬. **ಮಹಾತ್ಮಾ ಗಾಂಧಿ**:— ಭಾರತದ ಪಿತಾಮಹ ಗಾಂಧೀಜಿಯ ಜನನ ಕ್ರಿ. ಶ. ೧೮೬೯ ರಲ್ಲಿ ಆಯಿತು. ದೀನದರಿದ್ರರ ಕೈವಾರಿ, ಸ್ವಾತಂತ್ರ್ಯ ವೀರ ಗಾಂಧೀಜಿ ೧೮೮೮ ರಲ್ಲಿ ಇಂಗ್ಲಂಡಿನಲ್ಲಿ ಬ್ಯಾರಿಸ್ಟರ್ ಪದವಿ ದೊರಕಿದರು. ಚಿಕ್ಕಂದಿನಿಂದಲೂ ಇವರಲ್ಲಿ ಪಿತೃಭಕ್ತಿ, ಸತ್ಯಶೀಲತೆ, ಡೇಶಾಭಿಮಾನಗಳು ಮೂರ್ತಿವೆತ್ತಂತಿದ್ದುವು. ಅಂತೆಯೇ ಪಾಶ್ಚಾತ್ಯ ನಡೆನುಡಿಗಳನ್ನು ಅರಿತರೂ, ತನ್ನತನ, ಶೀಲವನ್ನು ಕಳೆದುಕೊಳ್ಳಲಿಲ್ಲ. ಇಂಗ್ಲೆಂಡಿನಿಂದ ಹಿಂತಿರುಗಿ ರಾಜಕೋಟೆ, ಮುಂಬೈಗಳಲ್ಲಿ ವಕೀಲಿಯನ್ನಾರಂಭಿಸಿದರು. ಒಮ್ಮೆ ತಮ್ಮ ಪಕ್ಷಕಾರನ ಪರವಾಗಿ ವಕಾಲತ್ತು ವಹಿಸಲು ಆಫ್ರಿಕೆಗೆ ಹೋದ್ದರು. ಆಗ ಅವರಿಗೆ ಬಿಳಿಯರ ಕರಾಳಕಾಯಿದೆಗಳ ಮತ್ತು ಹಿಂದೀಯರ ದೀನಾವಸ್ಥೆಯ ಅರಿವು ಉಂಟಾಯಿತು. ಆಗಲೇ ಗಾಂಧೀಜಿ ಹಿಂದಿಯರನ್ನು ಸಂಘಟಿಸಿ ಬಿಳಿಯರ ಬಲುಮೆಯ ಕಾಯಿದೆಗಳ ವಿರುದ್ಧ ಹೋರಾಡಿದರು. ಹೋರಾಟದಲ್ಲಿ ಅನನ್ವಿತ ಹಿಂಸೆಯನ್ನೂ, ಅವಮಾನವನ್ನೂ ಅನುಭವಿಸಬೇಕಾಯಿತು. ಆದರೂ ಕದಲದೆ ಕಾದಿ, ತಮ್ಮ ಒಕ್ಕೊರಲಿನ ಕೂಗು ಇಂಗ್ಲೆಂಡಿನ ಪಾರ್ಲಿಮೆಂಟಿಗೆ ಮುಟ್ಟುವಂತೆ ಮಾಡಿದರು. ಗಾಂಧೀಜಿಯ ಆಂದೋಲನಕ್ಕೆ ಸುಪ್ರಸಿದ್ಧ ರಶಿಯನ್ ತತ್ವಜ್ಞಾನಿ ಟಾಲ್‌ಸ್ಟಾಯಿಯ ಅಭಿನಂದನೆ ದೊರೆಯಿತು. ಕೊನೆಗೆ ಈ ಆಂದೋಲನದಿಂದ ಹಿಂದೀಯರಿಗೆ ಕೆಲ ಸೌಲತ್ತು ದೊರೆತವು. ಗಾಂಧೀಜಿ ಭಾರತಕ್ಕೆ ಮರಳಿ ಅಲ್ಲಿಯ ಹಿಂದೀಯರ ಬವಣೆಯನ್ನು ಬೀರಿದರು.

ಅಂದಿನಿಂದ ಭಾರತದ ರಾಜಕಾರಣದಲ್ಲಿ ಇವರ ಪಾತ್ರ ಪ್ರಾಮುಖ್ಯವಾದುದು. ೧೯೧೭ ರ ಚಂಪಾರಣ್ಯ (ಬಿಹಾರ) ದ ಚಳುವಳಿಯಲ್ಲಿ ಭಾಗವಹಿಸಿದರು. ೧ ನೇ ಮಹಾಯುದ್ಧದಲ್ಲಿ ಬ್ರಿಟಿಷ್ ಸರಕಾರಕ್ಕೆ ಬೆಂಬಲನೀಡಿದರು. ಜಾಲಿಯನ್ ವಾಲಾಬಾಗಿನ ಕೊಲೆ ಮತ್ತು "ರೌಲೆಟ್ ಆಕ್ಟ್" ಕಾಯಿದೆಗಳನ್ನು ಪ್ರತಿಭಟಿಸಿ ೧೯೨೦ ರಲ್ಲಿ **ಅಸಹಕಾರ** ಚಳುವಳಿ ಹೂಡಿದರು. ಚಿತ್ತರಂಜನದಾಸ್, ಮೋತಿಲಾಲ್ ನೆಹರು ಮುಂತಾದ ಅನೇಕ ಪ್ರಭುತಿಗಳು ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ಕಂಡರು. ಗಾಂಧೀಜಿಗೆ

೬ ವರ್ಷ ಕಾರಾಗೃಹವಾಸದ ಶಿಕ್ಷೆ ವಿಧಿಸಲ್ಪಟ್ಟಿತು. ಆದರೆ ಆ ಅವಧಿ ಮುಗಿಯುವುದರೊಳಗಾಗಿ ಇವರ ಬಿಡುಗಡೆಯಾಯಿತು. ಗಾಂಧೀಜಿ ಉಪ್ಪಿನ ಕರ ಕಾಯಿದೇ ಭಂಗ ಚಳುವಳಿ ಮಾಡಿದರು. ಗಾಂಧೀಜಿ ಇಂಗ್ಲೆಂಡಿನ ದುಂಡು ಮೇಜು ಪರಿಷತ್ತಿನಲ್ಲಿ ಭಾರತದ ಪ್ರತಿನಿಧಿಯಾಗಿದ್ದರು. ಅಸ್ಪೃಶ್ಯತಾ ನಿವಾರಣ, ಸ್ತ್ರೀಶಿಕ್ಷಣ, ಸ್ವದೇಶೀ ವಸ್ತು ಚಳುವಳಿ, ಆರ್ಥಿಕ ವಿಷಮತೆಯ ನಿವಾರಣೆ, ಜಾತಿಐಕ್ಯತೆ ಇವುಗಳಿಗಾಗಿ ಅವಿಶ್ರಾಂತವಾಗಿ ದುಡಿದರು. ಅಂತೆಯೇ ಇಡೀ ದೇಶವೇ ಇವರನ್ನು **'ಬಾಪೂ'** ಎಂದು ಪೂಜ್ಯಭಾವದಿಂದ ಕರೆಯುತ್ತಿತು. ಗಾಂಧೀಜಿ ೧೯೪೨ರಲ್ಲಿ **"ಚಲೇಜಾವ್"** ಚಳುವಳಿ ಆರಂಭಿಸಿದರು. ಬ್ರಿಟಿಷರು ಹಿಂದೀಯರಿಗೆ ಸ್ವಾಯತ್ತತೆಯನ್ನೀಯಲು ನಡೆಸಿದ ಸಂಧಾನಗಳಲ್ಲೆಲ್ಲಾ ಇವರ ಕೈ ಇದ್ದೇಇತ್ತು. ಅಂತೂ ರಾಷ್ಟ್ರಪಿತ ಗಾಂಧೀಜಿಯ ಶ್ರಮದಿಂದ ೧೯೪೭ ರ ಅಗಸ್ಟ ೧೫ ಕ್ಕೆ **ಭಾರತ ಸ್ವತಂತ್ರ**ವಾಯಿತು. ಆದರೇನು ಸ್ವಾತಂತ್ರ್ಯದ ಅರ್ಧ ವರ್ಷಸಹ ತುಂಬಿರಲಿಲ್ಲ, ೧೯೪೮ ರ ಜನವರಿ ೩೦ ರ ದಿನ ತಲೆತಿರುಕನೋರ್ವ ಬಾಪೂಜಿಯನ್ನು ಗುಂಡಿಕ್ಕಿ ಕೊಂದು, ಇಡೀ ದೇಶವನ್ನೇ ದುಃಖದ ಕಡಲಿನಲ್ಲಿ ಮುಳುಗಿಸಿದನು.

೭. **ಲಾರ್ಡ್ ಆಯರ್ವಿನ:—** (೧೯೨೬—೧೯೩೧) ಲಾರ್ಡ್ ರೀಡಿಂಗನ ತರುವಾಯ ಲಾಡ್ ಆಯರ್ವಿನ್ ವ್ಹಾಯಿಸರಾಯರಾಗಿಬಂದರು. ಮೌಂಟ್‌ಫರ್ಡ್ ಸುಧಾರಣೆಯ ಧೋರಣದಂತೆ ಹಿಂದೀಯರಿಗೆ ಸ್ವಾಯತ್ತತೆಯನ್ನೀಯಲು ೭ ಜನರ "ಸಾಯಮನ್ ಕಮೀಷನ್" ನೇಮಕವಾಯಿತು. ಈ ಕಮೀಷನ್ನಿನಲ್ಲಿ ಒರ್ವ ಭಾರತೀಯನೂ ಇಲ್ಲದ್ದರಿಂದ ಭಾರತದ ತುಂಬೆಲ್ಲಾ ಪ್ರತಿಭಟನೆ ಉಂಟಾಗಿ ಇವರು ಹೋದಲ್ಲೆಲ್ಲಾ ಕರೇನಿಶಾನಿ ಪ್ರದರ್ಶನ, ಹರತಾಳ, ಆಚರಿಸಲ್ಪಟ್ಟುವು. ಇಷ್ಟು ಪ್ರತಿಭಟಿಸಿದಾಗ್ಯೂ ಕಮೀಷನ್ ತನ್ನ ವರದಿಒಪ್ಪಿಸಿತು. ರಾಷ್ಟ್ರೀಯ ಸಭೆಯವರು ಪಂ. ಮೋತೀಲಾಲ್ ನೆಹರೂರವರ ಅಧ್ಯಕ್ಷತೆಯಲ್ಲಿ ಒಂದು ಕಮಿಟಿ ನೇಮಿಸಿ "ಭಾರತೀಯರಿಗೆ ಯಾವ ಯಾವ ರಾಜಕೀಯ ಹಕ್ಕುಗಳು ಬೇಕು." ಎಂಬುದನ್ನು ವಿಚಾರಿಸಿ ವರದಿ ಸಿದ್ಧಗೊಳಿಸಿದರು. ನೆಹರೂ ವರದಿಗೆ ೧೮೨೮ ರ ಕಲ್ಕತ್ತೆಯ ಕಾಂಗ್ರೆಸ್ ಅಧಿವೇಶನದ ಒಪ್ಪಿಗೆ ದೊರೆಯಿತು. ಈ ವರದಿಯಂತೆ ಸರಕಾರವು ಕಾರ್ಯಾಚರಣೆ ಮಾಡಲು ಒಪ್ಪದ್ದರಿಂದ ಚಳುವಳಿ ಹೂಡಿ "ಸಂಪೂರ್ಣ ಸ್ವಾತಂತ್ರ್ಯ" ಬೇಡಿಕೆ ಮಾಡಲ್ಪಟ್ಟಿತು. ಈ ಚಳು

ವಳಿಯನ್ನು ನಿಲ್ಲಿಸಲು ಗಾಂಧಿ ಆಯರ್ವಿನ್ನರಲ್ಲಿ ಒಂದು ಒಪ್ಪಂದವಾಯಿತು. ಒಪ್ಪಂದದಂತೆ ೧೯೩೧ ರಲ್ಲಿ ರಾಜಕೀಯ ಕೈದಿಗಳು ಅನಿರ್ಬಂಧದಿಂದ ಬಿಡುಗಡೆ ಮಾಡಲ್ಪಟ್ಟರು. ಲಾ. ಆಯರ್ವಿನ್ನನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ೩ ಬಾರಿ ದುಂಡುಮೇಜಿನ ಪರಿಷತ್ತು ಕೂಡಿದ್ದಿತು.

೮. **ಲಾರ್ಡ್ ಲಿನ್ ಲಿಥ್ ಗೋ** :—(೧೯೩೬–೧೯೪೩) ಲಾರ್ಡ್ ವಿಲಿಂಗ್ಡನ್ನರ ಅಧಿಕಾರಾವಧಿ ಮುಗಿದಿದ್ದರಿಂದ, ಲಾರ್ಡ್ ಲಿನ್ ಲಿಥ್ ಗೋ ರವರು ವ್ಹಾಯಿಸ್‌ರಾಯರಾಗಿ ಬಂದರು. ಇವರ ಆಳಿಕೆಯ ಕಾಲದಲ್ಲಿ 'ಗತ್ತಿನತುಂಬೆಲ್ಲಾ ಅನೇಕ ಕ್ರಾಂತಿಕಾರಕ ಘಟನೆಗಳು ಜರುಗಿದವು. ಗಳಲ್ಲಿ ಮುಖ್ಯವಾದುವೆಂದರೆ ೮ ನೇ ಎಡ್ವರ್ಡ ಬಾದಶಾಹರು ರಾಜ್ಯ ತ್ಯಾಗಮಾಡಿದದು. ಎಡ್ವರ್ಡರ ತಮ್ಮಂದಿರು ೬ ನೇ ಜಾರ್ಜನೆಂದು ಪಟ್ಟವೇರಿದುದು. ಇವರ ಕಾಲದಲ್ಲಿ ಹಿಂದೀಯರಿಗೆ (೧೯೩೬) ಪ್ರಾಂತಿಕ ಸ್ವಾಯತ್ತತೆ ದೊರೆಯಿತು. ಕಾಂಗ್ರೆಸ್ಸು ಚುನಾವಣೆಯಲ್ಲಿ ಬಹುಮತ ದಿಂದ ಆರಿಸಿಬಂದು ೮ ಪ್ರಾಂತಗಳಲ್ಲಿ ಮಂತ್ರಿಮಂಡಲ ರಚಿಸಿ ಅಧಿಕಾರ ವಹಿಸಿಕೊಂಡಿತು. ೧೯೩೯ ರಲ್ಲಿ ೨ನೇ ಜಾಗತಿಕ ಮಹಾಯುದ್ಧ ಆರಂಭವಾಯಿತು. ಬ್ರಿಟಿಷ್ ಸರಕಾರವು ಭಾರತವನ್ನು ಈ ಯುದ್ಧದಲ್ಲಿ ಒತ್ತಾಯದಿಂದ ಎಳೆದದ್ದರಿಂದ ಕಾಂಗ್ರೆಸ್ ಮಂತ್ರಿಮಂಡಲಗಳೆಲ್ಲಾ ರಾಜೀನಾಮೆ ಕೊಟ್ಟವು. ಪ್ರಾಂತಗಳಲ್ಲಿ ಗವ್ಹರ್ನರರ ಆಳಿಕೆ ಆರಂಭವಾಯಿತು. ಆಗಿನ ಬ್ರಿ. ಸರಕಾರ ಸುಗ್ರೀವಾಜ್ಞೆ ಹೊರಡಿಸಿತು, ಇದೇ ಆಜ್ಞೆ ಮುಂದೆ **ಭಾರತ ಸಂರಕ್ಷಣ** ಕಾಯಿದೆಯಾಗಿ ಪರಿಣಮಿಸಿತು. ಯುದ್ಧಾನಂತರ ಭಾರತೀಯರಿಗೆ ವಸಾಹತು ಸ್ವರಾಜ್ಯ ದೊರೆಯುವುದೆಂದು ವ್ಹಾಯಿಸರಾಯ್ ಘೋಷಣೆ ಹೊರೆಟಿತು. ೧೯೪೨ ಚಿಯಂಗ್ ಕೈಸೇಕ್ ದಂಪತಿಗಳು ಭಾರತಕ್ಕೆ ಭೆಟ್ಟಿಯನ್ನಿತ್ತು ಹೋದರು. ಇದೇ ವರ್ಷ ಭಾರತದ ತುಂಬೆಲ್ಲಾ "**ಚಲೇಜಾವ್**" ಚಳುವಳಿ ಆರಂಭವಾಯಿತು. ೧೯೪೨ ರಲ್ಲಿ ಜಪಾನು ಭಾರತದ ದಕ್ಷಿಣ ತೀರದ ವಿಶಾಖ ಪಟ್ಟಣ, ಕಾಕಿನಾಡಗಳ ಮೇಲೆ ದಾಳಿಮಾಡಲು, ಬ್ರಿಟಿಶರು ತಮ್ಮ ಸಾಮ್ರಾಜ್ಯದ ಅಳಿವು ನಿಶ್ಚಿತವೆಂಬುದನ್ನು ಅರಿತರು. ಕ್ರಿಪ್ಸ್ ಶಿಷ್ಟಮಂಡಲ ಬಂದು ಅಯಶಸ್ವಿಯಾಗಿ ಹಿಂತಿರುಗಿತು. ಅಂತೂ ಲಿನ್ ಲಿಥ್ ಗೋ ತನ್ನ ಕರ್ತವ್ಯವನ್ನು ಸಮರ್ಥವಾಗಿ ನೆರವೇರಿಸಿ ಕ್ರಿ. ಶ. ೧೯೪೩ರ ಲ್ಲಿ ಇಂಗ್ಲೆಂಡಿಗೆ ಮರಳಿದರು.

೯. **ಲಾರ್ಡ್ ವಾವೆಲ್** :— (೧೯೪೩–೧೯೪೭) ಸುಪ್ರಸಿದ್ಧ ಮಿಲಿಟರೀ ಅಧಿಕಾರಿ ಲಾರ್ಡ್ ವಾವೆಲ್, ಲಾ. ಲಿನ್ ಲಿಥ್ ಗೋರ ತರುವಾಯ ವ್ಹಾಯಿಸ್‌ರಾಯರಾಗಿ ಬಂದರು. ಇವರು ೨ ನೇ ಜಾ. ಮ. ಯುದ್ಧದಲ್ಲಿ, ಇಟಲಿಯಾ ಅಬಿಸೀನಿಯಾವನ್ನು ಗೆದ್ದಿದ್ದರು. ಪ್ರಸಿದ್ಧ ಜರ್ಮನ್ ಸೇನಾನಿ ರೋಮೆಲ್ಲನಿಂದ ಆಫ್ರಿಕೆಯಲ್ಲಿಯ ಲಿಬಿಯಾ, ಸೊರೇನಿಕಾ ಪ್ರಾಂತಗಳನ್ನು ತಿರುಗಿ ಗೆದ್ದನು. ಇಂತಹ ಸೈನ್ಯಾಧಿಕಾರಿಯು ಭಾರತೀಯ ಆಂದೋಲನವನ್ನು ತುಳಿಯಲು ಕಳಿಸಲ್ಪಟ್ಟಿದ್ದನಂದರೆ ಅತಿಶಯೋಕ್ತಿಯಿ ನಿಲ್ಲ. ಆದರೆ ಮಹಾತ್ಮರ ಅಹಿಂಸಾ ಶಸ್ತ್ರದ ಮುಂದೆ ಬ್ರಿಟಿಷ್ ಶಸ್ತ್ರಾಸ್ತ್ರಗಳ ಸದ್ದು ಅಡಗಿತು. ದಬ್ಬಾಳಿಕೆಯಿಂದ ಹಿಂಸೆ ಹೆಚ್ಚಿದಂತೆಲ್ಲಾ ಜನಜಾಗ್ರತಿ ಹೆಚ್ಚಿ, ಸ್ವಾಭಿಮಾನ, ದೇಶಾಭಿಮಾನಗಳು ಭಾರತೀಯರಲ್ಲಿ ಪ್ರಜ್ವಲಿಸಿದುವು. ವಾವೆಲ್ಲನಿಗೆ ಸ್ವಲ್ಪ ಮಟ್ಟಿಗೆ ಯಶ ಸಿಕ್ಕಿದುದೆಂದರೆ ಭಾರತೀಯ ಗೊಂದಲ ವನ್ನೂ, ಭಾರತೀಯ ರಾಜಕೀಯ ಹೋರಾಟದಲ್ಲಿ ಕುದುರುವಂತೆ ಮಾಡಿ ದುದು. ಇವನ ಆಳಿಕೆಯ ಕಾಲಕ್ಕೆ ಬಂಗಾಲದಲ್ಲಿ ಭೀಕರ ಬರಗಾಲ ತಾಂಡವವಾಡಿ, ಲಕ್ಷಾವಧಿ ಜನರ ಬಲಿ ತೆಗೆದುಕೊಂಡಿತು. ೨ನೇ ಜಾಗತಿಕ ಮಹಾಯುದ್ಧದ ಮುಕ್ತಾಯವಾಯಿತು. ಜರ್ಮನಿ, ಇಟಲಿ, ಜಪಾನುಗಳು ಸೋತವು. ಕೆಂಪು ಕೋಟೆಯಲ್ಲಿ ಸುಭಾಸರ **ಅಜಾದ್ ಸೈನಿಕರ** ವಿಚಾ ರಣೆ ನಡೆದು ನಿರ್ದೋಷಿಗಳೆಂದು ಮುಕ್ತಮಾಡಲ್ಪಟ್ಟರು. ಭೂಸೈನ್ಯ, ನೌಕಾ ಪಡೆ, ವಾಯುದಳ, ಪೋಲೀಸ್ ಖಾತೆಯಲ್ಲಿಯೂ ಸಂಪು ಆಗ ಹತ್ತಿದ್ದವು. ಇನ್ನು ರಾಜ್ಯವಾಳುವುದು ಅಶಕ್ಯವೆಂದುತಿಳಿದು ಇಂಗ್ಲೆಂಡಿನಿಂದ ೩ ಜನ ಮಂತ್ರಿಗಳ ಶಿಷ್ಟ ಮಂಡಲ ಬಂದಿತು. ಶಿಷ್ಟ ಮಂಡಲದಲ್ಲಿ ಭಾರತ ಮಂತ್ರಿ ಲಾ. **ಫೆಥಿಕ್‌ಲಾರೆನ್ಸ್, ಸರ್ ಸ್ಟಾಫೊರ್ಡ್ ಕ್ರಿಪ್ಸ್, ಅಲೆಗ್ಸಾಂಡರರು** ಇದ್ದರು. ಶಿಷ್ಟ ಮಂಡಲವು ರಾಜ್ಯ ಘಟನೆಯ ಬಗ್ಗೆ ಪ್ರಮುಖ ರಾಜಕೀಯ ಪಕ್ಷಗಳ ಮತ ಕೇಳಿಕೊಂಡರು. ಭಾರತ ಒಕ್ಕೂಟದ ಕೇಂದ್ರ ಸರಕಾರ, ಪ್ರಾಂತಗಳಲ್ಲಿ ೩ ಗುಂಪುಗಳೂ, ಘಟನಾಸಮಿತಿ ಮತ್ತು ನಡುಗಾಲ ಸರಕಾರ ರಚಿಸುವ ಯೋಚನೆ ಆಯಿತು. ಮೊದಲು ಈ ವ್ಯವಸ್ಥೆಗೆ ಮುಸ್ಲಿಂ ಲೀಗು ಒಪ್ಪಿದ್ದರೂ ಮುಂದೆ ಪಾಕಿಸ್ತಾನ ಬೇಕೇಬೇಕೆಂದು ಹಟಹಿಡಿದರು. ಜಾತೀಯದಂಗೆ ಹುಟ್ಟಿಕೊಂಡುವು. ಆದರೂ ಪಂ. ಜವಾಹರಲಾಲ್ ನೆಹರೂ ರವರು ಕೆಲ ರಾಷ್ಟ್ರೀಯ ಮುಸಲ್ಮಾನರನ್ನೊಳಗೊಂಡ ನಡುಗಾಲ ಸರಕಾರ

ರಚಿಸಿದರು. ಲಾ. ವಾವೆಲ್ಲರು ಹೊಸ ವ್ಹಾಯಿಸರಾಯರಾದ ಮೌಂಟ್ ಬ್ಯಾಟನ್ನರಿಗೆ ಅಧಿಕಾರ ವಹಿಸಿ ತಮ್ಮ ದೇಶಕ್ಕೆ ಹಿಂತಿರುಗಿದರು.

೧೦. **ಬ್ಯಾ. ಜಿನ್ನಾ :—** ಮುಸ್ಲಿಮರ ಏಕಮಾತ್ರ ಮುಖಂಡ ರಾಗಿದ್ದ ಬಾರಿಸ್ಟರ್ ಜಿನ್ನಾರವರು ಕ್ರಿ. ಶ. ೧೮೭೬ ರಲ್ಲಿ ಕರಾಚಿಯ ಓರ್ವ ಖೋಜಾ ವ್ಯಾಪಾರೀ ಮನೆತನದಲ್ಲಿ ಹುಟ್ಟಿದರು. ತಂದೆ ದೊಡ್ಡ ವ್ಯಾಪಾರಿ ಯಾಗಿದ್ದರಿಂದ ಜಿನ್ನಾರವರು ವ್ಯಾಪಾರಿಯಾಗಿ ಆಗರ್ಭ ಶ್ರೀಮಂತರೆನಿಸಿ ಕೊಳ್ಳಬಹುದಿತ್ತು. ಆದರೆ ತಂದೆಯು ಮಗನ ತೀಕ್ಷ್ಣ ಬುದ್ಧಿಯನ್ನು ಂಡು ಬ್ಯಾರಿಸ್ಟರ್ ಪದವಿ ದೊರಕಿಸಲು ಕೇವಲ ೧೬ ವರ್ಷದ ಬಾಲಕ ನ್ನಾರನ್ನು ಕ್ರಿ. ಶ. ೧೮೯೨ ರಲ್ಲಿ ಇಂಗ್ಲೆಂಡಿಗೆ ಕಳುಹಿದರು. ಜಿನ್ನಾರು . ಪದವಿ ದೊರಕಿಸಿಕೊಂಡು ಕ್ರಿ. ಶ. ೧೮೯೬ ರಲ್ಲಿ ಭಾರತಕ್ಕೆ ಹಿಂತಿರುಗಿ ೮೯೭ ರಲ್ಲಿ ಮುಂಬೈಯಲ್ಲಿ ವಕೀಲಿಯನ್ನಾರಂಭಿಸಿದರು. ಈಮಧ್ಯೆ ತಂದೆ ವ್ಯಾಪಾರದಲ್ಲಿ ಹಾನಿಗೀಡಾದುದರಿಂದಲೂ, ಜಿನ್ನಾರ ವಕೀಲಿ ಸರಿಯಾಗಿ ನಡೆಯದ್ದರಿಂದಲೂ ವಿಪರೀತ ಆರ್ಥಿಕ ಮುಗ್ಗಟ್ಟಿಗೀಡಾದರು. ಅಂತೂ ೩ ವರ್ಷ ಕಷ್ಟ ಕಾರ್ಪಣ್ಯವನ್ನನುಭವಿಸಿದ ಮೇಲೆ ಇವರಿಗೆ ವಿಜಯಶ್ರೀ ಒಲಿದಂತಾಗಿ, ಒಂದರಿಂದೊಂದು ಖಟ್ಲೆ ( ಕೇಸು ) ಗಳನ್ನು ಗೆಲ್ಲಹತ್ತಿ, ಭಾರತದ ಶ್ರೇಷ್ಠ ವಕೀಲರ ಪಂಕ್ತಿಯಲ್ಲಿ ಗಣಿಸಲ್ಪಟ್ಟರು. ಜಿನ್ನಾರವರಿಗೆ ಡಾ. ಗೋಪಾಲಕೃಷ್ಣ ಗೋಖಲೆಯವರ ಬಗ್ಗೆ ವಿಶೇಷ ಆದರವಿತ್ತು. ಆದ್ದರಿಂದ ಎಷ್ಟೋ ಸಾರೆ ತಾವೂ ಮುಸ್ಲಿಂ ಗೋಖಲೆಯವರಾಗ ಬಯಸುವ ದಾಗಿ ಇಚ್ಛೆ ವ್ಯಕ್ತಪಡಿಸುತ್ತಿದ್ದರು. ೧೯೦೬ ರಲ್ಲಿ ಭಾರತೀಯ ರಾಜಕೀಯ ಕಣಕ್ಕಿಳಿದರು. ಕ್ರಿ. ಶ. ೧೯೧೦ ರಲ್ಲಿ ಮುಂಬೈ ಮುಸ್ಲಿಮರ ಪ್ರತಿನಿಧಿಯಾಗಿ ಕೇಂದ್ರದ ಶಾಸನ ಸಭೆಗೆ ಆರಿಸಲ್ಪಟ್ಟರು. ಇವರು ಮುಸ್ಲಿಮರ ಪ್ರತಿನಿಧಿ ಯಾಗಿ ಆರಿಸಲ್ಪಟ್ಟರೂ, ರಾಷ್ಟ್ರೀಯ ಹಿತಕ್ಕೆ ಭಂಗ ಬರದಂತೆ ನಡೆದರು. ೧೯೧೪ ರಲ್ಲಿ '' ರಾಷ್ಟ್ರಿಯ ಸಭೆಯು '' ( ಕಾಂಗ್ರೆಸ್ ) ಕಳಿಸಿದ ಶಿಷ್ಟ ಮಂಡಲದಲ್ಲಿ ಒಬ್ಬ ಪ್ರತಿನಿಧಿಯಾಗಿ ಇಂಗ್ಲೆಂಡಿಗೆ ಹೋಗಿದ್ದರು. ೧೯೧೬ ರಲ್ಲಿ ಮುಂಬೈಯಿಯ ಮುಸ್ಲಿಮರು ಇವರನ್ನು ವ್ಹಾಯಿಸ್‌ರಾಯ ಮಂಡಲದ ಸದಸ್ಯರನ್ನಾಗಿ ಆರಿಸಿದರು. ೧೯೧೩ ರಲ್ಲಿ ಜಿನ್ನಾರು ಮುಸ್ಲಿಂ ಲೀಗ್ ಸೇರಿದರು. ೧೯೧೬ ರಲ್ಲಿ ಶ್ರೀಮತಿ ಅನೀಬೇಸೆಂಟ್ ತೀರಿಕೊಂಡ ನಂತರ ಹೋಮ್‌ರೂಲ್ ಚಳುವಳಿ ಸೇರಿದ್ದರು. ಅಂತೂ ಜಿನ್ನಾರವರು ಭಾರತೀಯ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಮುಖ ಪಾತ್ರವಹಿಸಿ ಅವಿಶ್ರಾಂತ ದುಡಿದು ಜನಸೇವೆಗೈದರು. ೧೯೩೭ರ ವರೆಗೂ ಹಿಂದೂ-ಮುಸ್ಲಿಂ ಐಕ್ಯಕ್ಕಾಗಿ ದುಡಿದು, ಬ್ರಿಟಿಶ ಸರಕಾರ ಕೊಡಮಾಡಿದ ಪ್ರತ್ಯೇಕ ಮತದಾರ ಸಂಘವನ್ನು ವಿರೋಧಿಸಿದ್ದರು. ಆದರೆ ೧೯೩೮ ರಲ್ಲಿ ಮುಸ್ಲಿಂ ಲೀಗಿನವರು ಬೇಡಿದ ಕೆಲ ವಿಶೇಷ ಸವಲತ್ತುಗಳು ರಾಷ್ಟ್ರೀಯ ಸಭೆಯ ಮತ್ತು ಹಿಂದೂ ಮಹಾ ಸಭೆಯ ಹಿಂದೂ ಸದಸ್ಯರಿಗೆ ಒಪ್ಪಿತವಾಗಲಿಲ್ಲ. ಆದ್ದರಿಂದ ಆಗಿನ ಸರಕಾರವು "ಜಾತಿವಾರ ಪ್ರಾತಿನಿಧ್ಯ" ವನ್ನು ನಿರ್ಣಯಿಸಿದರು. ಆಗಿನಿಂದ ಜಿನ್ನಾರವರು ಕೇವಲ ಮುಸ್ಲಿಂ ಹಿತರಕ್ಷಣೆಗಾಗಿಯೇ ಹೋರಾಡಹತ್ತಿದರು. ಕೊನೆಗೆ ೧೯೪೦ರಲ್ಲಿ ಪಾಕಿಸ್ತಾನದ ಬೇಡಿಕೆ ಮುಂದಿಟ್ಟು ಹಟದಿಂದ ೧೯೪೭ ರಲ್ಲಿ ಭಾರತವಿಭಜನೆ ಮಾಡಿಸಿದರು. ಪಾಕಿಸ್ತಾನ ನಿರ್ಮಾಣವಾಗುತ್ತಲೇ ತಾವೇ ಗವ್ಹರ್ನರ್ ಜನರಲ್ಲರಾಗಿದ್ದರು. ಜಿನ್ನಾರವರು ಕ್ರಿ. ಶ. ೧೯೪೮ರಲ್ಲಿ ಹೃದಯಕ್ರಿಯೆನಿಂತು ಮರಣ ಹೊಂದಿದರು.

೧೧. **ಸರದಾರ್ ವಲ್ಲಭಾಯಿ ಪಟೇಲ್ :**—ಭಾರತದ ಭದ್ರತೆ ಏಳ್ಗೆಗೆ ಕಳಂಕ ಪ್ರಾಯವಾಗಿ, ನೂರಾರು ಛಿದ್ರಗಳಂತಿದ್ದ ಸಂಸ್ಥಾನಗಳನ್ನೆಲ್ಲಾ ಒಟ್ಟುಗೂಡಿಸಿದ ಶ್ರೇಯ ಸರದಾರ ಪಟೇಲರದು. ಕಾರ್ಯನಿಷ್ಠ, ದಕ್ಷ ಪಟೇಲರು ಹಿಡಿದ ಕೆಲಸವನ್ನೆಂದೂ ಮುಗಿಸದೇ ಬಿಡುವವರಲ್ಲ. ಆಗದುದನ್ನು ಆಡುವವರಲ್ಲ. ಬಾಲ್ಯದಿಂದಲೂ ಇವರಲ್ಲಿ ಅಸತ್ಯ, ಅನ್ಯಾಯವನ್ನು ಪ್ರತಿಭಟಿಸುವ ಗುಣ ಬೇರು ಬಿಟ್ಟಿದ್ದಿತು. ಒಮ್ಮೆ ಇನ್ನೂ ಚಿಕ್ಕವರಿರುವಾಗ ಅವರು ಓದುತ್ತಿದ್ದ ಶಾಲೆಯ ಶಿಕ್ಷಕರೋರ್ವರು ಎಲ್ಲ ಹುಡುಗರು ಪುಸ್ತಕಗಳನ್ನು ತಮ್ಮಲ್ಲಿಯೇ ಕೊಳ್ಳಲು ಒತ್ತಾಯಪಡಿಸಿದರು. ಸರಿ ವಲ್ಲಭಾಯಿ ಹಿಂದುಮುಂದು ನೋಡದೇ ಹುಡುಗರನ್ನು ಸಂಘಟಿಸಿ, ಶಿಕ್ಷಕರು ಸೋಲುವವರೆಗೂ ಬಿಡಲಿಲ್ಲ. ಅಹಮ್ಮದಾಬಾದಿನ ಕೋರ್ಟಿನಲ್ಲಿ ಖಟ್ಲೆ ನಡೆಸುತ್ತಿದ್ದಾಗ ತಮ್ಮ ಹೆಂಡತಿ ತೀರಿಕೊಂಡ ತಾರು ಬಂದಿತು. ಆಗಲೂ ತಾರನ್ನು ಕಿಸೆಗಿಟ್ಟು, ಖಟ್ಲೆ ನಡೆಯಿಸಿದರು. ಮೊದಲು ತತ್ವವಿರೋಧಿಗಳಾದ ಇವರು, ಗಾಂಧೀಜೀಯ ಚಂಪಾರಣ್ಯ ಸತ್ಯಾಗ್ರಹದ ಯಶವನ್ನು ಕೇಳಿ ಅತ್ತ ಎಳೆಯಲ್ಪಟ್ಟರು. ಅಂದಿನಿಂದ ತಮ್ಮ ಜೀವನವನ್ನೆಲ್ಲಾ ಗಾಂಧೀಜಿಯ ಸದ್ಭಕ್ತರಾಗಿ ಕಳೆದರು. ೧೯೧೮ ರಲ್ಲಿ ಖೇಡಾ ಜಿಲ್ಲೆಯಲ್ಲಿ ಬರಬೀಳಲು ಗಾಂಧೀಜಿಯ ಆದೇಶದಂತೆ ರೈತರನ್ನು ಸಂಘಟಿಸಿ ಕರನಿರಾಕರಣೆ ಮಾಡಿ

ಸರಕಾರದ ವಿರುದ್ಧ ವಿಜಯ ಸಂಪಾದಿಸಿದರು. ವಲ್ಲಭಾಯಿ ಕೆಲವರ್ಷ ಅಹಮ್ಮದಾಬಾದ ನಗರ ಸಭೆಯ ಅಧ್ಯಕ್ಷರಾಗಿ ದುಡಿದು ಜನಪ್ರೇಮವನ್ನು ಗಳಿಸಿದರು. ೧೯೨೭ ರಲ್ಲಿ ಸರಕಾರವು ಬಾರ್ಡೋಲಿ ತಾಲೂಕಿನ ತೆರಿಗೆಯನ್ನು ೧೦೦ಕ್ಕೆ ೨೦ ರಷ್ಟು ಏರಿಸಲು ಅದನ್ನು ಪ್ರತಿಭಟಿಸಲು ರೈತರನ್ನು ಸಂಘಟಿಸಿ, ಧುರೀಣತ್ವ ವಹಿಸಿ ಸತ್ಯಾಗ್ರಹವನ್ನಾಚರಿಸಿದರು. ಸರಕಾರವು ಸತ್ಯಾಗ್ರಹವನ್ನು ತುಳಿಯಲುಮಾಡಿದ ಅತ್ಯಾಚಾರವನ್ನೆಲ್ಲಾ ಧೈರ್ಯದಿಂದ ಎದುರಿಸಿ ಯಶ ಸಂಪಾದಿಸಿದರು. ಆಗ ಮಹಾತ್ಮಾಜೀಯರು ಇವರ ಸಂಘಟನಾ ಶಕ್ತಿ, ಕರ್ತವ್ಯದಕ್ಷತೆಯನ್ನು ಮೆಚ್ಚಿ "ಸರದಾರ" ಎಂಬ ಬಿರುದನ್ನಿತ್ತರು. ರಾಚಿಯಲ್ಲಿ ಸೇರಿದ ರಾಷ್ಟ್ರೀಯ ಸಭೆಗೆ ಅಧ್ಯಕ್ಷರಾಗಿದ್ದರು. ೧೯೪೭ರಲ್ಲಿ ಕಿತವಾದ ನೆಹರೂ ಮಂತ್ರಿಮಂಡಲದಲ್ಲಿ ಗೃಹಖಾತೆ, ಸಂಸ್ಥಾನ ಖಾತೆ ನ್ನು ವಹಿಸಿಕೊಂಡು ಭಾರತಕ್ಕೆ ಸಲ್ಲಿಸಿದ ಸೇವೆ ಚಿರಸ್ಮರಣೀಯವಾಗಿದೆ. ಇವರ ಪರಿಶ್ರಮದಿಂದಲೇ ಭಾರತದ ಮುಖದಮೇಲೆ ಮಡಿಬಕ್ಕೆಗಳಂತಿದ್ದ ಸಂಸ್ಥಾನಗಳು ವಿಲೀನವಾದುವು. ಹೀಗೆ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ ಮತ್ತು ರಾಜ್ಯವ್ಯವಸ್ಥೆಯಲ್ಲಿ ಇವರು ಮಾಡಿದ ಸೇವೆ ಚಿರಸ್ಮರಣೀಯವಾಗಿವೆ.

೧೨. **ಪಂ. ಜವಾಹರ್‌ಲಾಲ್ ನೆಹರೂ :—** ಸ್ವಾತಂತ್ರ್ಯವೀರ ಪಂ. ಜವಾಹರರು ೧೮೮೯ ನೇ ೧೪ ನೇ ನವಂಬರ್ ದಿನ ಕಾಶ್ಮೀರಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದರು. ಭಾರತದಲ್ಲಿಯೇ ಪ್ರಸಿದ್ಧ ವಕೀಲರೆನಿಸಿದ ಪಂಡಿತ ಮೋತೀಲಾಲ್ ನೆಹರೂರವರೇ ಜವಾಹರರ ತಂದೆ. ಮೋತೀಲಾಲರು ಮಗನ ಓದಿನ ಬಗ್ಗೆ ವಿಶೇಷ ಆಸ್ಥೆವಹಿಸಿ ಪ್ರಾಥಮಿಕ ಶಿಕ್ಷಣವನ್ನು ಅಲಹಾಬಾದಿನಲ್ಲಿಯೇ ಕೊಡಿಸಿದರು. ಮುಂದೆ ೧೯೦೪ ರಲ್ಲಿ ಇಂಗ್ಲೆಂಡಿನ ಮಿಡಲ್ ಸೆಕ್ಸಿನಲ್ಲಿಯ "ಹ್ಯಾರೋ" ಎಂಬ ಅತಿಪ್ರಾಚೀನ ಶಾಲೆಯಲ್ಲಿ ಇವರಿಗೆ ಶಿಕ್ಷಣಕೊಡಿಸಲಾಯಿತು. ಈ ಶಾಲೆಯಿಂದ ಜವಾಹಿರರು ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಟ್ರೆನಿಟಿಕಾಲೇಜನ್ನು ಸೇರಿ ಬಿ. ಎ. ಪದವೀಧರರಾದರು. ೧೯೧೨ ರಲ್ಲಿ ಇನ್ನರ್ ಟೆಂಪಲ್‌ದಲ್ಲಿ ಬ್ಯಾರಿಸ್ಟರ್ ಪದವಿ ದೊರಕಿಸಿಕೊಂಡು ಭಾರತಕ್ಕೆ ಹಿಂತಿರುಗಿದರು. ಜವಾಹಿರರು ಶಿಕ್ಷಣಕ್ಕಾಗಿ ಇಂಗ್ಲೆಂಡಿನಲ್ಲಿ ರಾಜವೈಭವದಿಂದಿದ್ದರೂ, ಭಾರತ ಸ್ವಾತಂತ್ರ್ಯದ ದೈನ್ಯದ ಕೂಗು ಇವರ ಹೃದಯವನ್ನು ಆಗಾಗ್ಗೆ ಕಲುಕದೇ ಇರಲಿಲ್ಲ. ಭಾರತಕ್ಕೆ ಮರಳಿದ ನಂತರ ಅಲಹಾಬಾದಿನಲ್ಲಿ ವಕೀಲಿಯನ್ನಾರಂಭಿಸಿದರು.

ಆದರೆ ಹೇಳಿಕೊಳ್ಳುವಷ್ಟು ಯಶಸ್ವಿಯಾಗಲಿಲ್ಲ ೧೯೧೬ ನೇ ಫೆಬ್ರುವರಿಯಲ್ಲಿ ದಿಲ್ಲಿಯ ಪಂ. ಜವಾಹಿರ ಕೌಲ ಇವರ ಮಗಳು ಕಮಲಾದೇವಿಯವರೊಂದಿಗೆ ರಾಜವೈಭವದಿಂದ ಲಗ್ನ ಮಾಡಿಕೊಂಡರು. ೧೯೧೬ರಲ್ಲಿಟಿಲಕ್ ಮತ್ತು ಅನಿಬೆಸಂಟರು ಭಾಗವಹಿಸಿದ ಹೋಂರೂಲ್ ಚಳುವಳಿಯಲ್ಲಿ ಜವಾಹಿರರು ಪ್ರಮುಖ ಪಾತ್ರವಹಿಸಿ ಯಶಸ್ವಿಯಾಗುವಂತೆ ಮಾಡಿದರು. ದ. ಆಫ್ರಿಕೆಯ ಹಿಂದೀಯರಿಗೆ ಸಹಾಯಮಾಡಲು ನಾ|| ಗೋಖಲೆಯವರು ಜಾಹಿರ ವಿನಂತಿ ಮಾಡಿಕೊಳ್ಳಲು, ನೆಹರೂರೊಬ್ಬರೇ ೪೦,೦೦೦ ರೂಪಾಯಿ ಕೂಡಿಸಿ ಕಳಿಸಿದರು. ಮಹಾತ್ಮಾ ಗಾಂಧಿಯವರಿಗೆ ನೆಹರೂ ಎಂದರೆ ಪಂಚಪ್ರಾಣ. ಇವರೇ ತಮ್ಮ ಉತ್ತರಾಧಿಕಾರಿಎಂದು ಹೇಳುತ್ತಿದ್ದರು, ಏಕೆ ಗೊತ್ತೇ, ಜವಾಹಿರರು ಒಮ್ಮೆ ಒಪ್ಪಿದ ತತ್ವವನ್ನು ಚಾಚೂ ತಪ್ಪದೆ ನಡೆಯಿಸುವವರು. ಅದರಲ್ಲೂ ಮಹಾತ್ಮಾಜಿಯೆಂದರೆ ಜವಾಹಿರರ ದೇವರು, ಅವರ ಸಲಹೆ ಸೂಚನೆಯಿಲ್ಲದೆ ಯಾವಕಾರ್ಯವನ್ನೂ ಮಾಡುತ್ತಿರಲಿಲ್ಲ. ಅಲಹಾಬಾದಿನಲ್ಲಿಯ ತಮ್ಮ ಸ್ವಂತದ ದೊಡ್ಡ ಬಂಗಲೆಯನ್ನು ಕಾಂಗ್ರೆಸ್ಸಿಗೆ ದಾನಮಾಡಿದ್ದಾರೆ. ದೇಶಸೇವೆ, ಜನಸೇವೆಯೇ ಇವರ ಧ್ಯೇಯ. ಅಂತೆಯೇ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವಿಶ್ರಾಂತ ದುಡಿದು, ಅನೇಕ ಕಷ್ಟನಷ್ಟಗಳನ್ನನುಭವಿಸಿ, ಸೆರೆಮನೆಕಂಡು ಕೊನೆಗೆ ಭಾರತಮ್ಮನ ಸಂಕೋಲೆಗಳನ್ನು ಕಡಿದೊಗೆದು "**ಸ್ವಾತಂತ್ರ್ಯ**" ಸಂಪಾದಿಸಿದ ವೀರ ಪುತ್ರರೆನಿಸಿಕೊಂಡರು. ಆದರೇ ರಾಜಕೀಯ ಸ್ವಾತಂತ್ರ್ಯ ಒಂದೇ ಇವರ ಗುರಿಯಲ್ಲ, ದೇಶಬಾಂಧವರ ದಾರಿದ್ರ್ಯವನ್ನು ಕಳೆಯಲು ಜೀವದ ಪರಿವೆ ಇಲ್ಲದೆ ದುಡಿಯುತ್ತಿರುವರು. ಇಂತಹ ಮುಖಂಡರನ್ನು ಪಡೆದಿರುವುದು ಭಾರತದ ಭಾಗ್ಯವಲ್ಲವೇ ? ಜವಾಹಿರಲಾಲರು ಸ್ವತಂತ್ರ ಭಾರತದ ಕೇಂದ್ರ ಮಂತ್ರಿಮಂಡಲವನ್ನು ರಚಿಸಿ ನಾಡಸೇವೆ ಗೈಯ್ಯುತ್ತಿರುವರು.

೧೩. **ಚಕ್ರವರ್ತಿ ರಾಜಗೋಪಾಲಾಚಾರಿ** :— ಭಾರತದ ಸ್ವತಂತ್ರ ಸಂಗ್ರಾಮದಲ್ಲಿ ಭಾಗವಹಿಸಿದ ಶ್ರೇಷ್ಠ ಮುತ್ಸದ್ದಿಗಳಲ್ಲಿ ಒಬ್ಬರು. ಇವರು ಅತ್ಯಂತ ಮೇಧಾವಿಗಳೂ, ದೇಶ ಭಕ್ತರೂ ಆಗಿದ್ದಾರೆ. ಕಾಂಗ್ರೆಸ್ಸಿನಲ್ಲಿ ಆಗಾಗ್ಗೆ ತಲೆ ದೋರುತ್ತಿದ್ದ ಅತಿ ಜಟಿಲ ಪ್ರಶ್ನೆಗಳನ್ನು ಬಿಡಿಸಲು ಸ್ವತಃ ಮಹಾತ್ಮಾಜಿ ಇವರ ಸಲಹೆ ಪಡೆಯುತ್ತಿದ್ದರು. ಭಾರತ ವಿಭಜನೆಯ ಮಹತ್ವದ ಪ್ರಶ್ನೆಎದ್ದಾಗ ಇಡೀ ಕಾಂಗ್ರೆಸ್ಸೇ ಅದನ್ನು ವಿರೋಧಿಸಿತ್ತು. ಆದರೆ

ದೂರದರ್ಶಿ ರಾಜಾಜಿ ಭಾರತ ವಿಭಜನೆಯುವಿನಃ ಬೇರೆ ಮಾರ್ಗವಿಲ್ಲವೆಂದು ತಮ್ಮ ನಿಚ್ಚಳ ಮತವನ್ನು ವ್ಯಕ್ತಪಡಿಸಿದರು. ಇದಕ್ಕಾಗಿ ಅವರು ಕಾಂಗ್ರೆಸ್ಸನ್ನೇ ಬಿಡಬೇಕಾಯಿತು, ಹೋದಹೋದಲ್ಲಿ ಅವಹೇಳನವನ್ನು ಸಹಿಸಬೇಕಾಯ್ತು. ಆದರೇನು ಅವರ ಮಾತಿನ ಸತ್ಯತೆಯು ಪ್ರಾತ್ಯಕ್ಷಿಕವಾಗಿಯೇ ಹೋಯಿತು. ಸರಿ ಮತ್ತೆ ಕಾಂಗ್ರೆಸ್ ಸೇರಿದರು. ೧೯೪೭ ರಲ್ಲಿ ಭಾರತ ಸ್ವತಂತ್ರ್ಯವಾಗುತ್ತಲೇ ಬಂಗಾಲದ ಗವ್ಹರ್ನರರಾಗಿ ಕೆಲಸ ಮಾಡಿದರು. ಲಾ. ಮೌಂಟ್ ಬ್ಯಾಟನ್ನರು ಇಂಗ್ಲೆಂಡಿಗೆ ಮರಳಿದುದರಿಂದ ಇವರೇ ಭಾರತದ ಮೊದಲಿನ ಗವ್ಹರ್ನರ್ ಜನರಲ್ಲರಾದರು. ಆ ಮೇಲೆ ಭಾರತ ರಾಜ್ಯಾಧ್ಯಕ್ಷರಾದ ರಾಜೇಂದ್ರ ಪ್ರಸಾದರಿಗೆ ಅಧಿಕಾರ ವಹಿಸಿಕೊಟ್ಟರು. ಇವರು ರಾಜಕಾರಣದಿಂದ ನಿವೃತ್ತರಾಗಬೇಕೆಂದು ಬಯಸಿದರೂ ಭಾರತೀಯ ಮುಖಂಡರು ಇವರನ್ನು ಕೈಬಿಡಲೊಲ್ಲರು. ವಲ್ಲಭಾಯಿಯವರ ಮರಣದಿಂದ ತೆರವಾದ ಗೃಹಮಂತ್ರಿ ಖಾತೆ ಇವರ ಮೇಲೆ ಬಲಾತ್ಕಾರದಿಂದ ಹೇರಲ್ಪಟ್ಟಿತು. ಇದೇ ವರ್ಷ (೧೯೫೧) ನಿವೃತ್ತರಾಗಿ ಮದ್ರಾಸಿಗೆ ತೆರಳಿದರು. ಆಗಲೂ ಇವರಿಗೆ ರಾಜಕಾರಣ ಬಿಡುವುದು ಸಾಧ್ಯವಿಲ್ಲವಾಯ್ತು. ಮದ್ರಾಸ್ ಪ್ರಾಂತದ ಕಾಂಗ್ರೆಸ್ಸಿನಲ್ಲಿ ತಲೆದೋರಿರುವ ಒಡಕನ್ನೂ, ಜನರಿಂದುಂಟಾಗಿರುವ ಅವಿಶ್ವಾಸವನ್ನೂ ಹೊಡೆದೋಡಿಸಲು ಇವರಿಗೇ ಮುಖ್ಯಮಂತ್ರಿಪದ (೧೯೫೨) ಕೊಡಲ್ಪಟ್ಟಿದೆ. ಮದ್ರಾಸದ ಏಕಮಾತ್ರ ಧುರೀಣರಂತಿರುವ ರಾಜಾಜಿ ದೀನ ದರಿದ್ರರ ಸೇವೆಗಾಗಿ ಅವಿಶ್ರಾಂತ ದುಡಿಯುತ್ತಿರುವರು.

೧೪. **ಡಾ. ರಾಜೇಂದ್ರಪ್ರಸಾದ್ :–** ಸಂಯುಕ್ತ ಪ್ರಾಂತಕ್ಕೆ ಜವಾಹರ, ಮದ್ರಾಸಿಗೆ ರಾಜಾಜಿ, ಗಡಿನಾಡಿಗೆ ಖಾನ್‌ಸಾಹೆಬ್, ಗುಜರಾತಿಗೆ ವಲ್ಲಭಾಯಿಯವರಿದ್ದಂತೆ, ಬಿಹಾರಿಗೆ ರಾಜೇನ್ ಬಾಬು–ಏಕೈಕ ನಾಯಕರು. ಶ್ರೀಮತಿ ಸರೋಜಿನಿ ಇವರನ್ನು ಹೀಗೆ ಚಿತ್ರಿಸಿದ್ದಾರೆ :– " ಇವರ ಅಲೌಕಿಕ ವ್ಯಕ್ತಿತ್ವವನ್ನು, ಬಂಗಾರದ ಲೇಖಣಿಯಲ್ಲಿ, ಜೇನುತುಪ್ಪದ ಮಸಿಯಲ್ಲಿ ಬರೆಯಬೇಕು. ಕುಸುಮ ಕೋಮಲ ಹೃದಯ, ಧೀರೋದಾತ್ತವಾದ ನಡತೆ, ನಿಷ್ಕಾಮ ತ್ಯಾಗಶೀಲ ಜೀವನ, ಅಲೌಕಿಕ ಬುದ್ಧಿಮತ್ತೆ–ನಮ್ಮ ನಾಯಕ ವೃಂದದಲ್ಲಿ ವೈಯಕ್ತಿಕವಾಗಿ ಇವರಷ್ಟು ಜನಪ್ರಿಯರಾದವರು ಮತ್ತೊಬ್ಬರಿಲ್ಲ. "

ಕಾಯಸ್ಥ ಕುಲದ ರಾಜೇನ್‌ಬಾಬು ಬಿಹಾರಿನ ಜೆರ್ದಾ ಎಂಬ ಗ್ರಾಮದಲ್ಲಿ ಜನಿಸಿದರು. ಬಾಲ್ಯದಿಂದಲೂ ಇವರ ಓದು ಪ್ರಥಮ ಶ್ರೇಣಿಯದು. ವಿದ್ಯಾಭ್ಯಾಸ ಮುಗಿಸಿ ಮುಝಫರಪೂರದ ಕಾಲೇಜಿನಲ್ಲಿ ಇಂಗ್ಲೀಷ್ ಪ್ರೊಫೆಸರರಾಗಿದ್ದರು. ೧೯೧೬ ರಿಂದ ಪಾಟ್ನಾ ಹೈಕೋರ್ಟಿನಲ್ಲಿ ವಕೀಲರಾದರು. ಅಲ್ಲಿಯೂ ಇವರದು ಪ್ರಥಮ ದರ್ಜೆ. ದೊಡ್ಡ ದೊಡ್ಡ ಪಂಡಿತರು ತಲೆದೂಗುವಂತಹ ಅರ್ಥಪೂರ್ಣ ವಾಗ್ಪಟುತ್ವ, ಗಾಂಭೀರ್ಯ. ೧೯೧೭ ರಲ್ಲಿ ರಾಜೇನ್‌ಬಾಬು ಚಂಪಾರಣ್ಯ ಸತ್ಯಾಗ್ರಹದಲ್ಲಿ ಗಣ್ಯಪಾತ್ರ ವಹಿಸಿ, ಮಹಾತ್ಮರ ನೆಚ್ಚಿನ ಶಿಷ್ಯರಾದರು. ಗಾಂಧೀವ್ರತ ಪಾಲನೆಯಲ್ಲಿ ಇವರಿಗೆ ತುಂಬಾ ಶ್ರದ್ಧೆ, ಅಂತೆಯೇ ಗಾಂಧೀಜಿಯು ಕನಸಿನ ರಾಜ್ಯ ನಿರ್ಮಿಸಲು ಭಾರತ **ರಾಜ ಮುಕುಟವನ್ನು ಧರಿಸಿ** ರಾಷ್ಟ್ರಾಧ್ಯಕ್ಷರಾಗಿರುವರು.

ರಾಜೇನ್‌ಬಾಬು ಇಡೀ ಬಿಹಾರವನ್ನೆ ಕಟ್ಟಿಕೊಂಡು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದರು. ಕಾಂಗ್ರೆಸಿನ ಅತಿ ಸೂಕ್ಷ್ಮ ರಾಜಕೀಯ ಸಮಸ್ಯೆಗಳಿಗೆಲ್ಲಾ ರಾಜೇನ್‌ಬಾಬುವಿನ ಮುದ್ರೆ ಬೇಕೇಬೇಕು. ಏಕೆಂದರೆ ಎಂತಹ ಪ್ರಸಂಗದಲ್ಲಿಯೂ ಉದ್ವೇಗಕ್ಕೆ ತುತ್ತಾಗದೆ ಶಾಂತರಾಗಿ ಸಮಸ್ಯೆಯ ಪರಿಹಾರ ಕಂಡುಹಿಡಿಯುವ ಸಾಮರ್ಥ್ಯ ಇವರಲ್ಲಿದೆ. ಸ್ವತಂತ್ರ ಭಾರತದ ರಾಜ್ಯಘಟನೆಯನ್ನು ರಚಿಸಿದ ಸಭೆಯ ಅಧ್ಯಕ್ಷತೆಯನ್ನು ಇವರೇ ವಹಿಸಿದ್ದರು. ಭಾರತ ಗಣರಾಜ್ಯವೆಂದು ಘೋಷಿಸಲ್ಪಡುತ್ತಲೇ ಇವರೇ ಭಾರತದ ಮೊದಲನೇ ರಾಷ್ಟ್ರಾಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ಇದೇ ವರ್ಷ ನಡೆದ ಚುನಾವಣೆಯಲ್ಲಿಯೂ ಇವರು ಬಹುಮತದಿಂದ **“ರಾಷ್ಟ್ರಾಧ್ಯಕ್ಷರ”** ಜಾಗೆಗೆ ಆರಿಸಿ ಬಂದರು. ಇಂತಹ ಶ್ರೇಷ್ಠ ಸತ್ಪುತ್ರನನ್ನು ಪಡೆದ ಭಾರತ ಮಾತೆ ಧನ್ಯಳಲ್ಲವೇ ?

೧೫. **ಡಾ. ಅಂಬೇಡಕರ್ :—** ಇವರು ದಲಿತ ವರ್ಗದ ಶ್ರೇಷ್ಠ ಸ್ವತಂತ್ರ ಧುರೀಣರು. ಶ್ರೇಷ್ಠ ಕಾಯಿದೇ ಪಂಡಿತರಾದ ಇವರು ದಲಿತ ವರ್ಗದ ಸೇವೆಗಾಗಿ ಅವಿಶ್ರಾಂತ ದುಡಿಯುತ್ತಿರುವರು. ಭಾರತವು ಸ್ವತಂತ್ರವಾದಾಗ (೧೯೪೭) ರಚಿತವಾದ ನೆಹರೂ ಮಂತ್ರಿಮಂಡಲದಲ್ಲಿ ಕಾಯಿದೇ ಮಂತ್ರಿಗಳಾಗಿದ್ದರು. ಭಾರತದ ರಾಜ್ಯಘಟನೆಯನ್ನು ಸಿದ್ಧಗೊಳಿಸಲು ನೇಮಿಸಿದ “ಕರಡು ಸಮಿತಿಯು” ಅಧ್ಯಕ್ಷರಾಗಿದ್ದರು. ದಲಿತ ವರ್ಗದಲ್ಲಿ

ಹುಟ್ಟಿದ ಇವರು ಮೊನ್ನೆಮೊನ್ನೆ ಬೌದ್ಧ ಪಂಥಕ್ಕೆ ಮತಾಂತರ ಹೊಂದಿರುವರು. ನೆಹರೂರವರೊಡನೆ ಮತಭೇದವಾಗಲು ತಮ್ಮ ಮಂತ್ರಿಪದಕ್ಕೆ ರಾಜೀನಾಮೆಯಿತ್ತಿರುವರು.

೧೬. **ಪಂ. ಮದನಮೋಹನ ಮಾಲವಿಯ :—** ಇವರು ಶಿಕ್ಷಣ, ಸಾಹಿತ್ಯ, ವೇದಾಂತ, ರಾಜಕೀಯ, ಸಮಾಜ ಸುಧಾರಣೆ ಹೀಗೆ ಅನಂತ ಮುಖದಿಂದ ದೇಶಸೇವೆಗೈದರು.

ಮಾಲವಿಯರವರು ೧೮೬೨ ರಲ್ಲಿ ಅಲಹಾಬಾದಿನಲ್ಲಿ ಪ್ರಸಿದ್ಧ ಪಂಡಿತರ ಮನೆತನದಲ್ಲಿ ಜನಿಸಿದರು. ಎಂ. ಎ. ಓದುತ್ತಿದ್ದಾಗ ಅರ್ಧಕ್ಕೇ ನಿಲ್ಲಿಸಿ ಶಾಲೆಯ ಉಪಾಧ್ಯಾಯರಾದರು. ಇವರ ನೆಚ್ಚಿನ ಗೆಳೆಯರೊಬ್ಬರು ಇವರನ್ನು "ಹಿಂದುಸ್ತಾನ" ಎಂಬ ದೈನಿಕ ಪತ್ರಿಕೆಯ ಸಂಪಾದಕರನ್ನಾಗಿ ಮಾಡಿದರು. ಪತ್ರಿಕೋದ್ಯಮದಲ್ಲಿ ಇವರ ಪ್ರತಿಭೆ ಹೊರಹೊಮ್ಮಿತು. ಮುಂದೆ ವಕೀಲಿ ಪರೀಕ್ಷೆಯಲ್ಲಿ ಮೊದಲನೆ ವರ್ಗದಲ್ಲಿ ಉತ್ತೀರ್ಣರಾದರು. ರಾಜಕೀಯ ಕರೆ ಬಂದಿತು, ಸರಿ ಅದಕ್ಕೂ ಓಗೊಟ್ಟರು. ಮಾಲವಿಯರವರಿಗೆ ಹಿಂದೂ ಧರ್ಮದಲ್ಲಿ ಆಸಕ್ತಿ ಬಹಳ. ಅಂತೆಯೇ ಧರ್ಮಶಾಸ್ತ್ರವನ್ನು ಆಳವಾಗಿ ಅಭ್ಯಾಸಿಸಿ, ಹಿಂದೂಧರ್ಮದಲ್ಲಿ ಕೊಳಚೆಯಂತೆ ರೂಢಿಯಲ್ಲಿದ್ದ ಅಸ್ಪೃಶ್ಯತಾ, ಸ್ತ್ರೀದಾಸ್ಯ ಇವುಗಳ ನಿವಾರಣೆಗಾಗಿ ಹೋರಾಡಿದರು. ಭಾರತೀಯರಿಗೆ ಯೋಗ್ಯ ಶಿಕ್ಷಣ ಕೊಡುವುದಕ್ಕಾಗಿ ೧ ಕೋಟಿ ರೂಪಾಯಿಗಳನ್ನು ಕೂಡಿಸಿ ಕಾಶಿಯಲ್ಲಿ "ಹಿಂದು ವಿದ್ಯಾಪೀಠ" ವನ್ನು ಸ್ಥಾಪಿಸಿದರು. ೧೮೮೬ ರಲ್ಲಿ ಕಾಂಗ್ರೆಸ್ ಸೇರಿದರು. ಕಾಂಗ್ರೆಸ್ಸಿನೊಂದಿಗೆ ಅನೇಕ ಬಾರಿ ಮತಭೇದವಾಗುತ್ತಿತ್ತು. ಆದರೂ ತಮ್ಮ ಜೀವವಿರುವರೆಗೆ ರಾಷ್ಟ್ರದ ಕರೆಗೆ ಓಗೊಡದೆ ಎಂದೂ ಹಿಂದುಳಿಯಲಿಲ್ಲ.

೧೭. **ಲಾರ್ಡ್ ಮೌಂಟ್ ಬ್ಯಾಟನ್ :—** ಭಾರತೀಯರಿಗೆ ಸ್ವಾಯತ್ತತೆಯನ್ನೀಯುವ ಕಾರ್ಯದಲ್ಲಿ ಇವರ ಪಾತ್ರ ಅತಿ ಮುಖ್ಯವಾದದು. ಬಿಡಿಸಲಾಗದ ತೊಡಕಿನಂತಿದ್ದ ಭಾರತ ವಿಭಜನೆಯ ಪ್ರಶ್ನೆಗೆ ಹಿಂದೂ ಧುರೀಣರ ಮನವಲಿಸಲು ಇವರು ಮಾಡಿದ ಸೇವೆ ಅಮೋಘವಾದುದು. ಪಾಕಿಸ್ತಾನ ನಿರ್ಮಿತಿಯ ಯೋಜನೆಯನ್ನು ಸಿದ್ಧಗೊಳಿಸಿ, ಅದಕ್ಕೆ ಇಂಗ್ಲೆಂಡಿನ ಪಾರ್ಲಿಮೆಂಟಿನ ಮನ್ನಣೆ ದೊರಕಿಸಿದರು. ಸ್ವತಂತ್ರ

ಭಾರತದ ಗವ್ಹರ್ನರ್ ಜನರಲ್ಲರಾಗಿ ನಿಸ್ಪೃಹತೆಯಿಂದ ದುಡಿದು ಭಾರತೀಯರ ಪ್ರೀತ್ಯಾದರಗಳನ್ನು ಸಂಪಾದಿಸಿದ್ದರು.

೧೮. **ಡಾ. ರಾಧಾಕೃಷ್ಣನ್ :—** ಜಗತ್ಪ್ರಸಿದ್ಧ ತತ್ವಜ್ಞಾನಿಗಳೂ, ಶಿಕ್ಷಣಶಾಸ್ತ್ರಪಟುಗಳೂ ಆದ ರಾಧಾಕೃಷ್ಣನ್ನರು ಮದ್ರಾಸ್ ಪ್ರಾಂತದವರು. ಬಡ ಕುಟುಂಬದಲ್ಲಿ ಹುಟ್ಟಿ ಸ್ವಕಷ್ಟದಿಂದ ಓದಿ ವಿದ್ವನ್ಮಣಿಗಳೆನಿಸಿದ್ದಾರೆ. ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ರಷ್ಯಾದ ರಾಯಭಾರತ್ವದಿಂದ ನಿವೃತ್ತರಾದ್ದರಿಂದ, ಮೊನ್ನೆ ಮೊನ್ನೆಯವರೆಗೂ ಇವರು ರಷ್ಯಾದಲ್ಲಿ ಭಾರತದ ರಾಯಭಾರಿಗಳಾಗಿದ್ದರು. ಇದೇ ವರ್ಷ ಹೊಸ ಚುನಾವಣೆಯ ನಂತರ, ಉಪರಾಷ್ಟ್ರಾಧ್ಯಕ್ಷ ಪದ ಇವರಿಗೆ ದೊರೆತಿದೆ. ತಾ. ೧೩-೫-೫೨ ರ ದಿನ ಇವರು ತಮ್ಮ ಅಧಿಕಾರ ವಹಿಸಿಕೊಂಡರು.

೧೯. **ಅಬ್ದುಲ್ ಕಲಾಂ ಆಜಾದ್ :—** ಇವರು ಮಕ್ಕಾದಲ್ಲಿ ಹುಟ್ಟಿದರು. ಇವರ ವಿದ್ಯಾಭ್ಯಾಸ ಕಾಯರೋವಿನಲ್ಲಿ ಆಯಿತು. ಚಿಕ್ಕಂದಿನಲ್ಲಿಯೇ ಪಾರಶೀ, ಅರಬೀ ಭಾಷೆಗಳಲ್ಲಿ ಪ್ರಭುತ್ವಗಳಿಸಿದರು. ರಾಷ್ಟ್ರೀಯ ವೃತ್ತಿಯವರೂ, ಸದಾಚಾರಿಗಳೂ ಆದ ಆಜಾದರು, ಇರಾಣ, ಇರಾಕ, ಇಜಿಪ್ತ ದೇಶಗಳನ್ನು ಸಂಚರಿಸಿ, ಜನರ ನಡೆ, ನುಡಿ, ಜೀವನಕ್ರಮಗಳನ್ನು ಅರಿತಿದ್ದಾರೆ. ಇಸ್ಲಾಂಧರ್ಮದಲ್ಲಿ ನಿಷ್ಣಾತರಾದರೂ, ಜಾತೀಯತೆ ರಾಜಕೀಯದಲ್ಲಿ ಸೇರಕೂಡದು ಎಂಬುದೇ ಇವರ ಮತ. “ಅಲ್ ಹಿಲಾಲ್” ಎಂಬ ಉರ್ದೂ ವೃತ್ತಪತ್ರಿಕೆಯನ್ನು ಕಲ್ಕತ್ತೆಯಲ್ಲಿ ಹೊರಡಿಸಿ, ಮುಸಲ್ಮಾನರಲ್ಲಿ ರಾಷ್ಟ್ರೀಯ ಭಾವನೆ ಹರಡುವಂತೆ ಮಾಡಿದರು. ಅಜಾದರು ಕುರಾನನ್ನು ಉರ್ದೂವಿಗೆ ಪರಿವರ್ತಿಸಿದ್ದಾರೆ. ಆಜಾದರು ಭಾರತದ ಸ್ವಾತಂತ್ರ್ಯ ಅಂದೋಲನದಲ್ಲಿ ವಹಿಸಿದ ಪಾತ್ರ ಮುಖ್ಯವಾದುದು. ಗಾಂಧೀತತ್ವದಲ್ಲಿ ಇವರ ಶ್ರದ್ಧೆ ಬಹಳ. ೧೯೪೦ ರಿಂದ ಸತತ ೫ ವರ್ಷ ಕಾಂಗ್ರೆಸಿನ ಅಧ್ಯಕ್ಷಪದ ಇವರಿಗೆ ದೊರೆತಿತ್ತು. ಭಾರತ ಸ್ವತಂತ್ರವಾದಂದಿನಿಂದ ನೆಹರೂ ಮಂತ್ರಿಮಂಡಲದಲ್ಲಿ ಶಿಕ್ಷಣ ಖಾತೆಯ ಮಂತ್ರಿಗಳಾಗಿದ್ದರು. ೧೪-೫-೫೨ ಕ್ಕೆ ರಾಷ್ಟ್ರಾಧ್ಯಕ್ಷರಿಂದ ನೇಮಿಸಲ್ಪಟ್ಟ ಹೊಸಮಂತ್ರಿಮಂಡಲದಲ್ಲಿ ಶಿಕ್ಷಣ, ನೈಸರ್ಗಿಕ ಸಂಪತ್ತು, ವೈಜ್ಞಾನಿಕ ಸಂಶೋಧನಖಾತೆಗಳ ಮಂತ್ರಿಯಾಗಿದ್ದಾರೆ.

೨೦. **ಚಂದ್ರಶೇಖರ ವೆಂಕಟ ರಾಮನ್** :— ಇವರು ಕ್ರಿ. ಶ. ೧೮೮೮ ರ ನವ್ಹೆಂಬರ್ ೭ ನೇ ದಿನ ತ್ರಿಚಿನಾಪಳ್ಳಿಯಲ್ಲಿ ಹುಟ್ಟಿದರು. ಇವರ ತಂದೆ ಚಂದ್ರಶೇಖರ ಐಯ್ಯರರು, ತ್ರಿಚಿನಾಪಳ್ಳಿಯ ಕಾಲೇಜಿನಲ್ಲಿ ಶಿಕ್ಷಕರಾಗಿದ್ದರು. ಚಂದ್ರಶೇಖರ ಐಯ್ಯರರು ೧೮೯೨ ರಲ್ಲಿ ತ್ರಿಚಿನಾಪಳ್ಳಿಯನ್ನು ಬಿಟ್ಟು, ತೆಲಂಗ ಪ್ರಾಂತದಲ್ಲಿಯ ವಿಶಾಖ ಪಟ್ಟಣದ ಕಾಲೇಜಿನಲ್ಲಿ ಲೆಕ್ಚರರ ಹುದ್ದೆಗೆ ಸೇರಿದರು. ಆದ್ದರಿಂದ ತಮಿಳುನಾಡಿನ ರಾಮನ್ನರ ಶಿಕ್ಷಣ, ತೆಲಗು ನಾಡಿನಲ್ಲಾಯಿತು. ರಾಮನ್ನರ ಅಗಾಧ ಬುದ್ಧಿಶಕ್ತಿ ಚಿಕ್ಕಂದಿನಿಂದಲೂ ಕಂಡುಬರುತ್ತಿತ್ತು. ಇವರು ತಮ್ಮ ೧೨ ನೇ ವಯಸ್ಸಿನಲ್ಲಿಯೇ ಮ್ಯಾಟ್ರಿಕ್ ಪಾಸಾದರು. ಮ್ಯಾಟ್ರಿಕ್ ಓದುವಾಗ್ಗೆ ಇವರು ಜಾಯಿಲೆಬಿದ್ದುದರಿಂದ ಪರೀಕ್ಷೆಯಲ್ಲಿ ಉಚ್ಚತರಗತಿಯಲ್ಲಿ ತೇರ್ಗಡೆ ಹೊಂದುವುದು ಸಾಧ್ಯವಾಗಲಿಲ್ಲ. ಆದರೂ ಇವರು ಇಂಗ್ಲೀಷ್ ಭಾಷೆ ಮತ್ತು ಶಾಸ್ತ್ರೀಯವಿಷಯದಲ್ಲಿ ಪ್ರಭುತ್ವ ಸಂಪಾದಿಸಿದ್ದರು. ಎರಡು ವರ್ಷಗಳ ತರುವಾಯ ಫರ್ಸ್ಟ್ ಆರ್ಟ್ಸ್ ಪರೀಕ್ಷೆಯಲ್ಲಿ ಉಚ್ಚ ಕ್ರಮಾಂಕದಲ್ಲಿ ಉತ್ತೀರ್ಣರಾದರು. ಮುಂದೆ ಮದ್ರಾಸಿನ ವಿಶ್ವವಿದ್ಯಾಲಯವನ್ನು ಸೇರಿದರು. ಅಲ್ಲಿಯ ಪ್ರಾಧ್ಯಾಪಕರು ರಾಮನ್ನರ ಅಗಾಧ ಜ್ಞಾನವನ್ನೂ, ಜ್ಞಾನಾರ್ಜನೆಯ ಉತ್ಸುಕತೆಯನ್ನೂ ಕಂಡು ಬೆರಗಾದರು. ರಾಮನ್ನರು ೧೯೦೪ ರಲ್ಲಿ ಇಡೀ ವಿಶ್ವವಿದ್ಯಾನಿಲಯಕ್ಕೇ ಮೊದಲನೇಯವರಾಗಿ ಉತ್ತೀರ್ಣಹೊಂದಿ ಸುವರ್ಣಪದಕವನ್ನು ದೊರಕಿಸಿದರು. ೧೯೦೭ ರಲ್ಲಿ ಎಂ. ಎ. ಪರೀಕ್ಷೆಯಲ್ಲಿ ಮೊದಲನೇವರ್ಗದಲ್ಲಿ ಪಾಸಾದರು. ಮುಂದೆ ರಾಮನ್ನರಿಗೆ ಜೀವನೋಪಾಯ ಕಂಡುಕೊಳ್ಳುವುದು ಅವಶ್ಯವೆನಿಸಿತು. ಆಗಿನ ಶ್ರೇಷ್ಠ ಹುದ್ದೆಗಳೆಲ್ಲಾ ಬಿಳಿದೊರೆಗಳಿಗೆ ಮುಡಿಪಾಗಿದ್ದವು. ಆದ್ದರಿಂದ ರಾಮನ್ "ಹಣಕಾಶಿನ ಪರೀಕ್ಷೆಗೆ" ಕುಳಿತು ಅಲ್ಲಿಯೂ ೧ ನೇ ವರ್ಗದಲ್ಲಿ ಪಾಸಾದರು. ಮುಂದೆ ೧೦ ವರ್ಷಗಳವರೆಗೆ ಭಾರತ ಸರಕಾರದ ಹಣಕಾಸಿನ ಶಾಖೆಯಲ್ಲಿ ಅಧಿಕಾರಿಗಳಾಗಿ ಕಲ್ಕತ್ತಾ, ರಂಗೂನ, ನಾಗಪೂರಗಳಲ್ಲಿ ದುಡಿದರು. ರಾಮನ್ನರ ಪ್ರಿಯ ವಿಷಯಗಳೆಂದರೆ ಗಣಿತಶಾಸ್ತ್ರ ಮತ್ತು ಪದಾರ್ಥವಿಜ್ಞಾನ ( ಭೌತಶಾಸ್ತ್ರ ), ಇವುಗಳಲ್ಲಿ ಸಂಶೋಧನೆ ನಡೆಯಿಸಬೇಕೆಂಬ ಕುತೂಹಲ ಬಹಳ. ತಮ್ಮ ನೌಕರಿಯಲ್ಲಿ ಮೇಲಿಂದ ಮೇಲೆ ಬದಲಾವಣೆಗಳಾಗಲು, ಸಂಶೋಧನಾ ಕಾರ್ಯಕ್ಕೆ ಅಡ್ಡಿ ಉಂಟಾಗಹತ್ತಿತು. ಕೊನೆಗೆ ತಮ್ಮ ಹುದ್ದೆಗೆ ಶರಣು ಹೊಡೆದು, ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ೧೯೧೭ ರಲ್ಲಿ ಪ್ರೊಫೆಸರರಾದರು.

ಇದರಿಂದ ತಮ್ಮ ಸಂಶೋಧನಕಾರ್ಯಕ್ಕೆ ಬಹಳ ಅನುಕೂಲವಾಯಿತು. ೧೯೨೧ ರಲ್ಲಿ ರಾಮನ್ನರು ಯುರೋಪಿನ ಸಂಚಾರ ಕೈಕೊಂಡರು. ಮೆಡಿಟರೇನಿಯಸ್ ಸಮುದ್ರದಲ್ಲಿ ಪ್ರವಾಸ ಮಾಡುತ್ತಿದ್ದಾಗ ಇವರಿಗೊಂದು ಹೊಸವಿಷಯ ಹೊಳೆಯಿತು. ಅದೇ ಇವರನ್ನು ಹೊಸ ಸಂಶೋಧನೆಗೆ ಹಚ್ಚಿ "**ನೋಬೆಲ್ ಪಾರಿತೋಷಕವನ್ನು**" ದೊರಕಿಸಿತೆನ್ನಬಹುದು. ರಾಮನ್ನರನ್ನು ಜಗದ್ವಿಖ್ಯಾತಗೊಳಿಸಿದ ಹೊಸ ವಿಷಯವೆಂದರೆ "ಸಮುದ್ರದ ನೀರು ನೀಲೀ ಬಣ್ಣವಾಗಲು ಕಾರಣವೇನು?" ಎಂಬುದನ್ನು ಕಂಡು ಹಿಡಿದುದು. ಈ ಸಂಶೋಧನೆಯಿಂದ ವಿಜ್ಞಾನ ಜಗತ್ತಿಗೆ ಹೊಸ ಹೊಸ ಸಂಶೋಧನೆ ನಡೆಸಲು ಅಪೂರ್ವ ಸಹಾಯವಾಯಿತು. ಆದ್ದರಿಂದಲೇ ೧೯೩೦ ರಲ್ಲಿ ಇವರಿಗೆ ನೋಬಲ್ ಪಾರಿತೋಷಕ ದೊರೆತಿದೆ. ರಾಮನ್ನರ ವಿದ್ವತ್ತನ್ನು ಮೆಚ್ಚಿ ಭಾರತದ ಮತ್ತು ವಿದೇಶದ ಅನೇಕ ವಿಶ್ವವಿದ್ಯಾನಿಲಯಗಳ ಗೌರವ ಪದವಿಗಳು ದೊರೆತಿವೆ.

೨೧. **ಸುಭಾಸಚಂದ್ರಭೋಸ್ :**—ನೇತಾಜಿ ಎಂದೊಡನೆ ಭಾರತದ ಎದೆ ಉಬ್ಬುವುದು! "ಮುಯ್ಯಿಗೆ ಮುಯ್ಯಿ" ತೀರಿಸುವ ಸ್ವಭಾವ ಸುಭಾಸರದು. ಬಂಗಾಲದ ಪ್ರಸಿದ್ಧ ಜಮೀನ್ದಾರರ ಮನೆತನದಲ್ಲಿ ಹುಟ್ಟಿದರು. ಸುಭಾಸರು ಕಾಲೇಜಿನಲ್ಲಿ ಓದುತ್ತಿದ್ದಾಗ್ಯೆ ಓಟನ್ನ ಎಂಬ ಪ್ರೊಫೆಸರರ ವಿರುದ್ಧ ಸಂಪು ಹೂಡಲು ವಿದ್ಯಾರ್ಥಿಗಳನ್ನು ಸಂಘಟಿಸಿದ್ದರು. ಈ ಅಪರಾಧಕ್ಕಾಗಿ ಕಾಲೇಜಿನಿಂದ (ಡಿಬಾರ್) ಹೊರದೂಡಲ್ಪಟ್ಟಿದ್ದರು. ಮುಂದೆ ಅಶುತೋಷ್ ಮುಕರ್ಜಿಯವರ ಮಧ್ಯಸ್ತಿಕೆಯಿಂದ ಕಾಲೇಜಿನಲ್ಲಿ ಪ್ರವೇಶ ದೊರೆಯಿತು. ಬಿ. ಎ. ಪರೀಕ್ಷೆಯಲ್ಲಿ ಪಾಸಾಗಿ, ಐ. ಸಿ. ಎಸ್. ಓದಲು ಇಂಗ್ಲೆಂಡಿಗೆ ಹೋದರು. ಐ. ಸಿ. ಎಸ್. ಪಾಸಾಗಿ ಭಾರತಕ್ಕೆ ಮರಳಿದ ನಂತರ ಭಾರತ ರಾಜಕೀಯ ಚಳುವಳಿಯಲ್ಲಿ ಭಾಗವಹಿಸಿದರು. ಇದಕ್ಕಾಗಿ ಅನೇಕ ಬಾರಿ ಸೆರೆಮನೆ ಕಂಡರು. ಪ್ರತಿಸಲವೂ ದೇಶಾಭಿಮಾನ, ಸ್ವಾಭಿಮಾನಗಳು ಇವರಲ್ಲಿ ಕುದುರುತ್ತಿದ್ದುವು. ಸುಭಾಸಚಂದ್ರ ಭೋಸರಿಗೆ ೧೯೩೮–೩೯ರಲ್ಲಿ ರಾಷ್ಟ್ರೀಯ ಸಭೆಯ ಅಧ್ಯಕ್ಷಸ್ಥಾನ ದೊರೆತಿತ್ತು. ಕಾಂಗ್ರೆಸ್ ಅಧ್ಯಕ್ಷತೆಯ ಚುನಾವಣೆಯಲ್ಲಿ, ಮಹಾತ್ಮಾಗಾಂಧಿಯವರ ಹುರಿಯಾಳು ಪಟ್ಟಾಭಿ ಸೀತಾರಾಮಯ್ಯನವರನ್ನು ಸೋಲಿಸಿ ವೀರಭಟರೆನಿಸಿಕೊಂಡರು. ೨ನೇ ಜಾ. ಮ. ಯುದ್ಧದಲ್ಲಿ ಬ್ರಿಟಿಷ್ ಸರಕಾರವು

ಇವರನ್ನು ಅವರ ಮನೆಯಲ್ಲಿಯೇ ಸೆರೆಯಿಟ್ಟರು. ಸ್ವಾತಂತ್ರವೀರ ಸುಭಾಸ್ ಬಾಬು ಉಪಾಯದಿಂದ ತಪ್ಪಿಸಿಕೊಂಡು ಅಫ್ಘಾನಿಸ್ತಾನದ ಮಾರ್ಗವಾಗಿ ಜರ್ಮನಿಗೆ ಹೋದರು. ಅಲ್ಲಿಂದ ಜಪಾನೀಯರ ಹತ್ತಿರ ನೆರವಿನಿಂದ "ಭಾರತ ವಿಮೋಚನಾ ದಲ''ವನ್ನು ಕಟ್ಟಿ ಬ್ರಿಟಿಷ್ ಸರಕಾರದ ವಿರುದ್ಧ ಯುದ್ಧ ಸಾರಿದರು. ಬ್ರಹ್ಮದೇಶದ ಮಾರ್ಗವಾಗಿ ಭಾರತದ ಕಡೆ ನುಗ್ಗುತ್ತಾ ಭಾರತದ ಗಡಿಯುವರೆಗೂ ಒಂದೊಂದೇ ಪ್ರದೇಶವನ್ನು ಗೆಲ್ಲಹತ್ತಿದರು. ಸುಭಾಸ್ ಸೈನ್ಯ ಜಪಾನೀ ಶಸ್ತ್ರ ಪೂರೈಕೆಯನ್ನೇ ಅವಲಂಬಿಸಿತ್ತು. ಜಪಾನೀಯರು ವಚನದಂತೆ ಸಾಕಷ್ಟು ಪೂರೈಕೆ ಕೊಡಲಿಲ್ಲವಾದ್ದರಿಂದ ಬ್ರಿಟಿಷರ ಕೈಮೇಲಾಯಿತು. ಸುಭಾಸ್‌ಬಾಬುವಿನ ಸೈನ್ಯ ಒಂದೊಂದೇ ಪ್ರದೇಶವನ್ನು ಕಳೆದುಕೊಂಡಿತು. ೧೯೪೫ರಲ್ಲಿ ಸುಭಾಸ್‌ಬಾಬು ಜಪಾನಿಗೆ ಪ್ರಯಾಣಿಸುತ್ತಿದ್ದಾಗ ಅವರ ವಿಮಾನಕ್ಕೆ ಅಪಘಾತವುಂಟಾಗಿ ಮರಣ ಹೊಂದಿದರೆಂದು ತಿಳಿದು ಬಂದಿದೆ. ಸುಭಾಸ್ ಜೀವಂತ ಇರಲಿ ಬಿಡಲಿ ಅವರ ವೀರವಾಣಿ ಭಾರತೀಯರನ್ನು ಹುರಿದುಂಬಿಸಿ ಸ್ವಾತಂತ್ರ್ಯದ ಕನಸನ್ನು ಕೈಗೂಡಿಸಿತು.

೨೨. **ಸರ್. ಎಂ. ವಿಶ್ವೇಶ್ವರಯ್ಯ :—** ಭಾರತದ ಮಹಾಶಿಲ್ಪಿ ವಿಶ್ವೇಶ್ವರಯ್ಯನವರು ಕ್ರಿ. ಶ. ೧೮೬೧ರಲ್ಲಿ ಕೋಲಾರ ಜಿಲ್ಲೆಯ ಚಿಕ್ಕ ಬಳ್ಳಾಪುರದಲ್ಲಿ ಜನಿಸಿದರು. ತಮ್ಮ ೨೦ ನೇ ವಯಸ್ಸಿನಲ್ಲಿಯೇ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಿಂದ ಬಿ. ಎ. ಪಾಸಾದರು. ಇವರ ಬುದ್ಧಿಶಕ್ತಿಯನ್ನು ಮೆಚ್ಚಿ ಮೈಸೂರು ಸರಕಾರ ಇವರಿಗೆ ಶಿಷ್ಯವೃತ್ತಿ ವೇತನವನ್ನಿತ್ತಿತು. ಇದರ ಸಹಾಯದಿಂದ ಇಂಜನಿಯರಿಂಗ್ ಪರೀಕ್ಷೆಯಲ್ಲಿ ಪಾಸಾಗಿ ಪುಣೆ, ಖಾನದೇಶಗಳಲ್ಲಿ ಅ. ಇಂಜಿನಿಯರರಾಗಿ ಕೆಲಸಮಾಡಿ ಮೆಚ್ಚಿಗೆಯನ್ನು ಪಡೆದರು. ಔದ್ಯೋಗಿ ಉನ್ನತಿಯನ್ನು ಸಾಧಿಸಲು ಅವಿಶ್ರಾಂತದುಡಿದು ೧೯೦೯ ರಲ್ಲಿ ಮುಂಬೈ ಸರಕಾರದ ನೌಕರಿಯಿಂದ ನಿವೃತ್ತರಾದರು.

ಮುಂದೆ ಮೈಸೂರು ಸರ್ಕಾರದಲ್ಲಿ ಮುಖ್ಯ ಇಂಜಿನೀಯರರಾಗಿ ಕೆಲಸಮಾಡಿದರು. ಇವರ ಸೇವೆ ಮೆಚ್ಚುಗೆಯಾದುದರಿಂದ ಮೈಸೂರಿನ ಅರಸರು ಇವರನ್ನು ಮುಖ್ಯ ಮಂತ್ರಿಗಳನ್ನಾಗಿ ಆರಿಸಿದರು. ವಿಶ್ವೇಶ್ವರಯ್ಯನವರ ಅಂದಿನ ಪರಿಶ್ರಮದ ಪರಿಣಾಮವಾಗಿ ಇಂದು ಮೈಸೂರು ಔದ್ಯೋಗೀಕರಣದಲ್ಲಿ ಮುಂದುವರಿದಿದೆ. ಮೈಸೂರ ವಿಶ್ವವಿದ್ಯಾನಿಲಯ,

ಕನ್ನಂಬಾಡಿ ಆಣೆಕಟ್ಟು ( ಕೃಷ್ಣರಾಜಸಾಗರ ), ಶಿವನ ಸಮುದ್ರದ ವಿದ್ಯುಚ್ಛಕ್ತಿ ಮುಂತಾದ ಅನೇಕ ಯೋಜನೆಗಳನ್ನು ಕಾರ್ಯಾಚರಣೆಯಲ್ಲಿ ತಂದು, ಮೈಸೂರಿನ ಪ್ರಗತಿಯನ್ನು ಸಾಧಿಸಿದರು.

ಈಗಂತೂ ಜಗತ್ತಿನ ಶ್ರೇಷ್ಠ ಇಂಜಿನೀಯರರಲ್ಲಿ ಒಬ್ಬರೆಂದು ಗಣಿಸಲ್ಪಟ್ಟಿರುವರು. ಭಾರತ ಸರಕಾರವು ದೊಡ್ಡ ದೊಡ್ಡ ಔದ್ಯೋಗಿಕ ಯೋಜನೆಗಳಲ್ಲಿ ಇವರ ಸಲಹೆಯನ್ನು ಪಡೆಯುತ್ತಿದೆ.

೨೩. **ಶ್ರೀಮತಿ ಸರೋಜಿನಿ ನಾಯುಡು:—** ಭಾರತದ "ಕೋಕಿಲೆ" ಎಂದು ಹೆಸರಾದ ಸರೋಜಿನಿಯವರು ೧೮೭೯ ರಲ್ಲಿ ಹೈದರಾಬಾದಿನಲ್ಲಿ ಜನಿಸಿದರು. ಚಿಕ್ಕಂದಿನಿಂದಲೂ ಕಾವ್ಯಾಭಿರುಚಿ. ಒಮ್ಮೆ ಶಿಕ್ಷಕರು ಒಂದು ಬೀಜಗಣಿತವನ್ನು ಬಿಡಿಸಲು ತಿಳಿಸಿದರಂತೆ. ಗಣಿತ ಬಾರದ್ದರಿಂದ ಬೇಸರಗೊಂಡು ನಾಲ್ಕು ಸಾಲು ಕವಿತೆ ರಚಿಸಿದರಂತೆ. ಅವರು ಯಾವುದನ್ನೇ ಬರೆಯಲಿ, ಯಾರೊಡನೆಯೇ ಮಾತಾಡಲಿ ಎಲ್ಲವೂ ರಸಮಯ. ೧೨ ವರ್ಷದ ಬಾಲಿಕೆ ಇರುವಾಗಲೇ ಮ್ಯಾಟ್ರಿಕ್ ಪಾಸಾದರು. ೧೮೯೫ರಿಂದ ೧೮೯೮ ರ ವರೆಗೆ ಇಂಗ್ಲೆಂಡಿನಲ್ಲಿ ಶಿಕ್ಷಣಪಡೆದು ಹಿಂತಿರುಗಿದರು. ಇವರಿಗೆ ಇಂಗ್ಲೀಷಿನಲ್ಲಿ ಪ್ರಭುತ್ವ ಬಹಳ ಆದ್ದರಿಂದ ಇಂಗ್ಲೀಷಿನಲ್ಲಿ ಅನೇಕ ಸುಂದರ ಕವಿತೆಗಳನ್ನು ಬರೆದಿರುವರು.

ಇಂಗ್ಲೆಂಡಿನಿಂದ ಮರಳಿದ ನಂತರ ದೀನ, ದರಿದ್ರರ ಸೇವೆಗಾಗಿ ರಾಜಕೀಯ ರಂಗವನ್ನು ಪ್ರವೇಶಿಸಿ ಅನೇಕ ಬಾರಿ ಸೆರೆಮನೆ ಕಂಡರು. ೧೯೨೫ ರಲ್ಲಿ ಇವರಿಗೆ ಕಾಂಗ್ರೆಸ್ಸಿನ ಅಧ್ಯಕ್ಷಪದ ದೊರೆತಿತ್ತು.

ಭಾರತ ಸ್ವತಂತ್ರವಾದ ಮೇಲೆ ಸಂಯುಕ್ತ ಪ್ರಾಂತದ ಮೊದಲನೇ ಗವ್ಹರ್ನರಳಾಗುವ ಸುಯೋಗ ದೊರಕಿತು. ಭಾರತೀಯ ಮಹಿಳೆಗೆ ಇಂತಹ ಉನ್ನತಾಧಿಕಾರ ದೊರೆತುದು ಇದೇ ಮೊದಲಸಲ. ಗವ್ಹರ್ನರಳಾಗಿ ಸೇವೆಗಯ್ಯುತ್ತಿದ್ದಾಗಲೇ ೧೯೪೯ ರಲ್ಲಿ ಹೃದಯಕ್ರಿಯೆ ನಿಂತು ಮರಣ ಹೊಂದಿದರು.

೨೪. **ಫಿರೋಜಷಾ ಮೆಹತಾ:—** ಮುಂಬೈ ಮುನಿಸೀ ಪಾಲಿಟಿಯ ಅನಭಿಷಕ್ತ ಅರಸರೆಂದು ಪ್ರಸಿದ್ಧರಾಗಿದ್ದ ಮೆಹತಾರು ೧೮೪೫ ರಲ್ಲಿ ಪ್ರಸಿದ್ಧ ಪಾರ್ಸೀ ಮನೆತನದಲ್ಲಿ ಜನಿಸಿದರು. ೧೮೬೪ ರಲ್ಲಿ ಎಲ್ಫಿನ್‌ಸ್ಟನ್ ಕಾಲೇಜಿನಿಂದ ಬಿ. ಎ. ಪದವೀದರರಾದರು. ೬ ತಿಂಗಳನಂತರ ಎಂ. ಎ.

ಪದವಿಯನ್ನು ಪಡೆದರು. ಮುಂದೆ ಇಂಗ್ಲೆಂಡಿಗೆ ತೆರಳಿ ಬಾರಿಸ್ಟರರಾಗಿ ೧೮೬೮ ರಲ್ಲಿ ಭಾರತಕ್ಕೆ ಹಿಂತಿರುಗಿದರು. ಕೆಲ ದಿನ ವಕೀಲರಾಗಿ ಕೆಲಸ ಮಾಡಿ ಪ್ರಸಿದ್ಧ ವಕೀಲರೆಂದು ಹೆಸರುಗಳಿಸಿದರು. ಫಿರೋಜ ಷಹರು ಇಂಗ್ಲೆಂಡಿನಲ್ಲಿದ್ದಾಗ್ಗೆ ದಾದಾಭಾಯಿ ನವರೋಜಿ ಮುಂತಾದ ಧುರೀಣರ ಪರಿಚಯವಾಗಿತ್ತು. ಅವರು ಭಾರತದಲ್ಲಿ ನಡೆಯಿಸಿದ ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸಹತ್ತಿದರು. ೩೫ ವರ್ಷಗಳವರೆಗೆ ಮುಂಬೈ ಕಾರ್ಪೋರೇಷನ್ನಿನ ಸದಸ್ಯರಾಗಿದ್ದರು. ಇವರಿಗೆ ೩ ಬಾರಿ ಕಾರ್ಪೋರೇಷನ್ನಿನ ಅಧ್ಯಕ್ಷಸ್ಥಾನವೂ ದೊರೆತಿತ್ತು. ಆ ಕಾಲದಲ್ಲಿ ಇವರು ಮುಂಬಯಿಯ ಅಭ್ಯುದಯಕ್ಕಾಗಿ ಕೈಕೊಂಡ ಸೇವೆ ಚಿರಸ್ಮರಣೀಯವಿದೆ. ಮೆಹತಾರು ಮುಂಬೈ ಕ್ರಾನಿಕಲ್ ಪತ್ರಿಕೆಯ ಸಂಪಾದಕರಾಗಿದ್ದರು. ಇವರು ಶಿಕ್ಷಣ ಕ್ಷೇತ್ರದಲ್ಲಿಯೂ ಸಾಕಷ್ಟು ದುಡಿದಿದ್ದಾರೆ. ೧೮೯೦ ರಲ್ಲಿ ಇವರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು.

೨೫. **ರವೀಂದ್ರನಾಥ ಟಾಗೂರ್** :— ಕವಿವರ್ಯ ರವೀಂದ್ರನಾಥರು ೧೮೬೧ರಲ್ಲಿ ಬಂಗಾಲದ ಪ್ರಸಿದ್ಧ ಜಮೀನ್ದಾರರ ಮನೆತನದಲ್ಲಿ ಜನಿಸಿದರು. ಚಿಕ್ಕಂದಿನಿಂದಲೂ ಇವರಿಗೆ ಓದಿನ ಕಡೆ ಲಕ್ಷವಿರಲಿಲ್ಲ. ನಿಸರ್ಗದ ಸ್ವತಂತ್ರವಾತಾವರಣದಲ್ಲಿ, ಬನಸಿರಿಯ ಮಧ್ಯದಲ್ಲಿ ಮೆರೆಯಬೇಕೆಂಬುದೇ ಇವರ ಬಯಕೆ. ಇವರ ಮನೆತನದವರೆಲ್ಲರೂ ಪ್ರಸಿದ್ಧ ವಿವಿಧ ಕಲಾವಂತರಾಗಿದ್ದರು. ಕಲ್ಕತ್ತೆಯಲ್ಲಿ ರವೀಂದ್ರರನ್ನು ಶಾಲೆಗೆ ಹಾಕಿದರು. ಅಲ್ಲಿ ಓದಿನಕಡೆ ಲಕ್ಷ ಹರಿಯಲಿಲ್ಲ. ಮನೆಯಲ್ಲಿ ಓದಿಸುವ ವ್ಯವಸ್ಥೆಯಾಯಿತು. ಇಲ್ಲಿಯೂ ಅದೇ ಹಾಡೇ. ಮುಂದೆ ಇಂಗ್ಲೆಂಡಿಗೆ ಕಳಿಸಿದರು, ಅಲ್ಲಯೂ ಓದಿನ ಬಗ್ಗೆ ಸಾಕಷ್ಟು ಪ್ರಗತಿ ಕಂಡು ಬರಲಿಲ್ಲ. ಆದರೆ ನಿಸರ್ಗದತ್ತವಾಗಿದ್ದ ಇವರ ಕವಿತಾ ಶಕ್ತಿ ಕುದುರಲು ಅನುಕೂಲವಾಯಿತು. ಇಂಗ್ಲೀಷಿನಲ್ಲಿ ಸರಳ ಸುಲಭ ಶಬ್ದಗಳಲ್ಲಿ ಕವಿತೆಯನ್ನು ರಚಿಸಿ ಹೆಸರುಗಳಿಸಿದರು. ಚಿಕ್ಕಂದಿನಿಂದಲೂ ಬಂಗಾಲಿಯಲ್ಲಿ ಅನೇಕ ಕವಿತೆ, ನಾಟಕಗಳನ್ನು ಬರೆದು ಪತ್ರಿಕೆಗಳಲ್ಲಿ ಬೇರೆ ಹೆಸರಿನಿಂದ ಪ್ರಕಟಿಸುತ್ತಿದ್ದರು. ೧೯೧೩ರಲ್ಲಿ ಟಾಗೂರರು ಬರೆದ **"ಗೀತಾಂಜಲಿಗೆ"** **ನೋಬಲ್ ಪಾರಿತೋಷಕ** ದೊರಕಿತು. ಕವಿತೆಗಾಗಿ ಜಾಗತಿಕ ಬಹುಮಾನವನ್ನು ದೊರಕಿಸಿದ ಭಾರತೀಯರಲ್ಲಿ ಇವರು ಮೊದಲಿಗರು. ರವೀಂದ್ರರು ಅನೇಕ ಬಂಗಾಲೀ

ಪುಸ್ತಕಗಳು ಇಂಗ್ಲೀಷ್ ಭಾಷೆಯಲ್ಲಿ ಪರಿವರ್ತಿಸಲ್ಪಟ್ಟಿವೆ. ರವೀಂದ್ರರು, ಭಾರತೀಯರಿಗೆ ಇಂದು ಕೊಡಲ್ಪಡುತ್ತಿರುವ ಶಿಕ್ಷಣವು ತಪ್ಪು ಮಾರ್ಗದ್ದಾಗಿದೆ ಎಂಬ ಮತದವರು. ಆದ್ದರಿಂದಲೇ ನಿಸರ್ಗದ ಶಾಂತ, ನಿರ್ಮಲ, ಸ್ವತಂತ್ರ ವಾತಾವರಣದಲ್ಲಿ ವಿವಿಧ ಕಲೆಗಳನ್ನು ಕಲಿಸಲು "**ವಿಶ್ವಭಾರತಿ**" ಎಂಬ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ರವೀಂದ್ರರು ಕೆಲಕಾಲ ರಾಜಕಾರಣದಲ್ಲಿಯೂ ಪ್ರವೇಶಿಸಿದ್ದರು. ಆದರೆ ಅಲ್ಲಿ ಸ್ವಾರ್ಥ, ಜಾತೀಯತೆ ವೈಷಮ್ಯಗಳು ನೆಲೆಯೂರಿರುವುದನ್ನು ಕಂಡು ರಾಜಕಾರಣವನ್ನು ತ್ಯಜಿಸಿದರು.

೨೬. **ಅರವಿಂದ ಘೋಷ್**ರವರ ಜನನ ಕ್ರಿ. ಶ. ೧೮೭೨ರಲ್ಲಾಯಿತು. ಅರವಿಂದರು ೭ ವರ್ಷದ ಬಾಲಕರಿರುವಾಗಲೇ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಕಳಿಸಲ್ಪಟ್ಟರು. ೧೮೮೫ರಲ್ಲಿ ಲಂಡನಿನಲ್ಲಿ ಶಾಲೆಗೆ ಸೇರಿದರು. ೧೮೯೦ರಲ್ಲಿ ಶಿಷ್ಯ ವೃತ್ತಿಯನ್ನು ದೊರಕಿಸಿ ಕೇಂಬ್ರಿಜ್ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿದರು. ಮುಂದೆ ಐ. ಸಿ. ಎಸ್. ಪರೀಕ್ಷೆಯಲ್ಲಿಯೂ ತೇರ್ಗಡೆಯಾದರು. ಆದರೆ ಇವರು ಕುದುರೆ ಸವಾರಿಮಾಡಲು ನಿರಾಕರಿಸಿದ್ದರಿಂದ, ಭಾರತ ಸರ್ಕಾರದ ಹುದ್ದೆಗೆ ಅನರ್ಹರಾದರು. ಆದರೂ ಇಷ್ಟರಲ್ಲಿಯೇ ಅರವಿಂದರಿಗೂ ಬಡೋದೆಯ ಮಹಾರಾಜರಿಗೂ ಪರಿಚಯವಾಗಿತ್ತು. ಮಹಾರಾಜರು ಅರವಿಂದರನ್ನು ತಮ್ಮ ಸಂಸ್ಥಾನದಲ್ಲಿ ನೌಕರಿಗೆ ಆಹ್ವಾನಿಸಿದರು. ಆದ್ದರಿಂದ ೧೮೯೩ರಲ್ಲಿ ಅರವಿಂದರು ಭಾರತಕ್ಕೆ ಹಿಂತಿರುಗಿ, ಬಡೋದೆಯಲ್ಲಿ ನೌಕರಿಗೆ ನಿಂತರು. ಮುಂದೆ ಬಡೋದಾ ಕಾಲೇಜಿನಲ್ಲಿ ವೈಸ್ ಪ್ರಿನ್ಸಿಪಾಲರಾಗಿ ಕೆಲಸಮಾಡಿದರು. ಅರವಿಂದರು ಭಾರತಕ್ಕೆ ಬಂದ ನಂತರ ಕೆಲ ದೇಶೀ ಭಾಷೆಗಳನ್ನೂ, ಸಂಸ್ಕೃತವನ್ನೂ ಕಲಿತರು. ೧೯೦೬ರಲ್ಲಿ ಬಂಗಾಲಕ್ಕೆ ಹೋಗಿ ರಾಜಕೀಯದಲ್ಲಿ ಪ್ರವೇಶಿಸಿದರು. ಇವರು ಉಗ್ರಮತವಾದಿ ಲೋಕಮಾನ್ಯ ತಿಳಕರ ಪಕ್ಷಕ್ಕೆ ಸೇರಿದವರು. ೧೯೦೭ರಲ್ಲಿ ಹೊರಟ "ವಂದೇ ಮಾತರಮ್" ಪತ್ರಿಕೆಯ ಸಂಪಾದಕರಾಗಿದ್ದರು. ಸರಕಾರವು ಇವರನ್ನು ರಾಜಕೀಯ ಚಳುವಳಿಯಲ್ಲಿ ಭಾಗವಹಿಸಿದ ಅಪರಾಧಕ್ಕಾಗಿ ಸೆರೆಮನೆಗೆ ಅಟ್ಟಿತು. ಆಗಲೇ ಅರವಿಂದರ ಲಕ್ಷ್ಯ ಯೋಗಾಭ್ಯಾಸ, ಅಧ್ಯಾತ್ಮ ಜೀವನದ ಕಡೆ ಹರಿಯಿತು. ೧೯೧೦ರಲ್ಲಿ ಪಾಂಡಿಚೇರಿಗೆ ತಲೆಮರೆಸಿಕೊಂಡು ಹೋದರು. ಅಂದಿನಿಂದ ೧೯೫೦ರ ವರೆಗೆ ಯೋಗಾಭ್ಯಾಸದಲ್ಲಿಯೇ ಕಾಲಕಳೆದರು.

೧೯೧೪ರಿಂದ ೧೯೨೧ರ ವರೆಗೆ ಹೊರಡುತ್ತಿದ್ದ "ಆರ್ಯ ಪತ್ರಿಕೆ"ಯಲ್ಲಿಯೂ ಇವರ ಲೇಖನಗಳು ಬರುತ್ತಿದ್ದುವು. ಇವರು ಯಾರ ಹೊಗಳಿಕೆಯನ್ನೂ ಬಯಸಲಿಲ್ಲ, ಆದ್ದರಿಂದಲೇ ಗುಪ್ತಜೀವನ ಸಾಗಿಸುತ್ತಿದ್ದರು. ಇವರು ಅಧ್ಯಾತ್ಮ ವಿಷಯದ ಮೇಲೆ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಅವುಗಳಿಂದಲೇ ಇವರು ಜಗದ್ವಿಖ್ಯಾತರಾದರು. ಭಾರತದಾದ್ಯಂತ ಜನರು ಇವರ ದರ್ಶನಕ್ಕಾಗಿ ಹೋಗುತ್ತಿದ್ದರು. ಅನೇಕರು ಇವರ ಆಶ್ರಮದಲ್ಲಿ ಶಿಷ್ಯರಾಗಿ ಉಳಿದಿದ್ದಾರೆ. ಹೀಗೆ ಕ್ರಾಂತಿಜೀವನದಿಂದ ಯೋಗಿಜೀವನಕ್ಕೆ ತಿರುಗಿದ ಅರವಿಂದರು ೧೯೫೦ರಲ್ಲಿ ದೈವಾಧೀನರಾದರು. ಆದರೇನು ಅವರ ಅಘಾದ ಅಧ್ಯಾತ್ಮ ಜ್ಞಾನ ಇಂದಿಗೂ ಜನಜ್ಞನಿತವಾಗಿ ಅಚ್ಚಳಿಯದೇ ಉಳಿದಿದೆ.

# ಕೆಲ ಮಹತ್ವದ ಪ್ರಶ್ನೋತ್ತರಗಳು.

**ವಿಕ್ಟೋರಿಯಾ ಮಹಾರಾಣಿಯವರ ಪ್ರಕಟನೆಯ ಕೆಲ ಕಾರಣಗಳನ್ನು ಹೇಳಿ, ಅದರಿಂದ ಯಾವ ಯಾವ ಬದಲಾವಣೆಗಳಾದುವೆಂಬುದನ್ನು ತಿಳಿಸಿರಿ.**

೧೮೫೭ರ ಬಂಡಾಯದಿಂದ ಬ್ರಿಟಿಷ್ ಸರಕಾರಕ್ಕೆ ಭಾರತೀಯರ ಜಾಗೃತಿಯ ಅರಿವು ಉಂಟಾಯಿತು. ಆದ್ದರಿಂದ ಕಂಪನಿಯ ಆಡಳಿತಾಧಿಕಾರವನ್ನೆಲ್ಲಾ ಇಂಗ್ಲೆಂಡಿನ ಪಾರ್ಲಿಮೆಂಟು ತನ್ನ ಕಡೆ ತೆಗೆದುಕೊಂಡು ಹಿಂದುಸ್ತಾನದ ಮೇಲೆ ರಾಣಿಯವರ ಸಾರ್ವಭೌಮಾಧಿಕಾರವನ್ನು ಸಾರಿದರು. ಹಿಂದುಸ್ತಾನದ ಆಡಳಿತೆ ನಡೆಸುತ್ತಿದ್ದ ಕಂಪನಿಯ ಬೋರ್ಡ್ ಆಫ್ ಕಂಟ್ರೋಲನ್ನು ತೆಗೆದು, ಆಡಳಿತೆಗೆ ಭಾರತ ಮಂತ್ರಿಯನ್ನು ಇಂಗ್ಲೆಂಡಿನ ಸರಕಾರ ನೇಮಿಸಿತು. ಭಾರತ ಮಂತ್ರಿಯ ನೆರವಿಗೆ ೧೫ ಜನರ **"ಇಂಡಿಯಾ ಕೌನ್ಸಿಲ್"** ಎಂಬ ಮಂಡಲವನ್ನು ರಚಿಸಿತು. ಮೇಲಿನ ಮಂತ್ರಿ ಮತ್ತು ಕೌನ್ಸಿಲ್ ಇಂಗ್ಲೆಂಡಿನಲ್ಲಿಯೇ ಇದ್ದುದರಿಂದ, ಭಾರತದ ಆಡಳಿತೆಯನ್ನು ಪ್ರತ್ಯಕ್ಷ ನಡೆಸಲು "ವೈಸರಾಯ್"ನನ್ನು ನೇಮಿಸಿದರು. ವೈಸರಾಯನು ಭಾರತ ಮಂತ್ರಿಗೆ ಹೊಣೆಗಾರನಿದ್ದು ಅವನ ಆದೇಶದಂತೆ ಕಾರ್ಯಾಚರಣೆ ಮಾಡಬೇಕಾಗುತ್ತಿದ್ದಿತು. ಲಾರ್ಡ್ ಕ್ಯಾನಿಂಗನೇ ಭಾರತದ ಮೊದಲನೇ ವೈಸರಾಯನಾದನು.

ಮುಂದೆ ಹಿಂದುಸ್ತಾನದಲ್ಲಿಯ ಸಂತಪ್ತ ವಾತಾವರಣವನ್ನು ಶಮನಗೊಳಿಸಿ, ಆಡಳಿತೆಯ ಭದ್ರತೆ ಹೆಚ್ಚಿಸಲು ರಾಣಿಯವರು ಕೆಳಗಿನಂತೆ ಪ್ರಕಟಣೆ ಹೊರಡಿಸಿದರು:

(೧) ಕಂಪನಿಯವರು ಹಿಂದೀ ಸಂಸ್ಥಾನಿಕರೊಂದಿಗೆ ಮಾಡಿಕೊಂಡ ಒಪ್ಪಂದಗಳೆಲ್ಲಾ ಎಂದಿನಂತೆ ಆಚರಣೆಯಲ್ಲಿರುವವು. (೨) ಸಂಸ್ಥಾನಿಕರು ತಮ್ಮಿಷ್ಟದಂತೆ ದತ್ತಕ ತೆಗೆದುಕೊಂಡು ಸರಕಾರಕ್ಕೆ ತಿಳಿಸಬೇಕು. ಈವರೆಗೂ ಕೊಡಮಾಡಿದ ಉಂಬಳಿಗಳೆಲ್ಲಾ ವಂಶಪಾರಂಪರ್ಯವಾಗಿ ನಡೆಯುವವು. (೩) ಹಿಂದೀಯರು ಸರಕಾರದ ನಿರ್ಬಂಧವಿಲ್ಲದೆ ಸ್ವತಂತ್ರ್ಯವಾಗಿ ತಮ್ಮ ಧರ್ಮ ಆಚರಣೆ ಇಟ್ಟುಕೊಳ್ಳಬಹುದು. (೪) ಜಾತಿ ಭೇದವನ್ನೆಣಿಸದೆ ಸಮರ್ಥರಾದವರಿಗೆ ಸರಕಾರೀ ನೌಕರಿಗಳು ಸಿಗುವುವು. (೫) ೧೮೫೭ರ ಬಂಡಿನಲ್ಲಿದ್ದವರು ಮುಂದೆ ಶಾಂತರೀತಿಯಲ್ಲಿ ನಡೆಯುವ ಆಶ್ವಾಸನ ಕೊಟ್ಟರೆ, ಅವರೆಲ್ಲರನ್ನು ಕ್ಷಮಿಸಲಾಗುವುದು ಎಂಬ ಮುಖ್ಯ ವಿಷಯಗಳು "ರಾಣಿಯವರ ಜಾಹಿರನಾಮೆಯಲ್ಲಿದ್ದುವು.

**ಕೆಳಗಿನವುಗಳ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ :—**

(೧) ಮಾರ್ಲೋ-ಮಿಂಟೋ ಸುಧಾರಣೆ. (೨) ಮೌಂಟ-ಫರ್ಡ (೩) ೧೯೩೫ರ ಹೊಸಕಟ್ಟಳೆ.

**ಉತ್ತರ :—೧. ಮಾರ್ಲೆ ಮಿಂಟೋ ಸುಧಾರಣೆ:**—೧೯೦೯ರಲ್ಲಿ ಇಂಗ್ಲೆಂಡಿನ ಪಾರ್ಲಿಮೆಂಟು ಭಾರತದ ಬಗ್ಗೆ ಶಾಸನ ಒಂದನ್ನು ತಯಾರಿಸಿತು. ಈ ಶಾಸನ ನಿರ್ಮಾಣದಲ್ಲಿ ಆಗಿನ ಭಾರತ ಮಂತ್ರಿ ಮಾರ್ಲೆ ಮತ್ತು ವೈಸರಾಯರ್ ಮಿಂಟೋರವರ ಕೈಯಿದ್ದುದರಿಂದ ಇದಕ್ಕೆ ಮೇಲಿನ ಹೆಸರು ಬಂದಿದೆ. ಈ ಶಾಸನದಿಂದ ವೈಸರಾಯ ಮತ್ತು ಪ್ರಾಂತಿಕ ಕಾಯಿದೇ ಮಂಡಲಗಳ ಸದಸ್ಯರ ಸಂಖ್ಯೆ ಬೆಳೆಯಿತು. ಸದಸ್ಯರು ಶಾಸನ ಸಭೆಯಲ್ಲಿ ಗೊತ್ತುವಳಿಯನ್ನು ತರುವ ಮತ್ತು ಆ ಬಗ್ಗೆ ಪ್ರಶ್ನೆಗಳನ್ನು ಕೇಳುವ ಅಧಿಕಾರ ದೊರೆಯಿತು. ವೈಸರಾಯ ಮತ್ತು ಗವರ್ನರರ ಕಾರ್ಯಕಾರೀ ಮಂಡಲಗಳಲ್ಲಿ ಒಬ್ಬೊಬ್ಬ ಹಿಂದೀ ಸದಸ್ಯನಿರಬೇಕೆಂದು ಗೊತ್ತಾಯಿತು. ಭಾರತ ಮಂತ್ರಿಯ ಸಲಹೆಗಾಗಿ ಇಬ್ಬರು ಸದಸ್ಯರು ನೇಮಿಸಲ್ಪಟ್ಟರು. ಮುಸಲ್ಮಾನ, ಶೀಖ, ಜಮೀನದಾರ ಮೊದಲಾದವರಿಗೆ ಪ್ರತ್ಯೇಕ ಮತದಾರ ಸಂಘಗಳು ಕೊಡಲ್ಪಟ್ಟುವು.

**(೨) ಮಾಂಟ್‌ಫರ್ಡ್ ಸುಧಾರಣೆಗಳು :**— ಈ ಸುಧಾರಣೆಯು ಕರಡು ೧೯೧೯ರಲ್ಲಿ ತಯಾರಿಸಲ್ಪಟ್ಟು ೧೯೨೧ರಲ್ಲಿ ಆಚರಣೆಗೆ ಬಂದಿತು.

ಇದರಿಂದಲೂ ಜಾತೀಯತೆಯ ವಿಷವೃಕ್ಷ ಮೊಳಕೆಯೊಡೆದು ಬೆಳೆಯಿತು. ಏಕೆಂದರೆ ಈ ಹೊಸ ಶಾಸನದಿಂದ ಕೇಂದ್ರ ಮತ್ತು ಪ್ರಾಂತಿಕ ಶಾಸನ ಸಭೆಗಳನ್ನು ಲೋಕಸಭೆ ಮತ್ತು ಧನಿಕಸಭೆ ಎಂದು ಎರಡು ಭಾಗ ಮಾಡಲಾಯಿತು. ಈ ಸಭೆಗಳಲ್ಲಿ ಚುನಾಯಿತ ಮತ್ತು ನಾಮಕರಣ ಮಾಡಿದ ಸದಸ್ಯರು ಇರುತ್ತಿದ್ದರು.

ಶೀಖ, ಮುಸಲ್ಮಾನ, ಯುರೋಪಿಯನ್, ಕ್ರಿಶ್ಚಿಯನ್, ಪಾರಶೀ ಮುಂತಾದವರಿಗೆ ಈ ಸಭೆಗಳಲ್ಲಿ ಕೆಲ ಸ್ಥಳಗಳು ಕಾಯ್ದಿಡಲ್ಪಟ್ಟವು. ಈ ಸಭೆಗಳು ಮಾಡಿದ ಶಾಸನಗಳನ್ನು ಆಚರಣೆಯಲ್ಲಿ ತರುವ ನಿರ್ಣಯಾಧಿಕಾರ ವೈಸರಾಯನ ಕಡೆಗೇ ಇದ್ದಿತು. ಆಡಳಿತೆಯಲ್ಲಿಯೂ ೨ ಭಾಗವಾಯಿತು. ಸಂರಕ್ಷಣ, ವಿದೇಶ ಸಂಬಂಧ, ಸಾರಿಗೆ, ಪೋಸ್ಟ್ ಖಾತೆ, ನಾಣ್ಯ ಚಲಾವಣೆಗಳು ಇವು ಕೇಂದ್ರ ಸರಕಾರದ ವಶದಲ್ಲಿದ್ದುವು. ಪ್ರಾಂತಿಕ ಸರಕಾರಕ್ಕೆ ಕಂದಾಯ, ಸ್ಥಾನಿಕ ಸ್ವರಾಜ್ಯಸಂಸ್ಥೆ, ಪೋಲೀಸ್ ಮತ್ತು ತುರಂಗ, ಆರೋಗ್ಯ, ಒಕ್ಕಲುತನ, ಶಿಕ್ಷಣ, ಅರಣ್ಯ, ಸಾರ್ವಜನಿಕ ಕಟ್ಟಡ ಮತ್ತು ಅಬಕಾರೀ ಖಾತೆಗಳು ಕೊಡಲ್ಪಟ್ಟವು.

**(೩) ೧೯೩೫ರ ಹೊಸಕಟ್ಟಳೆ :**— ಇದಕ್ಕೆ ಹೊಣೆಗಾರ ರಾಜ್ಯ ಪದ್ಧತಿ ಅಥವಾ ಸಂಯುಕ್ತರಾಜ್ಯಪದ್ಧತಿ ಎನ್ನುವರು. ಈ ಕಟ್ಟಳೆಯಿಂದ ಹಿಂದುಸ್ಥಾನಕ್ಕೆ ಒಂದೇ ಕಾಯಿದೆ ಅನ್ವಯಿಸಲ್ಪಟ್ಟಂತಾಯ್ತು. ಪ್ರಾಂತಿಕ ಸ್ವಾಯತ್ತತೆ ದೊರೆತು ಎಲ್ಲಾ ಖಾತೆಗಳೂ ಲೋಕನಿಯುಕ್ತ ಮಂತ್ರಿ ಮಂಡಲದ ಕಡೆಗೇ ಕೊಡಲ್ಪಟ್ಟವು. ದೊಡ್ಡ ಪ್ರಾಂತಗಳಿಗೆ ಮೇಲ್ಮನೆ, ಕೆಳಮನೆ ಎಂಬ ೨ ಶಾಸನ ಮಂಡಲಗಳು ಕೊಡಲ್ಪಟ್ಟವು. ಅವಶ್ಯ ಪ್ರಸಂಗದಲ್ಲಿ (ಗವ್ಹರ್ನರನ ವಿಶೇಷಾಧಿಕಾರ) ಹೊರತು ಉಳಿದ ಪ್ರಸಂಗಗಳಲ್ಲಿ ಮಂತ್ರಿ ಮಂಡಲಗಳೇ ತಮ್ಮ ಆಡಳಿತೆಗೆ ಕಾಯಿದೆ ಮಾಡುವ ಅಧಿಕಾರ ದೊರೆಯಿತು. ಮೊದಲು ಈ ಹೊಣೆಹೊರಲು ಯಾವ ರಾಜಕೀಯ ಪಕ್ಷಗಳೂ ಮುಂಬರಲಿಲ್ಲ. ಕೊನೆಗೆ ೧೯೩೭ರಲ್ಲಿ ಕಾಂಗ್ರೆಸ್ಸು ಈ ಕಾಯಿದೆಯಂತೆ ೮ ಪ್ರಾಂತಗಳಲ್ಲಿ ಮಂತ್ರಿ ಮಂಡಲ ರಚಿಸಿತು.

# ಪೌರನೀತಿ

## ಭಾರತದ ಆಡಳಿತೆಯ ರೂಪರೇಷೆ ಕೊಡಿರಿ.

ಭಾರತವನ್ನು ಆಡಳಿತೆಯ ಅನುಕೂಲಕ್ಕಾಗಿ **ಅ, ಬ, ಕ, ಡ,** ಎಂಬ ನಾಲ್ಕು ರಾಜಕೀಯ ವಿಭಾಗಮಾಡಿ ಹಂಚಲಾಗಿದೆ. ಈ ನಾಲ್ಕು ವಿಭಾಗಗಳು ಕೂಡಿ ಒಕ್ಕೂಟ ಭಾರತವೆಂದು ಹೆಸರು. ಈ ಒಕ್ಕೂಟದ ವರಿಷ್ಠ ಅಧಿಕಾರಿ ರಾಷ್ಟ್ರಾಧ್ಯಕ್ಷ. ಅವನ ಕೈಕೆಳಗೆ ಉಪರಾಷ್ಟ್ರಾಧ್ಯಕ್ಷ ಇರುವನು. ಈ **ಅ**, ಬ, ಕ, **ಡ**, ರಾಜಕೀಯ ವಿಭಾಗಗಳ ಆಡಳಿತೆಯಲ್ಲಿ ೧. ಕಾರ್ಯಾಂಗ, ೨. ಶಾಸನಾಂಗ, ೩. ನ್ಯಾಯಾಂಗ ಎಂಬ ಮೂರು ವಿಭಾಗಮಾಡಲಾಗಿದೆ.

**ಕಾರ್ಯಾಂಗ :**—ಒಕ್ಕೂಟ ಸರಕಾರದ ಕಾರ್ಯಾಂಗದಲ್ಲಿ ಲೋಕ ನಿಯುಕ್ತ ಮುಖ್ಯಮಂತ್ರಿ ಮತ್ತು ಅವನ ಮಂತ್ರಿಮಂಡಲ, ರಾಷ್ಟ್ರಾಧ್ಯಕ್ಷ ನಿಂದ ನೇಮಿಸಲ್ಪಟ್ಟಿರುವುದು. ಈ ಮಂತ್ರಿಗಳು ಬೇರೆ ಬೇರೆ ಖಾತೆಗಳನ್ನು ವಹಿಸಿಕೊಂಡು ಭಾರತದ ಸರ್ವತೋಮುಖ ಏಳ್ಗೆ ಮತ್ತು ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ರಾಷ್ಟ್ರಾಧ್ಯಕ್ಷನಿಗೆ ಸಹಾಯಮಾಡುವದು. ಈ ಮಂತ್ರಿ ಗಳಿಗೆ ಉಪಮಂತ್ರಿಗಳೂ, ಕಾರ್ಯದರ್ಶಿಗಳೂ ಇರುವರು. ಇವರೆಲ್ಲರೂ ಸರಕಾರೀ ಕೆಲಸಮಾಡುವ ಸ್ಥಳಕ್ಕೆ ಸೆಕ್ರೆಟರಿಯೇಟ್ ಎನ್ನುವರು. ಕೇಂದ್ರ ಮಂತ್ರಿಮಂಡಲ ದಿಲ್ಲಿಯಲ್ಲಿರುವುದು.

(**ಅ**) ರಾಜಕೀಯ ವಿಭಾಗದಲ್ಲಿ, ೧. ಮದ್ರಾಸ್. ೨. ಉ. ಪ್ರದೇಶ, ೩. ಮಧ್ಯ ಪ್ರದೇಶ, ೪. ಮುಂಬಯಿ, ೫. ಬಿಹಾರ, ೬. ಆಸಾಮು, ೭. ಪಂಜಾಬ, ೮. ಓಡಿಸಾ, ೯. ಬಂಗಾಲ ಪ್ರಾಂತಗಳಿವೆ. ಈ ಪ್ರಾಂತ ಗಳ ಮುಖ್ಯಾಧಿಕಾರಿ ಗವ್ಹರ್ನರನು ಒಕ್ಕೂಟ ಭಾರತದ ರಾಷ್ಟ್ರಾಧ್ಯಕ್ಷನಿಂದ ನೇಮಿಸಲ್ಪಟ್ಟಿರುವನು. ಈ ಗವ್ಹರ್ನರನು ತನ್ನ ಅಧಿಕಾರ ಕ್ಷೇತ್ರದಲ್ಲಿ ಜನರ ಉನ್ನತಿ ಮತ್ತು ಭದ್ರತೆಗಾಗಿ ದುಡಿಯುವನು. ಪ್ರಾಂತಗಳಿಗೂ ಕೇಂದ್ರ ದಂತೆ ಒಂದು ಲೋಕನಿಯುಕ್ತ ಮಂತ್ರಿಮಂಡಲ ಮತ್ತು ಸೆಕ್ರೆಟರಿಯಟ್ ಇರುವುದು. ಮಂತ್ರಿಗಳಲ್ಲಿ ವಿವಿಧ ಖಾತೆಗಳು ಹಂಚಲ್ಪಟ್ಟಿರುತ್ತವೆ. ಈ ರಾಜಕೀಯ ವಿಭಾಗಗಳನ್ನೆಲ್ಲಾ ಜಿಲ್ಲೆ, ತಾಲೂಕು, ಊರುಗಳೆಂದು ವಿಭಾಗಿಸ ಲಾಗಿರುವುದು. ಈ ವಿಭಾಗಗಳಿಗೆ. ಅನುಕ್ರಮವಾಗಿ ಕಲೆಕ್ಟರ್, ಮಾಮ ಲೇದಾರ್, ಪಾಟೀಲ್ ಮುಂತಾದ ಅಧಿಕಾರಿಗಳಿರುವರು.

ಕಾರ್ಯಾಂಗದವರು ಆಡಳಿತೆಯ ಅನುಕೂಲತೆಗಾಗಿ ಹೊಸಹೊಸ ಕಾಯಿದೆಗಳನ್ನು ತಯಾರಿಸಿ ಶಾಸನಾಂಗದಲ್ಲಿ ಅವುಗಳಿಗೆ ಒಪ್ಪಿಗೆ ಪಡೆದು ರಾಷ್ಟ್ರಾಧ್ಯಕ್ಷನ ಸಹಿಯಾದನಂತರ ಆಚರಣೆಯಲ್ಲಿ ತರಬಹುದು. ಕಾರ್ಯಾಂಗದ ಈ ಶಾಸನಾಧಿಕಾರದಲ್ಲಿ ೩ ವಿಭಾಗಮಾಡಲ್ಪಟ್ಟಿವೆ ೧. ಒಕ್ಕೂಟಯಾದಿ, ೨. ಪ್ರಾಂತ (ರಾಜ್ಯ)ಯಾದಿ, ೩. ಸಾಮೂಹಿಕಯಾದಿ.

೧. **ಒಕ್ಕೂಟ ಯಾದಿಯಲ್ಲಿ**:— ರಾಷ್ಟ್ರದ ಭದ್ರತೆ ಮತ್ತು ಏಳಿಗೆಗೆ ಅವಶ್ಯವಾದ ಮಹತ್ವದ ೯೭ ವಿಷಯಗಳಿವೆ. ಅವುಗಳ ಬಗ್ಗೆ ಕೇಂದ್ರ ಸರಕಾರವೇ ಶಾಸನಗಳನ್ನು ಮಾಡುವುದು. ಉದಾ:- ಸೈನ್ಯ, ವಿದೇಶ ಸಂಬಂಧ, ರಾಷ್ಟ್ರದ ಗುಪ್ತ ಪೋಲೀಸ್ ಖಾತೆ ,ಆಯುಧಗಳು ಮತ್ತು ಕಾರಖಾನೆಗಳು, ದಂಡಿನಠಾಣ್ಯಗಳು, ಯುದ್ಧ-ಶಾಂತಿ-ಒಪ್ಪಂದಗಳು, ಅಣುಬಾಂಬು ಮತ್ತು ಅವುಗಳ ತಯಾರಿಕೆಯ ಸಾಮುಗ್ರಿಗಳು, ರೈಲ್ವೇ, ಪೋಸ್ಟ್ ಮತ್ತು ಟೆಲಿಗ್ರಾಫ್, ನಾಗರೀಕತೆ, ಮೂಲ ಭೂತ ಹಕ್ಕುಗಳು, ಹಣಕಾಸಿ ವಿನಿಮಯದರ ಮತ್ತು ತಯಾರಿಕೆ, ವಿದೇಶಕ್ಕೆ ಹೋಗಲು ಅಪ್ಪಣೆಚೀಟಿ, ಜನಗಣತಿ, ಚುನಾವಣೆ ಇತ್ಯಾದಿ ಇನ್ನೂ ಅನೇಕ ವಿಷಯಗಳಿವೆ.

೨. **ರಾಜ್ಯ (ಪ್ರಾಂತ) ಯಾದಿ (ಪಟ್ಟಿ)**:— ಈ ಬಗ್ಗೆ ಪ್ರಾಂತದ ಮಂತ್ರಿಮಂಡಲ ಮಸೂದೆಯನ್ನು ತಯಾರಿಸಿ, ಶಾಸನಾಂಗದ ಒಪ್ಪಿಗೆ ಪಡೆದು ಗವ್ಹರ್ನರನ ಸಹಿಯಾದನಂತರ ಮಸೂದೆಗಳನ್ನು ಶಾಸನಗಳ ರೂಪದಲ್ಲಿ ಆಚರಣೆಯಲ್ಲಿ ತರುವುದು. ಪ್ರಾಂತಯಾದಿಯಲ್ಲಿ ೬೬ ವಿಷಯಗಳು ಒಳಪಟ್ಟಿವೆ. ಉದಾ:- ಪೋಲೀಸ್, ಜೇಲುಗಳು, ಸ್ಥಾನಿಕ ಸ್ವರಾಜ್ಯಸಂಸ್ಥೆಗಳು, ವಾಚನಾಲಯಗಳು, ಸಾರ್ವಜನಿಕ ರಕ್ಷಣೆ, ಜನನ ಮರಣಗಳ ವಿವರ, ಸ್ಮಶಾನಗಳು, ಮೋಟಾರು ಸಾರಿಗೆ, ಶಿಕ್ಷಣ, ಮನರಂಜಕ ಕಗಗಳು, ಭೂಮಿಯ ಒಡೆತನ, ಆಹಾರ, ಪೂರೈಕೆ, ಪಶು ಸಂಗೋಪನೆ, ಮೀನುಗಾರಿಕೆ, ನೀರಿನ ಪೂರೈಕೆ, ವಿದ್ಯುಚ್ಛಕ್ತಿ, ವ್ಯಾಪಾರೀ, ಹಿತ ಸಂರಕ್ಷಣೆ, ಒಕ್ಕಲತನದ ಹಿತರಕ್ಷಣೆ, ಇತ್ಯಾದಿ ಒಟ್ಟು ೬೬ ವಿಷಯಗಳಿವೆ.

ಪ್ರಾಂತ ( ರಾಜ್ಯ ) ಮಂತ್ರಿಮಂಡಲವು ಉಪಮಂತ್ರಿ, ಕಾರ್ಯದರ್ಶಿಗಳ ಮುಖಾಂತರ ಸೆಕ್ರೆಟರಿಯಟ್ಟನಲ್ಲಿ ಕಾರ್ಯಾಚರಣೆ ಮಾಡುವರು.

ಸೆಕ್ರೆಟರಿಯಟ್ಟಿನಿಂದ ಆಡಳಿತೆಯ ವ್ಯವಸ್ಥೆಯ ಬಗ್ಗೆ ಜಿಲ್ಲೆಯ ಕಲೆಕ್ಟನಿರ ನಿಗೂ, ಕಲೆಕ್ಟರನಿಂದ ತಾಲೂಕಿನ ಮಾಮಲೇದಾರರಿಗೂ, ಮಾಮಲೇದಾರ ನಿಂದ ಪಾಟೀಲರಿಗೂ ಆಜ್ಞೆಗಳು ಕಳಿಸಲ್ಪಡುತ್ತವೆ.

೩. **ಸಾಮೂಹಿಕ (ಪಟ್ಟಿ) ಯಾದಿ**:— ಒಕ್ಕೂಟ ಮತ್ತು ರಾಜ್ಯದ ಹಿತರಕ್ಷಣೆಗೆ ಸಂಬಂಧಿಸಿದ ೪೭ ವಿಷಯಗಳು ಈ ಯಾದಿಯಲ್ಲಿವೆ. ಈ ವಿಷಯಗಳ ಬಗ್ಗ ಎರಡೂ ಸರಕಾರಗಳು ಕಾಯಿದೆ ಮಾಡಬಲ್ಲವು. ರಾಜ್ಯ ಸರಕಾರವು ಈ ಯಾದಿಯಲ್ಲಿಯ ಯಾವುದಾದರೊಂದು ವಿಷಯಕ್ಕೆ ತನ್ನಷ್ಟಕ್ಕೇ ಕಾಯುದೆ ಮಾಡಲು ಇಚ್ಛಿಸಿದರೆ ಒಕ್ಕೂಟ ಸರಕಾರದ ಪೂರ್ವ ಅಪ್ಪಣೆ ಪಡೆದುಕೊಳ್ಳಬೇಕಾಗುವುದು. ಒಕ್ಕೂಟ ಭಾರತದ ಹಿತದೃಷ್ಟಿ ಯಿಂದ ಕೇಂದ್ರ ಸರಕಾರವು ಮಾಡಿದ ಕಾಯಿದೆಗಳನ್ನು ರಾಜ್ಯ ಸರಕಾರವು ಆಚರಣೆಯಲ್ಲಿ ತರಲೇಬೇಕಾಗುವುದು.

ಈ ಯಾದಿಗಳ ಹೊರತು ಹೊಸದಾಗಿ ನಿರ್ಮಿತವಾದ ಯಾವು ವಾದರೂ ವಿಷಯಗಳಿದ್ದರೆ, ಆ ವಿಷಯವನ್ನು ಯಾವ ಯಾವ (ಪಟ್ಟಿಯಲ್ಲಿ) ಸೇರಿಸಬೇಕೆಂಬುದನ್ನು ಸಂಸದು (ಪಾರ್ಲಿಮೆಂಟು) ನಿರ್ಣಯಿಸುವುದು.

**ಬ. ವಿಭಾಗ**:— ಈ ರಾಜಕೀಯ ವಿಭಾಗದಲ್ಲಿ ಸಂಸ್ಥಾನಗಳೂ, ಸಂಸ್ಥಾನ ಒಕ್ಕೂಟಗಳೂ ಇವೆ. ಈ ವಿಭಾಗದ ವರಿಷ್ಠಾಧಿಕಾರಿಯಾದ ರಾಜಪ್ರಮುಖನು ರಾಷ್ಟ್ರಾಧ್ಯಕ್ಷರಿಂದ ನೇಮಿಸಲ್ಪಟ್ಟವನಿರುತ್ತಾನೆ. ಇವನಿ ಗಾದರೂ ಅ. ವಿಭಾಗದಂತೆಯೇ ಒಂದು ಮಂತ್ರಿಮಂಡಲ ಆಡಳಿತೆಗೆ ಸಹಾಯ ಮಾಡುವದು. ಶಾಸನಾಧಿಕಾರಗಳು ಅ. ವಿಭಾಗದಂತೆಯೇ ಇವೆ. ಆದರೆ ಹಿಂದಿನ ಕೆಲ ಸಂಸ್ಥಾನಗಳು ಬಹಳ ಹಿಂದುಳಿದಿರುವುದರಿಂದ ಅವುಗಳ ಸುಧಾರಣೆಯ ಬಗ್ಗೆ ರಾಷ್ಟ್ರಾಧ್ಯಕ್ಷನು ನಿರೀಕ್ಷಿಸಿ, ಕೆಲ ಅವಶ್ಯ ಮಾರ್ಪಾಟು ಗಳ ಬಗ್ಗೆ ಘಟನೆ ಆಚರಣೆಯಲ್ಲಿ ಬಂದಾಗಿನಿಂದ ೧೦ ವರ್ಷವರೆಗೆ ಅವಶ್ಯ ಸಲಹೆ, ಸೂಚನೆಗಳನ್ನು ಕೊಡುವನು.

ಬ. ವಿಭಾಗದಲ್ಲಿ ೧. ಹೈದರಾಬಾದ್, ೨. ರಾಜಸ್ಥಾನ ೩. ತ್ರಾವಣ ಕೋರ್, ೪. ಮೈಸೂರು, ೫. ಮಧ್ಯಭಾರತ. ೬. ಕಾಶ್ಮೀರ, ೭. ಸೌರಾಷ್ಟ್ರ ೮. ಪತಿಯಾಳ ಮತ್ತು ಪೂರ್ವ ಪಂಜಾಬ ಸಂಸ್ಥಾನಗಳ ಒಕ್ಕೂಟ. ಈ ಭಾಗಗಳಿವೆ.

ಮೈಸೂರು ಆಡಳಿತೆಯಲ್ಲಿ ಬಹಳ ಮುಂದುವರಿದಿರುವುದರಿಂದ, ಅದನ್ನು ರಾಷ್ಟ್ರಾಧ್ಯಕ್ಷನ ಕಣ್ಣಾರಿಕೆಯಲ್ಲಿರಬೇಕೆಂಬ ಕಲಮಿನಿಂದ ಹೊರತು ಪಡಿಸಲಾಗಿದೆ.

ಕಾಶ್ಮೀರವು ಇನ್ನೂ ವಾದಗ್ರಸ್ಥ ವಿಷಯವಾಗಿರುವುದರಿಂದ, ಆ ರಾಜ್ಯದ ಬಗ್ಗೆ ಶಾಸನಗಳನ್ನು ಮಾಡುವಾಗ ಸಂಸದು ಅಲ್ಲಿಯ ಜನತಾ ಸರಕಾರದ ಒಪ್ಪಿಗೆಯನ್ನು ಅನುಲಕ್ಷಿಸುವುದು.

**ಕ. ಡ. ರಾಜಕೀಯ ವಿಭಾಗ**:—ಕ. ವಿಭಾಗದಲ್ಲಿ ೧. ವಿಂಧ್ಯ ಪ್ರದೇಶ, ೨. ಹಿಮಾಚಲ, ೩. ಮಣಿಪುರ, ೪. ಕಚ್ಛ, ೫. ಭೋಪಾಳ, ೬. ತ್ರಿಪುರಾ, ೭. ಅಜಮೀರ, ೮. ಕೊಡಗು, ೯. ದಿಲ್ಲಿ, ೧೦. ವಿಲಾಸ ಪುರ ಈ ಪ್ರದೇಶಗಳಿವೆ. ಡ. ವಿಭಾಗದಲ್ಲಿ ಭಾರತ ವಸಾಹತಾದ ಅಂದ ಮಾನ್ ಮತ್ತು ನಿಕೋಬಾರ್ ದ್ವೀಪಗಳಿವೆ. ಈ ಪ್ರದೇಶದ ಆಡಳಿತವೆಲ್ಲಾ ರಾಷ್ಟ್ರಾಧ್ಯಕ್ಷನಿಂದ ನೇಮಿಸಲ್ಪಟ್ಟ "ಚೀಫ್ ಕಮಿಷನರ್" ಇಲ್ಲವೆ ಲೆಫ್ಟ ನೆಂಟ್ ಗವ್ಹರ್ನರ್ ಅಧಿಕಾರಿಯ ಮುಖಾಂತರ ನಡೆಯುವುದು. ಕೆಲವೇಳೆ ಈ ಪ್ರದೇಶದ ಆಡಳಿತೆಯು ಮಗ್ಗುಲಿನ ಪ್ರದೇಶದ ಗವ್ಹರ್ನರ್ ಅಥವಾ ರಾ. ಪ್ರಮುಖನ ಕಡೆಗೂ ವಹಿಸಿಕೊಡುವ ಅಧಿಕಾರ ರಾಷ್ಟ್ರಾಧ್ಯಕ್ಷನಿಗಿದೆ.

**೨. ಶಾಸನಾಂಗ**:—ಕೇಂದ್ರದಲ್ಲಿರುವ ಮೇಲ್ಮನೆ, ಕೆಳಮನೆ ಇವೆ ರಡಕ್ಕೂ ಕೂಡಿ ಪಾರ್ಲಿಮೆಂಟ್ ಅಥವಾ ಸಂಸದು ಎಂದು ಹೆಸರು. ಮೇಲ್ಮನೆಗೆ ರಾಜ್ಯ ಪರಿಷತ್ ಅಥವಾ ಕೌನ್ಸಿಲ್ ಆಫ್ ಸ್ಟೇಟ್ ಎಂದೂ, ಕೆಳಮನೆಗೆ ಲೋಕಸಭೆ ಅಥವಾ ಪ್ರಜಾಪ್ರತಿನಿಧಿಸಭೆ ಎಂದೂ ಹೆಸರು. ಒಕ್ಕೂಟದ ಆಡಳಿತಕ್ಕೆ ಸಂಬಂಧಿಸಿದ ಮಸೂದೆಗಳೆಲ್ಲಾ ಈ ಸಭೆಗಳಲ್ಲಿಯೇ ಚರ್ಚಿಸಲ್ಪಟ್ಟು ಶಾಸನಗಳಾಗುತ್ತವೆ. ಲೋಕಸಭೆಯಲ್ಲಿ ಬಹುಮತವುಳ್ಳ ರಾಜಕೀಯಪಕ್ಷದ ಧುರೀಣನನ್ನು ರಾಷ್ಟ್ರಾಧ್ಯಕ್ಷನು ಮುಖ್ಯಮಂತ್ರಿಯನ್ನಾಗಿ ಆರಿಸುವನು ಮತ್ತು ಮುಖ್ಯ ಮಂತ್ರಿಯ ಸಲಹೆಯಂತೆ ಇತರೇ ಮಂತ್ರಿ ಗಳನ್ನೂ ನೇಮಿಸುವನು. ಮಂತ್ರಿಗಳು ಸಂಸದಿನ ಯಾವುದೊಂದು ಸಭೆಯ ಸದಸ್ಯರಿರಬೇಕು. ಇಲ್ಲವೇ ಮಂತ್ರಿಯಾದ ೬ ತಿಂಗಳಿನೊಳಗಾಗಿ ಚುನಾ ವಣೆಗೆ ನಿಂತು ಆರಿಸಿಬರಬೇಕು. ಹೀಗೆ ಒಕ್ಕೂಟದ ಆಡಳಿತೆಯ ಹೊಣೆ ಸಂಸದು ಮತ್ತು ಮಂತ್ರಿಮಂಡಲದ ಮೇಲೆ ಸಾಮೂಹಿಕವಾಗಿರುವುದು.

ಅ. ವಿಭಾಗದ ಮುಂಬಯಿ, ಮದ್ರಾಸ್, ಬಂಗಾಲ, ಪಂಜಾಬ, ಉತ್ತರ ಪ್ರದೇಶ, ಬಿಹಾರಗಳಲ್ಲಿಯೂ ಮತ್ತು ಬ. ವಿಭಾಗದ ಮೈಸೂರಿನಲ್ಲಿಯೂ ಎರಡೆರಡು ಕಾಯಿದೆ ಮಂಡಲಗಳಿವೆ. ಈ ಸಭೆಗಳಿಗೆ ಮೇಲ್ಮನೆ ಕೆಳಮನೆ ಎಂದು ಹೆಸರು. ಮೇಲ್ಮನೆಗೆ **ಲೆಜಿಸ್ಲೇಟಿವ್ ಕೌನ್ಸಿಲ್ (ವಿಧಿ ಮಂಡಲ)** ಎಂದೂ, ಕೆಳಮನೆಗೆ **ಲೆಜಿಸ್ಲೇಟಿವ್ ಅಸೆಂಬ್ಲಿ (ಶಾಸನಸಭೆ)** ಎಂದೂ ಹೆಸರು. ಅ. ಬ. ಕೆಳಮನೆಗಳಲ್ಲಿ ಬಹುಮತ ಉಳ್ಳ ಪಕ್ಷದ ಸದಸ್ಯನನ್ನು ಗವ್ಹರ್ನರ್ ಅಥವಾ ರಾಜಪ್ರಮುಖರು ಮುಖ್ಯ ಮಂತ್ರಿಯನ್ನಾಗಿ ಆರಿಸುವರು; ಮತ್ತು ಮುಖ್ಯ ಮಂತ್ರಿಯು ಸಲಹೆಯಂತೆ ಇತರ ಮಂತ್ರಿಗಳನ್ನೂ ನೇಮಿಸುವರು. ಹೀಗೆ ರಾಜ್ಯದ ಆಡಳಿತೆಯ ಹೊಣೆಯು ಶಾಸನ ಸಭೆ ಮತ್ತು ಮಂತ್ರಿಮಂಡಲದ ಮೇಲೆ ಬೀಳುವುದು. ಮಂತ್ರಿಯು ಲೋಕ ಸಭೆಯ ಸದಸ್ಯನಿರಲೇ ಬೇಕು. ಇಲ್ಲವೇ ಮಂತ್ರಿಯಾದ ೬ ತಿಂಗಳೊಳಗಾಗಿ ಚುನಾವಣೆಗೆ ನಿಂತು ಆರಿಸಿಬರಬೇಕು. ಕ. ಡ. ವಿಭಾಗದ ಅಜಮೀರ, ಭೋಪಾಳ, ಕೊಡಗು, ದಿಲ್ಲಿ, ಹಿಮಾಚಲ ಪ್ರದೇಶ ಮತ್ತು ವಿಂಧ್ಯ ಪ್ರದೇಶದಲ್ಲಿ ಶಾಸನಸಭೆ ಮತ್ತು ಮಂತ್ರಿಮಂಡಲಗಳಿವೆ. ಮಣೀಪುರ, ತ್ರಿಪುರಾ ಮತ್ತು ಕಚ್ಛ ಈ ಪ್ರದೇಶಗಳಲ್ಲಿ ಸಲಹಾ ಸಮಿತಿಗಳಿವೆ.

ಡ. ವಿಭಾಗದ ಅಂದಮಾನ್–ನಿಕೋಬಾರ್ ದ್ವೀಪದ ಆಡಳಿತೆ ಮಾತ್ರ ಸಂಸದಿನ ನೇತೃತ್ವದಲ್ಲಿ, ಚೀಫ್ ಕಮೀಷನರನೇ ಆಡಳಿತೆ ನಡೆಯಿಸುವನು.

**ನ್ಯಾಯಾಂಗ** :— ಒಕ್ಕೂಟ ಭಾರತದ ಆಡಳಿತೆಗೆ ಮಂತ್ರಿಮಂಡಳ ಮತ್ತು ಸಂಸದು ಹೊಣೆ ನಿರ್ವಹಿಸುನವು. ಇವುಗಳ ಹೊಣೆ ನಿರ್ವಹಣವಾಗುವಾಗ, ಕೆಲವೇಳೆ ರಾಜ್ಯಘಟನೆಯು ಸಂಸದಿಗೆ ಕೊಟ್ಟ ಅಧಿಕಾರ ಕ್ಷೇತ್ರದ ಹೊರಗೆ ಕಾಯಿದೆಗಳು ನಿರ್ಮಾಣವಾಗಬಹುದು, ರಾಜ್ಯ=ರಾಜ್ಯಗಳಲ್ಲಿ ತಂಟೆ ಉತ್ಪನ್ನವಾಗಬಹುದು, ಇಲ್ಲವೇ ಕಾರ್ಯಾಂಗವು ವ್ಯಕ್ತಿಯ ಮೂಲಭೂತ ಹಕ್ಕನ್ನು ಅಪಹರಿಸಬಹುದು. ಇಂತಹ ಯಾವುದೇ ಪ್ರಸಂಗದಲ್ಲಿ ನಮ್ಮ ರಾಜ್ಯ ಘಟನೆಯ ಅಥವಾ ಕಾಯಿದೆಯ ಕಲಮುಗಳ ಸ್ಪಷ್ಟೀಕರಣಮಾಡುವ ಮತ್ತು ನ್ಯಾಯತೀರಿಸುವ ಅಧಿಕಾರವು ಭಾರತದ "**ವರಿಷ್ಠ ನ್ಯಾಯಾಲಯ**" ( ಸುಪ್ರೀಮ ಕೋರ್ಟ) ಕ್ಕೆ ಇದೆ.

ಈ ಕೋರ್ಟಿನಲ್ಲಿ ಸಧ್ಯ ೭ ನ್ಯಾಯಾಧೀಶರಿದ್ದಾರೆ. ಅವಶ್ಯಕಂಡಲ್ಲಿ ಸಂಸದು ನ್ಯಾಯಾಧೀಶರ ಸಂಖ್ಯೆಯನ್ನು ಹೆಚ್ಚಿಸಲೂ ಬಹುದು. ಮುಖ್ಯ ನ್ಯಾಯಾಧೀಶನನ್ನು ರಾಷ್ಟ್ರಾಧ್ಯಕ್ಷನು ನಿಯಮಿಸುವನು. ಉಳಿದ ನ್ಯಾಯಾಧೀಶರನ್ನು ಮುಖ್ಯನಾಯಾಧೀಶ ಮತ್ತು ರಾಜ್ಯಗಳ ಹೈಕೋರ್ಟಿನ ನ್ಯಾಯಾಧೀಶರ ಸಲಹೆಯ ಮೇರೆಗೆ ರಾಷ್ಟ್ರಾಧ್ಯಕ್ಷನು ನೇಮಿಸುವನು.

ಹೀಗೆ ಪ್ರಾಂತಗಳಿಗೆ ಹೈಕೋರ್ಟುಗಳೂ, ಜಿಲ್ಲೆಗಳಿಗೆ ಡಿಸ್ಟ್ರಿಕ್ ಜಡ್ಜ ಕೋರ್ಟುಗಳೂ, ತಾಲೂಕುಗಳಿಗೆ ಸಬ್‌ಜಜ್ ಮತ್ತು ರೆಸಿಡೆಂಟ್ ಮ್ಯಾ. ಕೋರ್ಟುಗಳೂ, ಹಳ್ಳಿಗಳಿಗೆ ನ್ಯಾಯದಾನ ಸಮಿತಿಯೂ ನ್ಯಾಯದಾನ ಮಾಡುತ್ತವೆ. ಈ ಎಲ್ಲ ಕೋರ್ಟುಗಳ ಅಧಿಕಾರ ಕ್ಷೇತ್ರವು ಬೇರೆ ಬೇರೆ ಯಾಗಿರುತ್ತದೆ. ಹೀಗೆ ಭಾರತೀಯರ ಹಕ್ಕು ಬಾಧ್ಯತೆಗಳು ಸಂಸದು ಮತ್ತು ನ್ಯಾಯಾಲಯಗಳಿಂದ ಕಾಯಲ್ಪಡುತ್ತವೆ.

## ಘಟನಾಸಮಿತಿಯ ಮುಖ್ಯ ಕಾರ್ಯವೇನು ?

ಭಾರತವನ್ನು **ಸಾರ್ವಭೌಮ ಲೋಕಸತ್ತಾತ್ಮಕ ಪ್ರಜಾರಾಜ್ಯ** ವನ್ನಾಗಿ ಮಾರ್ಪಡಿಸಿ, ಭಾರತದ ನಾಗರಿಕರಿಗೆ ಸಾಮಾಜಿಕ–ಆರ್ಥಿಕ-ಸಾಂಸ್ಕೃತಿಕ–ಧರ್ಮ ಹಾಗು ರಾಜಕೀಯ ನ್ಯಾಯ ದೊರಕಿಸುವುದು. ಭಾರತೀಯರಿಗೆ ಸಮಾನ ಸ್ವಾತಂತ್ರ್ಯ, ಸಮಾನ ಸ್ಥಾನಮಾನ, ಅವಕಾಶ ದೊರಕಿಸಿ ಕೊಡುವುದು. ರಾಷ್ಟ್ರದ ಭದ್ರತೆ, ಏಕ್ಯ ಮತ್ತು ವ್ಯಕ್ತಿ ಸ್ವಾತಂತ್ರ್ಯವನ್ನು ಕಾಯುವದು. ಇವೇ ಮೊದಲಾದವು ಘಟನಾ ಸಮಿತಿಯ ಕಾರ್ಯಗಳು.

## ಭಾರತದ ಹೊಸರಾಜ್ಯ ಘಟನೆಯನ್ನು ಯಾರು ಸಿದ್ಧಗೊಳಿಸಿದರು ?

ಕ್ರಿ. ಶ. ೧೯೪೬ ನೇ ಡಿಸೆಂಬರ್ ೯ರ ದಿನ ಮಧ್ಯರಾತ್ರಿಯಲ್ಲಿ **ಡಾ. ಸಚ್ಚಿದಾನಂದ ಸಿಂಹ** ಇವರ ಮುಖಂಡತ್ವದಲ್ಲಿ ಘಟನಾಸಮಿತಿಯ ಪ್ರಾರಂಭೋತ್ಸವವಾಯಿತು. **ಡಾ. ರಾಜೇಂದ್ರ ಪ್ರಸಾದರು** ಘಟನಾ ಸಮಿತಿಯ ಶಾಶ್ವತ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಕೆಲ ದಿನಗಳಲ್ಲಿಯೇ ಅನಿವಾರ್ಯವಾಗಿ ಭಾರತದ ವಿಭಜನೆಯಾಯಿತು. ಅನಂತರ ಘಟನೆಯ "**ಕರಡು**" ತಯಾರಿಸಲು ಡಾ. ಅಂಬೇಡಕರರ ಅಧ್ಯಕ್ಷತೆಯಲ್ಲಿ ಒಂದು

ಕರಡು ಸಮಿತಿಯು ನೇಮಿಸಲ್ಪಟ್ಟಿತು. ಈ ಸಮಿತಿಯಲ್ಲಿ ಶ್ರೀ. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯಾರ್, ಟಿ. ಟಿ. ಕೃಷ್ಣಾಮಾಚಾರಿ, ಕೆ. ಎಂ. ಮುನಶಿ, ಸೈಯ್ಯದ್ ಮಹಮದ್ ಸಾದುಲ್ಲಾ, ಎನ್. ಗೋಪಾಲಸ್ವಾಮಿ ಐಯ್ಯಾಂಗಾರ್, ಡಿ. ಪಿ. ಖೈತಾಲ ಇವರುಗಳಿದ್ದರು. ಇವರು ಅನೇಕ ತಜ್ಞರ ಸಲಹೆ ಪಡೆದು "ಕರಡು" ತಯಾರಿಸಿದ, ಮೇಲೆ ಘಟನಾಸಮಿತಿಯು ೧೧ ಬಾರಿ ಕೂಡಿ, ೧ ವರ್ಷ ೧೧ ತಿಂಗಳು ೧೮ ದಿನಗಳವರೆಗೆ ಚರ್ಚಿಸಿ "ಕರಡಿ"ನಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿ ತಾ. ೨೬-೧೧-೧೯೪೯ಕ್ಕೆ ಘಟನೆಯನ್ನು ಸಿದ್ಧಗೊಳಿಸಿತು. ಘಟನಾಸಮಿತಿಯಲ್ಲಿ ೩೦೮ ಜನ ಸದಸ್ಯರು ಭಾಗವಹಿಸಿದ್ದರು.

## ರಾಷ್ಟ್ರಾಧ್ಯಕ್ಷರನ್ನು ಯಾರು ಆರಿಸುವರು ?

ಭಾರತದ ರಾಷ್ಟ್ರಾಧ್ಯಕ್ಷನನ್ನು ಕೇಂದ್ರದ ಶಾಸನ ಸಭೆಗಳ ಚುನಾಯಿತ ಸದಸ್ಯರೂ ಹಾಗೂ ರಾಜ್ಯಗಳಲ್ಲಿಯ ಶಾಸನ ಸಭೆಗಳ ಚುನಾಯಿತ (ನಿರ್ವಾಚಿತ) ಸದಸ್ಯರೂ ಕೂಡಿ ಗುಪ್ತ ಮತದಾನ ಪದ್ಧತಿಯಿಂದ ಆರಿಸುವರು.

## ಉಪರಾಷ್ಟ್ರಾಧ್ಯಕ್ಷನನ್ನು ಯಾರು ಚುನಾಯಿಸುವರು ?

ಸಂಸದಿನ ಎರಡೂ ಸಭೆಗಳ ಸದಸ್ಯರು ಕೂಡಿ ಗುಪ್ತ ಮತದಾನ ಪದ್ಧತಿಯಿಂದ ಇವನನ್ನು ಚುನಾಯಿಸುವರು.

## ರಾಷ್ಟ್ರಾಧ್ಯಕ್ಷನ ಅರ್ಹತೆ, ಅಧಿಕಾರ ಮತ್ತು ಕರ್ತವ್ಯಗಳನ್ನು ವಿವರಿಸಿರಿ.

ರಾಷ್ಟ್ರಾಧ್ಯಕ್ಷನಾಗಬಯಸುವವನು ಭಾರತದ ನಾಗರೀಕನಾಗಿದ್ದು ಕನಿಷ್ಟ ೩೫ ವರ್ಷ ವಯಸ್ಸಿನವನಾಗಿರಬೇಕು. ಕೇಂದ್ರದ ಲೋಕಸಭೆಗೆ ಸದಸ್ಯನಾಗುವ ಅರ್ಹತೆ ಇರಬೇಕು. ಆದರೆ ಯಾವುದೇ ಶಾಸನ ಸಭೆಯ ಸದಸ್ಯನಿರಕೂಡದು. ಇದ್ದರೆ ಅಧ್ಯಕ್ಷನೆಂದು ಚುನಾವಣೆ ಆದ ಕೂಡಲೇ ಸದಸ್ಯತ್ವ ರದ್ದಾಗುವುದು. ಯಾವದೇ ಇತರ ಸಂಬಳದ ನೌಕರಿಯಲ್ಲಿರಕೂಡದು.

ಇವನು ಒಕ್ಕೂಟದ ವರಿಷ್ಠ ಅಧಿಕಾರಿಯಾಗಿರುವುದರಿಂದ ಭಾರತದ ಹಿತರಕ್ಷಣೆಗಾಗಿ ನೇರವಾಗಿ ಅಥವಾ ಇತರೇ ಅಧಿಕಾರಗಳ ಮುಖಾಂತರ

ಆಡಳಿತೆ ನಡೆಯಿಸಲು ಗವ್ಹರ್ನರ್, ವರಿಷ್ಠ ಹಾಗೂ ಹೈಕೋರ್ಟಿನ ನ್ಯಾಯಾಧೀಶರು, ಆಟರ್ನಿ ಜನರಲ್, ಆಡಿಟರ್ ಜನರಲ್, ರಾಯಭಾರಿಗಳೂ, ಕೇಂದ್ರದ ಮಂತ್ರಿಮಂಡಲ ಮುಂತಾದ ಉಚ್ಚ ಅಧಿಕಾರಿಗಳನ್ನು ನಿಯಮಿಸುವನು. ಚುನಾವಣೆ ಕಮಿಶನರ್, ಹಣಕಾಸಿನ ಮಂಡಲ ಪಬ್ಲಿಕ್ ಸರ್ವಿಸ್ ಕಮಿಶನ್ನಿನ ಸದಸ್ಯರು, ಭೂಜಲ–ವಾಯುಪಡೆಗಳ ವರಿಷ್ಠರು ಮುಂತಾದುವನ್ನು ನೇಮಿಸುವ ಅಧಿಕಾರವೂ, ಬ. ಕ. ರಾಜಕೀಯ ವಿಭಾಗಗಳ ಆಡಳಿತೆಯ ಮೇಲ್ವಿಚಾರಣೆಯ ಹೊಣೆಯೂ ಈತನ ಮೇಲಿದೆ.

ಇದಲ್ಲದೆ ಯಾವುದೇ ಕೋರ್ಟು (ನ್ಯಾಯಾಲಯ)ದಲ್ಲಿ ವಿಧಿಸಿದ್ದ ಶಿಕ್ಷೆಯನ್ನು ಕಡಿಮೆಮಾಡುವ, ಇಲ್ಲವೇ ಮುಕ್ತಮಾಡುವ ಅಧಿಕಾರ ಉಂಟು. ಸಂಸದಿನಲ್ಲಿ ಪಾಸಾದ ಮಸೂದೆಗಳು ಈತನ ಸಹಿಯಾದ ನಂತರವೇ ಕಾಯಿದೆಯಾಗುವವು. ಪ್ರಾಂತದ (ರಾಜ್ಯದ) ಶಾಸನಸಭೆಗಳಲ್ಲಿ ಪಾಸಾದ ಮಸೂದೆಯನ್ನು ಗವ್ಹರ್ನರನು ಇವನ ಕಡೆ ಕಳಿಸಿದರೆ ಅದಕ್ಕೆ ಮನ್ನಣೆ ಕೊಡುವ ಅಥವಾ ತಿರಸ್ಕರಿಸುವ ಅಧಿಕಾರವುಂಟು. ಸಂಸದಿನಲ್ಲಿ ಪಾಸಾದ ಮಸೂದೆಗಳನ್ನು ಪುನರ್ವಿಚಾರಣೆಗೆ ಕಳಿಸುವ, ಎರಡೂ ಸಭೆಗಳನ್ನು ಕೂಡಿಸಿ ಭಾಷಣಮಾಡುವ ಅಧಿಕಾರವುಂಟು. ಇವನ ಒಪ್ಪಿಗೆ ಇಲ್ಲದೆ ಹಣಕಾಸಿನ ಮಸೂದೆಗಳು ಲೋಕಸಭೆಯಲ್ಲಿ ಚರ್ಚೆಗೆ ಬರಲಾರವು. ಕೇಂದ್ರದ ರಾಜ್ಯ ಪರಿಷತ್ತಿಗೆ ೧೨ಜನ ಸದಸ್ಯರನ್ನು ಆರಿಸುವ ಅಧಿಕಾರವೂ ಇದೆ.

ಭಾರತದ ಭದ್ರತೆಗೆ ಯುದ್ಧ ಅಥವಾ ಆಂತರಿಕ ಗಂಡಾಂತರ ಒದಗಿದರೆ ಅಥವಾ ಒದಗುವ ಸಂಭವವಿದೆಯೆಂದು ಕಂಡು ಬಂದರೆ, ಅ. ಬ. ರಾಜಕೀಯ ವಿಭಾಗ್ಗದಲ್ಲಿ ಅವ್ಯವಸ್ಥೆಯುಂಟಾದರೆ, ರಾಷ್ಟ್ರದ ಅಥವಾ ರಾಜ್ಯದ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದೆ ಅಥವಾ ಹದಗೆಡುವುದೆಂದು ಕಂಡು ಬಂದರೆ **"ಘೋಷಣೆ"** ಹೊರಡಿಸಿ ಒಕ್ಕೂಟದ ಅಥವಾ ರಾಜ್ಯದ ಸಂಪೂರ್ಣ ಅಥವಾ ಕೆಲವೊಂದು ಆಡಳಿತೆಯನ್ನು ತನ್ನ ಕೈಗೆ ತೆಗೆದುಕೊಂಡು ಆಡಳಿತೆ ನಡೆಸುವ ವಿಶೇಷಾಧಿಕಾರವಿದೆ. ಕೆಲ ಪ್ರಸಂಗಗಳಲ್ಲಿ ಮೂಲಭೂತ ಹಕ್ಕುಗಳನ್ನು ದೊರಕಿಸಲು ಕೋರ್ಟಿಗೆ ಹೋಗುವ ನಾಗರಿಕ ಹಕ್ಕನ್ನೂ ಕಸಿದುಕೊಳ್ಳುವ ಅಧಿಕಾರವಿದೆ.

ರಾಷ್ಟ್ರಾಧ್ಯಕ್ಷನೇ ಭಾರತದ ವರಿಷ್ಠಾಧಿಕಾರಿಯಾದುದರಿಂದ ಭಾರತದ ಹಿತರಕ್ಷಣೆಯು ಸರ್ವವಿಧದಿಂದಲೂ ಸುರಕ್ಷಿತವಿರುವಂತೆ ಆಡಳಿತೆ ನಿರ್ವಹಿಸುವ ಹೊಣೆ ಇವನ ಮೇಲಿದೆ.

## ರಾಷ್ಟ್ರಾಧ್ಯಕ್ಷನನ್ನು ಯಾವ ಕಾರಣದಿಂದ ಮತ್ತು ಯಾವ ಪ್ರಕಾರ ಅಧಿಕಾರಚ್ಯುತಗೊಳಿಸಬಹುದು ?

ರಾಷ್ಟ್ರಾಧ್ಯಕ್ಷನು ರಾಷ್ಟ್ರವಿಘಾತಕನಾದರೆ, ದುರಾಚರಣೆಯವನೆಂದು ಕಂಡು ಬಂದರೆ, ಸಂಸದಿನ ಯಾವುದಾದರೊಂದು ಸಭೆಯ ೧/೪ ಸದಸ್ಯರು ಆಪಾದನೆಯನ್ನು ತಯಾರಿಸಿ ಸಹಿಮಾಡಿ ಇಂತಹ ದಿನ ಶಾಸನ ಸಭೆಯಲ್ಲಿ ಅವಿಶ್ವಾಸ ಗೊತ್ತುವಳಿ ತರುವೆವೆಂದು ಸಭೆಸೇರುವ ೧೪ ದಿನ ಮುಂಚಿತವಾಗಿ ತಿಳಿಸಬೇಕಾಗುವುದು. ಸಭೆಯಲ್ಲಿ ಗೊತ್ತುವಳಿಯು ೨/೩ರಷ್ಟು ಸದಸ್ಯರ ಬಹುಮತದಿಂದ ಪಾಸಾದರೆ, ಈ ನಿರ್ಣಯವು ಎರಡನೇ ಸಭೆಗೆ ಕಳಿಸಲ್ಪಡುವುದು. ಅಲ್ಲಿ ಈ ನಿರ್ಣಯವು ಚರ್ಚಿಸಲ್ಪಟ್ಟು ಸ್ವೀಕೃತವಾದರೆ, ಅಂದೇ ರಾಷ್ಟ್ರಾಧ್ಯಕ್ಷನು ತನ್ನ ಎಲ್ಲ ಅಧಿಕಾರಗಳನ್ನು ಉಪಾಧ್ಯಕ್ಷನಿಗೆ ಒಪ್ಪಿಸಿಕೊಟ್ಟು ಅಧಿಕಾರಚ್ಯುತನಾಗಬೇಕಾಗುವುದು.

## ಪ್ರ :—ಕೆಳಗಿನವುಗಳ ಬಗ್ಗೆ ಟಿಪ್ಪಣಿ ಬರೆಯಿರಿ.

೧. ಮೂಲಭೂತ ಹಕ್ಕುಗಳು. ೨. ಭಾರತದ ನಾಗರೀಕತ್ವ ೩. ಗವ್ಹರ್ನರ್ ಅಥವಾ ರಾಜಪ್ರಮುಖ. ೪. ಸಂಯುಕ್ತ ರಾಷ್ಟ್ರಸಂಘ ೫. ಮುಂಗಡ ಪತ್ರಿಕೆ. ೬. ಲೋಕಸಭೆ. ೭. ಲೆಜಿಸ್ಲೇಟಿವ್ ಕೌನ್ಸಿಲ್ ೮. ಮಸೂದೆ. ೯. ರಾಷ್ಟ್ರಸಭೆ. ೧೦. ಅಟರ್ನಿ ಜನರಲ್.

**ಉತ್ತರ :— ೧. ಮೂಲಭೂತ ಹಕ್ಕುಗಳು.**— ಮಾನವನಿಗೆ ತನ್ನ ಮತ್ತು ತನ್ನ ಆಸ್ತಿಯ ಭದ್ರತೆ, ಸಮಾನತೆ, ಧಾರ್ಮಿಕ ಮತ್ತು ಭಾಷಣ ಸ್ವಾತಂತ್ರ್ಯ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸ್ವಾತಂತ್ರ್ಯ, ನ್ಯಾಯ ದೊರಕಿಸುವ ಹಕ್ಕು ಇವುಗಳಿಲ್ಲದಿದ್ದರೆ ವ್ಯಕ್ತಿವಿಕಾಸ, ಸಮಾಜ ವಿಕಾಸಗಳುಂಟಾಗಿ ರಾಷ್ಟ್ರದ ಪ್ರಗತಿಯಾಗಲಾರದು. ಆದ್ದರಿಂದ ಮೇಲಿನ ಎಲ್ಲ ಹಕ್ಕುಗಳನ್ನೂ ಸಂರಕ್ಷಿಸುವ ಹೊಣೆ ರಾಷ್ಟ್ರದ ಮೇಲಿದೆ. ಇವುಗಳಿಗೇ ಮೂಲಭೂತಹಕ್ಕು ಅಥವಾ ನಾಗರೀಕ ಹಕ್ಕು ಎಂದು ಹೆಸರು.

**೨. ಭಾರತದ ನಾಗರೀಕತ್ವ :**— ಯಾರು ಯಾರ ಹಿತಕ್ಕಾಗಿ ದೇಹ ಸವೆಸುವರೋ ಅವರಿಗೇ ಅದರ ಫಲ ದೊರೆಯಬೇಕಾದುದು ಧರ್ಮ

ಅಂತೆಯೇ ಒಂದು ದೇಶದ ನಾಗರೀಕನಿಗೆ ಸ್ವದೇಶದಲ್ಲಿ ಸಿಗುವಅನುಕೂಲತೆ ಗಳು ವಿದೇಶದಲ್ಲಿ ಸಿಗುವುದಿಲ್ಲ. ಏಕೆಂದರೆ ವಿದೇಶೀಯನು ಬೇರೆ ದೇಶದ ಹಿತಕ್ಕಾಗಿ ಎಂದೂ ತನ್ನ ಜೀವವನ್ನರ್ಪಿಸಲಾರನು, ಅಥವಾ ವಿಶೇಷ ಆಸ್ಥೆಯಿಂದ ದುಡಿಯಲಾರನು. ಏಕೆಂದರೆ ಅವನು ಆದೇಶದ ನಾಗರೀಕನಲ್ಲ. ಈಗ ನಾವು ಭಾರತದ ನಾಗರೀಕರು ಯಾರು ಎಂಬುದನ್ನು ತಿಳಿಯುವಾ.

ಯಾರು ಭಾರತದ ರಾಜ್ಯಘಟನೆಯು ಜಾರಿಯಲ್ಲಿ ಬರುವ ಮುಂಚೆ ಅಥವಾ ಬರುವ ಕಾಲಕ್ಕೆ ಭಾರತದಲ್ಲಿ ಶಾಶ್ವತ ವಾಸವಾಗಿದ್ದರೋ ಅಥವಾ ಹುಟ್ಟಿದ್ದರೋ; ಭಾರತದ ವಿಭಜನೆಯ ನಂತರ ಪಾಕಿಸ್ತಾನದಿಂದ ಜುಲೈ ೧೯, ೧೯೪೮ರ ಮುಂಚೆ ಬಂದವರು ಅಥವಾ ಆಮೇಲೆ ಬಂದವರು, ಭಾರತದ ನಾಗರೀಕರ ಪಟ್ಟಿಯಲ್ಲಿ ಹೆಸರು ನೋಂದಾಯಿಸಿದ್ದರೆ ಭಾರತದ ನಾಗರೀಕ ರಾಗುವರು. ವಿದೇಶದಲ್ಲಿರುವ ಭಾರತೀಯರು ಆದೇಶದ ನಾಗರೀಕತ್ವ ವನ್ನು ಸ್ವೀಕರಿಸದೇ ಇದ್ದರೆ ಅವರೂ, ವಿದೇಶದ ನಾಗರೀಕರು ಭಾರತದಲ್ಲಿಯೇ ಶಾಶ್ವತ ಇದ್ದು ಭಾರತದ ನಾಗರೀಕತ್ವವನ್ನು ಬಯಸಿ ಸ್ವೀಕರಿಸಿದರೆ, ಇವರೆಲ್ಲರೂ ಭಾರತದ ನಾಗರೀಕರಾಗಬಲ್ಲರು.

ಆದರೆ ಭಾರತದ ನಾಗರೀಕರಾಗುವವರು ರಾಷ್ಟ್ರನಿಷ್ಠೆಯುಳ್ಳವರಾಗಿದ್ದು ಸದಾ ಸರ್ವದಾ ರಾಷ್ಟ್ರದ ಏಳ್ಗೆಗೆ, ಭದ್ರತೆಗೆ ಕುಂದುಬಾರದಂತೆ ದುಡಿಯ ಬೇಕು. ಅವಶ್ಯ ಪ್ರಸಂಗದಲ್ಲಿ ತಮ್ಮ ಜೀವವನ್ನೂ ರಾಷ್ಟ್ರಕ್ಕಾಗಿ ಅರ್ಪಿಸಲು ಸಿದ್ಧರಿರಬೇಕು.

ಯಾವ ನಾಗರೀಕನಿಗೂ ಒಂದೇ ಕಾಲಕ್ಕೆ ೨ ದೇಶಗಳ ನಾಗರೀಕತ್ವ ಹೊಂದಲು ಬಾರದು.

**೩. ಗವ್ಹರ್ನರ್ ಅಥವಾ ರಾಜಪ್ರಮುಖ** :—ಇವರು ಅನು ಕ್ರಮವಾಗಿ ಅ. ಬ. ರಾಜಕೀಯ ವಿಭಾಗಗಳ ವರಿಷ್ಠ ಅಧಿಕಾರಿಗಳು. ಈ ಭಾಗದ ಭದ್ರತೆ ಮತ್ತು ಸಮೃದ್ಧಿಗಾಗಿ ಇವರು ದುಡಿಯುವರು. ಇವರನ್ನು ರಾಷ್ಟ್ರಾಧ್ಯಕ್ಷನು ನೇಮಿಸುವನು. ಇವರು ಮಂತ್ರಿಮಂಡಲವನ್ನು ನೇಮಿಸಿ ಆಡಳಿತೆ ಸಾಗಿಸುವರು. ಇವರಿಗೆ ಸರಕಾರದಿಂದ ನಿಶ್ಚಿತವೇತನ ಮತ್ತು ಭತ್ತೆಗಳು ದೊರೆಯುವವು. ರಾಜ್ಯಗಳಿಗಿರುವ ಶಾಸನಾಧಿಕಾರದ ಮಸೂದೆ ಗಳು ಇವರ ಸಹಿಯಾದ ನಂತರವೇ ಕಾಯಿದೆಗಳಾಗುತ್ತವೆ. ರಾಜ್ಯಗಳಲ್ಲಿ ಅವ್ಯವಸ್ಥೆಯುಂಟಾದರೆ, ಆರ್ಥಿಕ ದುರವಸ್ಥೆಯುಂಟಾದರೆ, ಆಡಳಿತೆಯನ್ನು

ತಮ್ಮ ಕೈಗೆ ತೆಗೆದುಕೊಂಡು ನಡೆಯಿಸುವರು. ವಿಶೇಷ ಪ್ರಸಂಗಗಳಲ್ಲಿ ಸುಗ್ರೀವಾಜ್ಞೆ ಹೊರಡಿಸಬಲ್ಲರು.

ಗವ್ಹರ್ನರನು ಭಾರತದ ನಾಗರೀಕನಿದ್ದು ೩೫ ವರ್ಷಗಳಿಗಿಂತ ಚಿಕ್ಕವನಿರಕೂಡದು. ಇವನ ಅಧಿಕಾರಾವಧಿ ಸಾಮಾನ್ಯವಾಗಿ ೫ ವರ್ಷ ಆದರೆ ರಾಷ್ಟ್ರಾಧ್ಯಕ್ಷನು ಯಾವಾಗ ಬೇಕಾದರೂ ಇವನನ್ನು ಪದಚ್ಯುತಗೊಳಿಸಬಲ್ಲನು. ಗವ್ಹರ್ನರನಾದರೂ ತನಗೆ ಬೇಕಾದಾಗ ರಾಜೀನಾಮೆಯನ್ನು ರಾಷ್ಟ್ರಾಧ್ಯಕ್ಷನಿಗೆ ಸಲ್ಲಿಸಬಲ್ಲನು.

ರಾಜಪ್ರಮುಖರಾದರೂ ಭಾರತದ ಹಿಂದಿನ ಸಂಸ್ಥಾನದ ಅಥವಾ ಭಾರತದಲ್ಲಿ ಇತ್ತೀಚಿಗೆ ರಚಿಸಲ್ಪಟ್ಟ ಸಂಸ್ಥಾನಗಳ ಅರಸರು. ಇವರನ್ನಾದರೂ ರಾಷ್ಟ್ರಾಧ್ಯಕ್ಷನು ವರ್ಷಾಸನದ ಮೇಲೆ ನೇಮಿಸಿರುವನು. ಅಧಿಕಾರಾವಧಿ ರಾಷ್ಟ್ರಾಧ್ಯಕ್ಷನ ಕೃಪೆ ಇರುವವರೆಗೆ, ಜೀವಾವಧಿಯವರೆಗೂ ಇರಬಹುದು.

**೪. ಸಂಯುಕ್ತ ರಾಷ್ಟ್ರ ಸಂಘ** :—(ಯು. ಎನ್. ಓ.) ೨ನೇ ಜಾಗತಿಕ ಮಹಾಯುದ್ಧದ ತರುವಾಯ ಮುಂದೆ ಯುದ್ಧದಿಂದಾಗುವ ಹಾನಿಯನ್ನು ತಪ್ಪಿಸಲು, ರಾಷ್ಟ್ರರಾಷ್ಟ್ರಗಳಲ್ಲಿ ಮಧುರ ಬಾಂಧವ್ಯ ಬೆಳೆಸಲು, ರಾಷ್ಟ್ರಗಳಲ್ಲಿ ಉದ್ಭವಿಸಬಹುದಾದ, ಅಥವಾ ಉದ್ಭವಿಸಿದ ತಂಟೆಗಳನ್ನೂ ಸಂಧಾನದಿಂದ ಬಿಡಿಸಿಕೊಳ್ಳಲು ಈ ಸಂಸ್ಥೆ ಸ್ಥಾಪಿಸಲ್ಪಟ್ಟಿದೆ. ಸಂ. ರಾ. ಸಂಘವು. ಅಮೇರಿಕೆಯ ಸ್ಯಾನ್ ಫ್ರಾನ್ಸಿಸ್‌ಕೋ ಪಟ್ಟಣದಲ್ಲಿ ೧೯೪೫ರಲ್ಲಿ ಸ್ಥಾಪಿತವಾಯಿತು.

ಸಂ. ರಾ. ಸಂಘದಲ್ಲಿ ೫೯ ರಾಷ್ಟ್ರಗಳು ಸದಸ್ಯರಾಗಿರುವರು. ಅವುಗಳಲ್ಲಿ ಭಾರತವೂ ಒಂದು ಸದಸ್ಯರಾಷ್ಟ್ರವಾಗಿದೆ. ಇವುಗಳಲ್ಲಿ ಪ್ರಮುಖ ರಾಷ್ಟ್ರಗಳಾದ ಅಮೇರಿಕೆ, ಫ್ರಾನ್ಸ್, ರಷ್ಯಾ, ಇಂಗ್ಲೆಂಡ್ ಮತ್ತು ರಾಷ್ಟ್ರೀಯ ಚೀನ (ಚಿಯಾಂಗ ಕೈಷೇಕ್ ಸರಕಾರ) ದೇಶಗಳಿಗೆ ವಿಶೇಷಾಧಿಕಾರವಿದೆ. ಚೀನದ ರಾಷ್ಟ್ರೀಯ ಸರಕಾರವು ಕಮ್ಯುನಿಸ್ಟ್ ಚೀನೀಯರಿಂದ ಸೋಲಿಸಲ್ಪಟ್ಟು, ಫಾರ್ಮೋಸಾ ನಡುಗಡ್ಡೆಗೆ ಓಡಿ ಹೋಗಿ ಅಲ್ಲಿ ಅಮೇರಿಕೆಯ ಸೈನ್ಯದ ನೆರವಿನಲ್ಲಿ ಜೀವ-ಉಳಿಸಿಕೊಂಡಿದೆ. ಈಗ ಚೀನದಲ್ಲಿ ಕಮ್ಯುನಿಸ್ಟ್ ಸರಕಾರವು ಸುವ್ಯವಸ್ಥಿತ ಆಡಳಿತೆ ಸಾಗಿಸುತ್ತಿದ್ದು ಭದ್ರವಾಗಿದೆ. ಅಲ್ಲದೆ ಜನ

ತೆಯ ಬೆಂಬಲವೂ ಈ ಸರಕಾರಕ್ಕಿದೆ. ಆದ್ದರಿಂದಲೇ ಈ ಸರಕಾರಕ್ಕೆ ಸಂ. ರಾ. ಸಂ. ದಲ್ಲಿ ಸದಸ್ಯತ್ವಕೊಡುವುದು ಉಚಿತವೆಂದು ಭಾರತ ಮತ್ತು ರಷ್ಯಾ ಗುಂಪಿನ ರಾಷ್ಟ್ರಗಳು ಪ್ರತಿಪಾದಿಸುತ್ತಿವೆ. ಆದರೆ ಅಮೇರಿಕೆಯು ತನ್ನ ಗುಂಪಿನಲ್ಲಿ ಬಹಳ ಪ್ರಭಾವಶಾಲಿಯಾಗಿರುವುದರಿಂದ ಕಮ್ಯುನಿಸ್ಟ್ ಸರಕಾರಕ್ಕೆ ಸದಸ್ಯತ್ವವನ್ನು ಈಯಲು ವಿರೋಧಿಸುತ್ತಿರುವುದು.

ಈ ಸಂಘದಲ್ಲಿ ೫ ವಿಭಾಗಮಾಡಲಾಗಿದೆ. ೧. ಭದ್ರತಾ ಮಂಡಲ ಇದರಲ್ಲಿ ಒಂದೊಂದು ರಾಷ್ಟ್ರಕ್ಕೆ ಒಬ್ಬ ಪ್ರತಿನಿಧಿ ಇರುವನು. ಈ ಮಂಡಲವು ರಾಷ್ಟ್ರರಾಷ್ಟ್ರಗಳಲ್ಲಿ ಉದ್ಭವಿಸಿದ ಯುದ್ಧ ತಂಟೆಯನ್ನು ನಿವಾರಿಸಲು ದುಡಿಯುವುದು. ೨. **ಸಾಮಾನ್ಯ ಸಮಿತಿ** (ಜನರಲ್ ಅಸೆಂಬ್ಲಿ) ಜಾಗತಿಕ ಹಣಕಾಸಿನ ತೊಂದರೆಯ ನಿವಾರಣೆಯ ಕಾರ್ಯ ಮಾಡುವುದು. ೩. **ಆರ್ಥಿಕ ಮತ್ತು ಸಾಮಾಜಿಕ** ವಿಷಯುಗಳನ್ನು ವಿಚಾರಿಸುವ ಸಮಿತಿ. ೪. **ಅಂತರರಾಷ್ಟ್ರೀಯ ನ್ಯಾಯಾಲಯು** ಇದರಲ್ಲಿ ೧೫ ಜನ ನ್ಯಾಯಾಧೀಶರಿರುವರು. ಸದಸ್ಯರಾಷ್ಟ್ರಗಳಲ್ಲಿ ಉದ್ಭವಿಸಿದ ತಂಟೆಗಳನ್ನು ನ್ಯಾಯವಾಗಿ ಬಗೆಹರಿಸುವ ಕಾರ್ಯ ಮಾಡುವುದು. ಈ ನ್ಯಾಯಾಲಯಕ್ಕೆ ಕನ್ನಡಿಗರಾದ **ಬೆನಗಲ್ ನರಸಿಂಗರಾಯರು** ನ್ಯಾಯಾಧೀಶರಾಗಿ ಚುನಾಯಿತರಾಗಿರುವರು. ಈ ನ್ಯಾಯಾಲಯುವು ಹಾಲೆಂಡದ ಹೇಗ ಎಂಬಲ್ಲಿದೆ. **೫. ಕಾರ್ಯಕಾರಿ ಮಂಡಲಗಳು.** ಸುವ್ಯವಸ್ಥಿತ ಆಡಳಿತೆನೋಡಿಕೊಂಡು ರಾಷ್ಟ್ರರಾಷ್ಟ್ರಗಳಲ್ಲಿ ಹಿತಸಂವರ್ಧನೆಯನ್ನು ಆಚರಣೆಗೆ ತರುವುದೇ ಇವುಗಳ ಕೆಲಸ. ಈ ಕಚೇರಿಯು ಅಮೇರಿಕೆಯ ಲೇಕಸೆಸ್ಸಿನಲ್ಲಿದೆ. **ಶ್ರೀ ರಾಜೇಶ್ವರದಯಾಳರು** :—ಸಂ. ರಾ. ಸಂಘದಲ್ಲಿ ಶಾಶ್ವತ ಪ್ರತಿನಿಧಿಗಳಾಗಿದ್ದಾರೆ.

೫. **ಮುಂಗಡ ಪತ್ರಿಕೆ** :—ಯಾವುದೇ ಕಾರ್ಯವಾಗಬೇಕಾದರೆ ಹಣದ ಅವಶ್ಯಕತೆ ಬಹಳ. ಆದ್ದರಿಂದ ನಮ್ಮ ಸರಕಾರವು ಆಡಳಿತೆಯ ಹೊಣೆಹೊರಲೂ, ಲೊಕೋಪಯೋಗಿ ಯೋಜನೆಯನ್ನು ಕಾರ್ಯಗತ ಮಾಡಲೂ ನಮ್ಮಿಂದ ವಿವಿಧ ರೀತಿಯಲ್ಲಿ ಬೇರೆ ಬೇರೆ ಬಾಬುಗಳ ಮೇಲೆ ಕರವನ್ನು ಹಾಕಿ ಹಣವನ್ನು ಪಡೆಯುವುದು. ಈ ಕರಗಳ ಆಯುವನ್ನು ನೋಡಿಕೊಂಡು ವ್ಯಯದ ಬಗ್ಗೆ ನಿರ್ಣಯಿಸಬೇಕಾಗುವುದು. ಆದ್ದರಿಂದ ಪ್ರತಿಯೊಂದು ದೇಶದ ರಾಜ್ಯ ಮತ್ತು ಒಕ್ಕೂಟದವರು ತಮ್ಮ **"ಆಯುವ್ಯದ"** ಅಂದಾಜ ಪತ್ರಿಕೆಯನ್ನು ತಯಾರಿಸುವರು.

ಇದನ್ನು ಪ್ರತಿವರ್ಷವೂ ಮುಂಚಿತವಾಗಿಯೇ ತಯಾರಿಸುವುದರಿಂದ ಇದಕ್ಕೆ ಮುಂಗಡ ಪತ್ರಿಕೆ ಎಂಬ ಹೆಸರು ರೂಢಿಯಲ್ಲಿದೆ.

೬. **ಲೋಕಸಭೆ**:— (ಪ್ರಜಾಪ್ರತಿನಿಧಿ ಸಭೆ) ಈ ಸಭೆಯಲ್ಲಿ ೫೦೦ ಜನ ಚುನಾಯಿತ ಸದಸ್ಯರಿರುವರು. ಇವರು ೫ ರಿಂದ ೭|| ಲಕ್ಷ ಜನಸಂಖ್ಯೆಗೆ ಒಬ್ಬರಂತೆ ಭಾರತದ ನಾಗರೀಕರಿಂದ ಚುನಾಯಿತ ರಾಗಿರುವರು. ಈ ಸಭೆಯು ಒಕ್ಕೂಟ ಭಾರತದ ಸುವ್ಯವಸ್ಥಿತ ಆಡಳಿತೆ ಗಾಗಿ ಮಂತ್ರಿ ಮಂಡಲದೊಡನೆ ಸಹಕರಿಸುವದು. ತಪ್ಪುತಡೆಗಳಿದ್ದಲ್ಲಿ ಸಭೆಯಲ್ಲಿ ಚರ್ಚಿಸಿ ಸೂಕ್ತ ಮಾರ್ಗದರ್ಶನ ಮಾಡುವುದು. ಒಕ್ಕೂಟ ಯಾದಿಯಲ್ಲಿಯ ವಿಷಯಗಳ ಬಗ್ಗೆ ಅವಶ್ಯ ಕಾಯಿದೆಗಳನ್ನು ಮಾಡುವುದು. ಈ ಸಭೆಯು ಕೂಡಿದಾಗ ಸಂಸದಿನಿಂದ ನಿರ್ಣಿತವಾದ ಭತ್ತೆ ಸದಸ್ಯರಿಗೆ ದೊರೆಯುವುದು. ಒಕ್ಕೂಟ ಸರಕಾರದ ಅಂದಾಜು ಪತ್ರಿಕೆಯು ಮೊದಲು ರಾಷ್ಟ್ರಾಧ್ಯಕ್ಷನ ಅವಗಾಹನೆಗೆ ತಂದು ಈ ಸಭೆಯಲ್ಲಿ ಚರ್ಚಿಸಲ್ಪಡುವುದು.

೭. **ಲೆಜಿಸ್ಲೇಟಿವ್ಹ ಕೌನ್ಸಿಲ್** :—(ವಿಧಿಮಂಡಲ) ಈ ಸಭೆಯ ಸದಸ್ಯರ ಸಂಖ್ಯೆಯು ಸಂಸದಿನಿಂದ ನಿರ್ಣಯಿಸಲ್ಪಡುವುದು, ಈ ಸಭೆಯಲ್ಲಿ ೪೦ ಕ್ಕಿಂತ ಕಡಿಮೆಯಿಲ್ಲದಷ್ಟು, ಲೋಕಸಭೆಯ ಸದಸ್ಯರ ಸಂಖ್ಯೆಗಿಂತ ೧/೪ಕ್ಕಿಂತ ಹೆಚ್ಚಾಗದಷ್ಟು, ಸದಸ್ಯರಿರುವರು.

ಒಟ್ಟು ಸದಸ್ಯರಲ್ಲಿ ೧/೩ರಷ್ಟು ಸದಸ್ಯರನ್ನು ಶಾಸನ ಸಭೆಯ ಸದಸ್ಯ ರಲ್ಲದವರಿಂದ ಆರಿಸುವರು. ೧/೩ರಷ್ಟು ಸದಸ್ಯರು ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಿಂದಲೂ, ೧/೧೨ರಷ್ಟು ಸದಸ್ಯರು ರಾಜ್ಯದಲ್ಲಿ ವಾಸಿಸುವವರು ವಿಶ್ವವಿದ್ಯಾನಿಲಯದ ಪದವೀಧರರಾಗಿ ೩ ವರ್ಷಗಳಾದವರಿಂದ ಆರಿಸಲ್ಪಡು ವರು. ೧/೧೨ರಷ್ಟು ಸದಸ್ಯರು ಮಾಧ್ಯಮಿಕ ಶಾಲೆಯ ದರ್ಜೆಗಿಂತ ಕಡಿಮೆ ಯಲ್ಲದ ವಿದ್ಯಾಪೀಠಗಳಲ್ಲಿ ಕನಿಷ್ಟ ೩ ವರ್ಷ ಕೆಲಸಮಾಡಿದ ಶಿಕ್ಷಕರಿಂದ ಆರಿಸಲ್ಪಡುವರು. ೧/೬ರಷ್ಟು ಸದಸ್ಯರು ಸಾಹಿತ್ಯ, ಕಲೆ, ವಿಜ್ಞಾನ, ಸಹ ಕಾರಿ ಚಳವಳಿ ಮತ್ತು ಸಮಾಜ ಸೇವೆಯಲ್ಲಿ ಹೆಸರಾದವರಿದ್ದು, ಇವರು ಗವ್ಹರ್ನರರಿಂದ ನಾಮಕರಣಮಾಡಲ್ಪಡುವರು. ಈ ಸಭೆಯಲ್ಲಿಯ ಇಬ್ಬರನ್ನು ಸದಸ್ಯರು ಚೇರ್ಮನ್ ಮತ್ತು ಡೆಪ್ಯುಟಿ ಚೇರ್‌ಮನ್ನರನ್ನಾಗಿ ಆರಿಸುವರು.

ಕೇಂದ್ರದ ರಾಜ್ಯಪರಿಷತ್ತು (ಕೌನ್ಸಿಲ್ ಆಫ್ ಸ್ಟೇಟ್ಸ)ನಂತೆ ಶಾಶ್ವತ ಸಭೆಯಾಗಿದ್ದು ಪ್ರತಿವರ್ಷ ೧/೩ರಷ್ಟು ಸದಸ್ಯರು ನಿವೃತ್ತರಾಗುವರು. ಈ ಸಭೆಯ ಅಧಿವೇಶನವು ವರ್ಷಕ್ಕೆ ೨ ಸಾರೆ ಸೇರುವುದು.

**೮. ಮಸೂದೆ** :—ಯಾವುದೇ (ಯಾದಿ) ಪಟ್ಟಿಯಲ್ಲಿನ ವಿಷಯವು ಕಾಯಿದೆಯಾಗಬೇಕಾದರೆ, ಮೊದಲು ಸಭೆಗಳಲ್ಲಿ ಕರಡಿನ ರೂಪದಲ್ಲಿ ಚರ್ಚೆಗೆ ಬರುವುದು. ಚರ್ಚೆಯ ನಂತರ ಉಪಯುಕ್ತ ಬದಲಾವಣೆಗಳೇನಾದರೂ ಇದ್ದರೆ, ಅವು ಸೇರಿಸಲ್ಪಡುವುವು. ಮುಂದೆ ಇವು ಆಯಾ ರಾಜಕೀಯ ವಿಭಾಗದ ವರಿಷ್ಠಾಧಿಕಾರಿಗಳ (ಅವರ ಅಧಿಕಾರಕ್ಷೇತ್ರಕ್ಕನುಸರಿಸಿ) ಸಹಿಗಾಗಿ ಕಳುಹಿಸಲ್ಪಡುವವು. ಇವುಗಳಿಗೇ ಮಸೂದೆ (ಬಿಲ್) ಎಂದು ಹೆಸರು. ವರಿಷ್ಠರ ಸಹಿಯಾದ ಮೇಲೆ ಇವು ಕಾಯಿದೆಗಳಾಗುವವು.

**೯. ರಾಜ್ಯ ಪರಿಷತ್ತು** :— (ಕೌನ್ಸಿಲ್ ಆಫ್ ಸ್ಟೇಟ್ಸ್) ೨೫೦ಕ್ಕೆ ಮಿಕ್ಕದಷ್ಟು ಸದಸ್ಯರು ಈ ಸಭೆಯಲ್ಲಿರುವರು. ಇದರಲ್ಲಿ ೧೨ ಜನ ಸದಸ್ಯರು ಸಾಹಿತ್ಯ ಕಲೆ, ವಿಜ್ಞಾನ, ಸಾಮಾಜಿಕ ಸೇವೆಯಲ್ಲಿ ಹೆಸರಾದವರಿದ್ದು, ಇವರನ್ನು ರಾಷ್ಟ್ರಾಧ್ಯಕ್ಷನು ನಾಮಕರಣಮಾಡುವನು. ಉಳಿದ ಸದಸ್ಯರನ್ನು ಪ್ರತಿಯೊಂದು ರಾಜ್ಯದ ಕೆಳಮನೆಯ ಸದಸ್ಯರು ತಮ್ಮ ರಾಜ್ಯದಿಂದ ಹೋಗಬೇಕಾದಷ್ಟು ಸದಸ್ಯರನ್ನು ಗುಪ್ತಮತದಾನ ಪದ್ಧತಿಯಿಂದ ಆರಿಸಿಕಳಿಸುವರು. (ಆಯಾ ರಾಜ್ಯದಿಂದ ಕಳುಹಿಸಬೇಕಾದ ಸದಸ್ಯರ ಸಂಖ್ಯೆಯು ಮೊದಲೇ ನಿರ್ಣಯಿಸಲ್ಪಟ್ಟಿರುವುದು. ಈ ಪರಿಷತ್ತು ಕಾಯಂ ಉಳಿಯುವುದು, ಆದರೆ ೨ ವರ್ಷಕ್ಕೊಮ್ಮೆ ೧/೩ ರಷ್ಟು ಸದಸ್ಯರು ಬದಲಾಗುವರು. ರಾಷ್ಟ್ರಾಧ್ಯಕ್ಷನೇ ಈ ಪರಿಷತ್ತಿನ ಸಭಾಪತಿ. ಪರಿಷತ್ತು ತಮ್ಮ ಸದಸ್ಯರಲ್ಲಿ ಒಬ್ಬನನ್ನು ಉಪ ಸಭಾಪತಿಯನ್ನಾಗಿ ಆರಿಸುವುದು. ಸಭಾಪತಿಯು ಹಾಜರಿಲ್ಲದಾಗ ಉಪಸಭಾಪತಿಯು ಸಭೆಯಲ್ಲಿ ಕಾರ್ಯಕ್ರಮ ಸಾಗಿಸುವನು. ಸದಸ್ಯರಿಗೆಲ್ಲಾ ಭತ್ತೆ ದೊರೆಯುವುದು.

೧೦. **ಅಟರ್ನಿ ಜನರಲ್** :—ಮೇಧಾವಿಯೂ, ವರಿಷ್ಠ ನ್ಯಾಯಾಲಯದ ನ್ಯಾಯಾಧೀಶನಾಗುವ ಯೋಗ್ಯತೆಯುಳ್ಳವನೂ ಆದ ಇವನನ್ನು ರಾಷ್ಟ್ರಾಧ್ಯಕ್ಷನು ಯೋಗ್ಯ ಸಂಬಳ ಮತ್ತು ಭತ್ತೆಯನ್ನು ಗೊತ್ತುಮಾಡಿ ನೇಮಿಸುವನು.

ಇವನು ಭಾರತ ಸರಕಾರಕ್ಕೆ ಕಾಯಿದೆಯ ಬಗ್ಗೆ ಸಲಹೆ ಕೊಡುವುದು, ನ್ಯಾಯಾಲಯದಲ್ಲಿ ಸರಕಾರದ ಪರವಾಗಿ ವಾದಿಸುವುದು ಮುಂತಾದ ಕಾರ್ಯ ಮಾಡುವನು.

## ಜಿಲ್ಲೆಯ ಶಾಂತಿ, ಸುವ್ಯವಸ್ಥೆಯನ್ನು ಕಾಯುವ ಹೊಣೆಯಾರಿಗಿರುತ್ತದೆ ಮತ್ತು ಅವನು ಮಾಡುವ ಇತರ ಕಾರ್ಯಗಳನ್ನು ಬರೆಯಿರಿ.

ಜಿಲ್ಲೆಯ ಶಾಂತಿ, ಸುವ್ಯವಸ್ಥೆಯು ಕಲೆಕ್ಟರನೆಂಬ ಆಡಳಿತಾಧಿಕಾರಿಯಿಂದ ಕಾಯಲ್ಪಡುವುದು. ಇವನನ್ನು ರಾಜ್ಯದ ಗವ್ಹರ್ನರನು ನೇಮಿಸುವನು. ಇವನು ಜಿಲ್ಲೆಯಲ್ಲಿ ಸರಕಾರವು ಮಾಡಿದ ಕಾಯಿದೆಗಳನ್ನು ಜಾರಿಯಲ್ಲಿ ತರುವುದು, ತೆರಿಗೆಯನ್ನು ವಸೂಲುಮಾಡುವುದು ಮುಂತಾದುವನ್ನು ಇವನ ಕೆಳಗಿನ ಅಧಿಕಾರಿಗಳಾದ ಮಾಮಲೇದಾರ್ ಮುಂತಾದವರಿಂದ ಮಾಡಿಸುವನು.

ಇವನಿಗೆ ಜಿಲ್ಲಾ ಮ್ಯಾಜಿಸ್ಟ್ರೇಟರನ ಅಧಿಕಾರವೂ ಇದೆ. ಜಿಲ್ಲೆಯಲ್ಲಿ ಶಾಂತಿ, ಸುವ್ಯವಸ್ಥೆ ಕಾಯಲು ·ಕಾಲಕಾಲಕ್ಕೆ ಆಜ್ಞೆಗಳನ್ನು ಹೊರಡಿಸುವನು. ಆಗಿಂದಾಗ್ಗೆ ಜಿಲ್ಲೆಯಲ್ಲಿ ಸಂಚರಿಸಿ ಜನರ ಸ್ಥಿತಿಗತಿಗಳನ್ನು ಅರಿತುಕೊಳ್ಳುವನು.

## ರಾಜ್ಯದ ಪೋಲೀಸ್ ಖಾತೆಯ ಕಾರ್ಯ ರಚನೆಯ ಸಾಮಾನ್ಯ ರೂಪರೇಷೆ ಕೊಡಿರಿ.

ರಾಜ್ಯದ ಪೋಲೀಸ್ ಖಾತೆಯು ಗೃಹಮಂತ್ರಿಯ ಕಡೆ ಇರುತ್ತದೆ. ಗೃಹಮಂತ್ರಿಯು ತನ್ನ ಧೋರಣೆಯನ್ವಯ, ಗೃಹಶಾಖೆಯ ಕಾರ್ಯದರ್ಶಿಯ್ರ ಮುಖಾಂತರ ವಿಧಿವಿಧಾನಗಳನ್ನು ಆಚರಣೆಯಲ್ಲಿ ತರಲು **ಇನ್ಸ್ಪೆಕ್ಟರ್. ಜನರಲ್ ಆಫ್ ಪೋಲೀಸ್** ಎಂಬ ಅಧಿಕಾರಿಗೆ ತಿಳಿಸುವನು. ಐ. ಜಿ ಅಧಿಕಾರಿಯು ತನ್ನ ಕೈಕೆಳಗಿನ ಅಧಿಕಾರಿಗಳಾದ ಡಿ. ಐ. ಜಿ. ಗೂ. ಡಿ. ಐ. ಜಿ. ಯು ಜಿಲ್ಲಾಧಿಕಾರಿಗಳ ಮುಂಖಾತರ ಅಸಿಸ್ಟೆಂಟ್ ಪೋಲೀ ಇನ್ಸ್ಪೆಕ್ಟರ್, ಇನ್ಸ್ಪೆಕ್ಟರ್, ಸಬ್ ಇನ್ಸ್ಪೆಕ್ಟರ್ ಇವರಿಗೆ ಆಜ್ಞೆ ಕಳಿಸುವನು. ಆಗ ಪೋಲೀಸ್ ಕಾನ್ಸ್ಟೇಬಲರ ಮುಖಾಂತರ ಆಜ್ಞೆ ಆಚರಣೆ ಬರುವುದು.

## ಜಿಲ್ಲಾ ಲೋಕಲ್ ಬೋರ್ಡ್ ಆಡಳಿತ ರಚನೆ, ಮತ್ತು ಕರ್ತವ್ಯಗಳ ಬಗ್ಗೆ ಬರೆಯಿರಿ.

ಜಿಲ್ಲೆಯಲ್ಲಿಯ ನಗರಸಭೆಗಳ ಕ್ಷೇತ್ರವನ್ನು ಬಿಟ್ಟು ಉಳಿದ, ಪ್ರದೇಶದ ಆಡಳಿತೆಯಲ್ಲಾ ಜಿ. ಲೋ. ಬೋರ್ಡಿನ ಸದಸ್ಯರಿಂದ ನಡೆಯುವುದು.

ಸದಸ್ಯರ ಸಂಖ್ಯೆಯು ಆಯಾ ಜಿಲ್ಲೆಯ ಜನಸಂಖ್ಯಾಮಾನದಿಂದ ನಿರ್ಣ ಯಿಸಲ್ಪಟ್ಟಿರುತ್ತದೆ. ಸದಸ್ಯರು ಪ್ರೌಢಮತದಾನ ಪದ್ಧತಿಯಿಂದ ಚುನಾ ಯಿತರಾಗಿರುವರು. ಹಿಂದುಳಿದ ಹಾಗು ಸ್ತ್ರೀಯರಿಗಾಗಿ ಕೆಲ ಜಾಗೆಗಳು ಕಾಯ್ದಿಡಲ್ಪಟ್ಟಿರುತ್ತವೆ. ಸದಸ್ಯರು ತಮ್ಮ ಸದಸ್ಯರೊಳಗಿನಿಂದ ಒಬ್ಬೊಬ್ಬ ರನ್ನು ಅಧ್ಯಕ್ಷ ಹಾಗೂ ಉಪಾಧ್ಯಕ್ಷರನ್ನಾಗಿ ಆರಿಸುವರು.

ರಾಜ್ಯದ ದೊಡ್ಡ ಸ್ವರಾಜ್ಯ ಸಂಸ್ಥೆಯಾದ ಲೋಕಲ್ ಬೋರ್ಡು, ಜಿಲ್ಲೆಯಲ್ಲಿಯ ರಸ್ತೆಗಳ ನಿರ್ಮಾಣ ಮತ್ತು ದುರಸ್ತಿ, ಸೇತುವೆ (ಪೂಲ) ಕಟ್ಟುವುದು, ದುರಸ್ತಿಗೊಳಿಸುವುದು, ಧರ್ಮ ಶಾಲೆ, ಔಷಧಾಲಯ, ಪ್ರಾಥಮಿಕ ಶಿಕ್ಷಣದ ವ್ಯವಸ್ಥೆ, ಬೀಜದ ಹೋರಿಗಳನ್ನು ಒದಗಿಸುವುದು, ಒಕ್ಕಲಿಗರಿಗೆ ಬೀಜಗಳನ್ನು ಒದಗಿಸುವುದು, ಔದ್ಯೋಗಿಕ ಪ್ರಗತಿಗಾಗಿ ಪ್ರದರ್ಶನಗಳೇ ಮುಂತಾದುವುಗಳನ್ನು ಏರ್ಪಡಿಸುವುದು, ನೀರಿನ ಪೂರೈ ಕೆಯ ವ್ಯವಸ್ಥೆ ಇವೆಲ್ಲ ಕಾರ್ಯಗಳು ಈ ಬೋರ್ಡಿನಿಂದ ಸಾಗುತ್ತವೆ.

ಶಿಕ್ಷಣದ ಸಲುವಾಗಿ **ಸ್ಕೂಲ ಬೋರ್ಡ್** ಎಂಬ ಒಂದು ಸಮಿತಿ ಯಿದೆ. ಇದಕ್ಕಾದರೂ ಲೋ. ಬೋರ್ಡಿನ ಸದಸ್ಯರು ತಮ್ಮೊಳಗಿನ ಅಥವಾ ಹೊರಗಿನಿಂದ ಉಮೇದುವಾರರನ್ನು ಆರಿಸುವರು. ರಾಜ್ಯ ಸರಕಾರ ವಾದರೂ ಎರಡು ಅಥವಾ ಮೂರು ಜನ ಶಿಕ್ಷಣ ತಜ್ಞರನ್ನು ನಿಯಮಿಸು ವುದು. ಸಮಿತಿಯ ಎಲ್ಲ ಸದಸ್ಯರೂ ತಮ್ಮೊಳಗಿನ ಇಬ್ಬರನ್ನು ಆರಿಸ್ಕೊಂಡು ಒಬ್ಬನನ್ನು ಚೆರ್‌ಮನ್ನನನ್ನಾಗಿಯೂ ಇನ್ನೊಬ್ಬನನ್ನು ವಾಯ್ಸ್ ಚೇರ್ಮನ್ನ ನನ್ನಾಗಿಯೂ ಮಾಡುವರು. ಈ ಖಾತೆಯ ಆಡಳಿತೆಯು ಸುವ್ಯವಸ್ಥೆಯಿಂದ ಸಾಗಲೆಂದು, ರಾಜ್ಯ ಸರಕಾರವು "**ಅಡ್ಮಿನಿಸ್ಟ್ರೇಟಿವ್ ಆಫೀಸರ**" ಎಂಬ ಶಿಕ್ಷಣ ತಜ್ಞನಾದ ಓರ್ವ ಆಡಳಿತ ಅಧಿಕಾರಿಯನ್ನು ನೇಮಿಸುವುದು. ಈ ಅಧಿಕಾರಿಯೇ ಜಿಲ್ಲೆಯಲ್ಲಿಯ ಎಲ್ಲ ಲೋ. ಬೋ. ಶಾಲೆಗಳು ಸುವ್ಯವ ಸ್ಥಿತವಾಗಿ ನಡೆಯುವಂತೆ ನೋಡಿಕೊಳ್ಳುವನು.

ಲೋಕಲ್ ಬೋರ್ಡು ಆಡಳಿತೆಗೆ ಹಣವನ್ನು ಕರಗಳ ಮುಖಾಂತರ ಕೂಡಿಸುವುದು. ಇದಕ್ಕಾಗಿ ನಾವೆಗಳನ್ನು ಸವಾಲು ಮಾಡುವುದು, ದವಾಖಾನೆ (ಔಷಧಾಲಯ), ಶಾಲೆಗಳಿಂದ ಫೀ ವಸೂಲು ಮಾಡುವುದು, ಜಾತ್ರೆ, ಸಂತೆಗಳಲ್ಲಿ ಸುಂಕ ವಸೂಲ ಮಾಡುವುದು, ಲೋಕಲ್ ಫಂಡ ಅಲ್ಲದೆ ಸರಕಾರದಿಂದ ಸಹಾಯಕ ಧನವೂ ದೊರೆಯುವುದು.

## ಗ್ರಾಮ ಪಂಚಾಯಿತಿಗಳ ಕೆಲಸಯಾವುವು? ಅದರ ಮ್ಯಾನೇಜಿಂಗ್ ಕಮಿಟಿಯು ಆಯ್ಕೆ ಹೇಗಾಗುತ್ತದೆ?

ಗ್ರಾಮ ಪಂಚಾಯಿತಿಯು ಗ್ರಾಮದಲ್ಲಿ ಓಣಿಗಳನ್ನು ಪಾಡಿಸುವುದು, ಅವುಗಳ ಸ್ವಚ್ಛತೆ ಕಾಯ್ದುಕೊಳ್ಳುವುದು, ರಾತ್ರಿ ದೀಪ ಹಚ್ಚುವುದು, ನೀರಿನ ಪೂರೈಕೆ, ಸ್ಮಶಾನ, ಧರ್ಮ ಶಾಲೆ, ಜಾತ್ರೆ-ಸಂತೆಗಳನ್ನು ಕೂಡಿಸುವುದು. ಅಲ್ಲದೆ ಹಣದ ಅನುಕೂಲತೆಯಿದ್ದರೆ ಕ್ರೀಡಾಂಗಣ, ಪ್ರವಾಸಿಗರಿಗಾಗಿ ಅರವಟ್ಟಿಗೆ, ಗಿಡಗಳನ್ನು ನೆಡುವುದು, ಊರಿನಲ್ಲಿ ಔಷಧೋಪಚಾರ, ವಾಚನಾಲಯ ಇವೇ ಮೊದಲಾದ ಕಾರ್ಯಗಳನ್ನು ಸುವ್ಯವಸ್ಥೆಯಿಂದ ನೋಡಿಕೊಳ್ಳುವುದು. ಇತ್ತೀಚಿಗೆ ಸರಕಾರವು ಈ ಸಮಿತಿಗೆ ಚಿಕ್ಕಪುಟ್ಟ ವ್ಯಾಜ್ಯಗಳನ್ನು ತೀರಿಸುವ ಅಧಿಕಾರವನ್ನೂ ಇತ್ತಿದೆ.

ಗ್ರಾಮ ಪಂಚಾಯಿತಿಯ ಸದಸ್ಯರು ತಮ್ಮೊಳಗಿನಿಂದ ಸರಪಂಚ ಮತ್ತು ಉಪ ಸರಪಂಚನನ್ನು ಆಯ್ದುಕೊಳ್ಳುವರು. ಮುಂದೆ ಇವರೊಳಗಿಂದ ನ್ಯಾಯದಾನ ಸಮಿತಿ, ಶಾಲಾಸಮಿತಿ, ಸ್ವಚ್ಛತೆ ಸಮಿತಿ, ಮುಂತಾದವುಗಳನ್ನು ರಚಿಸಿಕೊಂಡು ಆಡಳಿತೆ ನಡೆಯಿಸುವರು. ಇವರಿಗೆ ಯಾವುದೇ ಪಗಾರ ಅಥವಾ ಭತ್ತೆ ದೊರೆಯುವುದಿಲ್ಲ.

## ಮುನಸೀಪಾಲಿಟಿಯ ಸದಸ್ಯರನ್ನು ಹೇಗೆ ಚುನಾವಣೆ ಮಾಡುವರು? ಮತ್ತು ಮುನಿಸಿಪಾಲಿಟಿಯ ಕರ್ತವ್ಯಗಳೇನು?

ಮುನಿಸೀಪಾಲಿಟಿಯ ಸದಸ್ಯರಾದರೂ ಪ್ರೌಢ ಮತದಾನ ಪದ್ಧತಿಯಂತೆ ಚುನಾಯಿತರಾಗಿರುತ್ತಾರೆ. ಗ್ರಾಮ ಪಂಚಾಯಿತಿಯಂತೆ ಇದಕ್ಕಾದರೂ ಸ್ತ್ರೀ ಹಾಗು ಹಿಂದುಳಿದವರಿಗಾಗಿ ಜಾಗೆ ಕಾಯ್ದಿರಿಸಲ್ಪಟ್ಟಿರುತ್ತವೆ. ಗ್ರಾಮ ಪಂಚಾಯಿತಿ ಕೈಕೊಳ್ಳುವ ಎಲ್ಲ ಕಾರ್ಯಗಳೂ ಕೈಕೊಳ್ಳಲ್ಪಡುತ್ತವೆ. ( ಆದರೆ ನ್ಯಾಯದಾನ ಮಾತ್ರ ಮಾಡುವುದಿಲ್ಲ; ಏಕೆಂದರೆ ನಗರಗಳಲ್ಲಿ ನ್ಯಾಯದಾನಕ್ಕಾಗಿ ರೆಸಿಡೆಂಟ್ ಮ್ಯಾಜಿಸ್ಟ್ರೇಟ್ ಕೋರ್ಟ್, ಸಬ್ ಜಜ್ ಕೋರ್ಟ್ ಮುಂತಾದುವುಗಳಿವೆ. )

ಗ್ರಾಮ ಪಂಚಾಯತಿಗಿಂತ ಮುನಿಸೀಪಾಲಿಟಿಯ ಉತ್ಪನ್ನವು ಸಾಮಾನ್ಯವಾಗಿ ಹೆಚ್ಚಿರುತ್ತದೆ. ಆದ್ದರಿಂದ ಇವರು ನೀರಿನ ಪೂರೈಕೆ, ದೀಪ, ಉದ್ಯಾನವನ, ರಸ್ತೆನಿರ್ಮಾಣ, ಸ್ವಚ್ಛತೆ, ಪ್ರಾಥಮಿಕ ಶಿಕ್ಷಣ ವ್ಯವಸ್ಥೆ, ಕ್ರೀಡಾಂಗಣ ಮುಂತಾದ ಹೆಚ್ಚು ಅನುಕೂಲತೆಗಳನ್ನು ಕಲ್ಪಿಸಿಕೊಡ

ಬಹುದು. ದೊಡ್ಡ ದೊಡ್ಡ ನಗರ ಸಭೆಗಳಲ್ಲಿ ಮುನಿಸಿಪಲ್ ಸ್ಕೂಲ್ ಬೋರ್ಡ್ ಸಹ, ಲೋಕಲ್ ಬೋರ್ಡಿನ ಸ್ಕೂಲ್‌ಬೋರ್ಡಿನಂತೆ ಕಾರ್ಯ ಸಾಗಿಸುವುದು. ನಗರ ಸಭೆಯ ಆಡಳಿತೆಯಲ್ಲಿ ಓವ್ಹರ್‌ಸಿಯರ್, ಇಂಜನಿಯರ್, ಡಾಕ್ಟರ್, ಹೆಲ್ಥ್ ಆಫೀಸರರೂ ಆಯಾ ಶಾಖೆಯಲ್ಲಿ ದುಡಿಯುವರು. ನಗರ ಸಭೆಯಲ್ಲಿ ವೇತನದ ಮೇಲೆ ನೇಮಿಸಲ್ಪಟ್ಟ ಚೀಫ್ ಆಫೀಸರನೆಂಬ ಆಡಳಿತಾಧಿಕಾರಿಯಿರುವನು. ಇವನೇ ಸಭೆಯವರ ನಿರ್ಣಯಗಳನ್ನು ಆಚರಣೆಯಲ್ಲಿ ತರುವ ವ್ಯವಸ್ಥೆ ನೋಡಿಕೊಳ್ಳುವನು. ನಗರ ಸಭೆಯ ಸದಸ್ಯರಿಗೆ ವೇತನ ಇರುವದಿಲ್ಲ.

ಮುಂಬೈ—ಅಹಮದ್‌ನಗರ-ಪುಣೆ ಮುಂತಾದ ನಗರಗಳು ಬಹಳ ದೊಡ್ಡವಿರುವುದರಿಂದ, ಇವುಗಳಿಗೆ ಕೆಲ ವಿಶೇಷ ಅಧಿಕಾರಗಳನ್ನು ಕೊಟ್ಟು "ಕಾರ್ಪೋರೇಷನ್" ಮಾಡಲಾಗಿದೆ.

ಮುನಿಸೀಪಾಲಿಟಿಯ ಆದಾಯ: ನೀರಿನ ಕರ, ಶೌಚಕೂಪದ ಕರ, ಅಂಗಡಿಯಕರ, ಮಾಲಿನಕರ, ಮನೆಯ ಬಾಡಿಗೆಯ ಮೇಲಿನಕರ, ಸೈಕಲ್, ಚಕ್ಕಡಿ ( ಬಂಡಿ )ಯ ಮೇಲಿನಕರ, ಮದುವೆ-ಮುಂಜಿ-ವತ್ತೃಕಾದಿ ಸಮಾರಂಭಗಳ ಕರ, ಮಾರ್ಕೆಟ್ಟಿನಲ್ಲಿಯ ಅಂಗಡಿಗಳ ಭಾಡಿಗೆ, ನಗರ ಸಭೆಯ ಕಟ್ಟಡಗಳ ಭಾಡಿಗೆ, ಶಾಲೆ-ಔಷಧಾಲಯಗಳಲ್ಲಿ ವಸೂಲಾದ ಫೀ, ಸರಕಾರದಿಂದ ದೊರೆಯುವ ಸಹಾಯಕ ಧನ ಇವೆಲ್ಲವೂ ಮುನಸೀಪಾಲಿಟಿಯ ಉತ್ಪನ್ನದ ಬಾಬುಗಳು.

**೧೯೫೨ ರ ಚುನಾವಣೆಯಾದನಂತರ ಮುಂಬೈರಾಜ್ಯದಲ್ಲಿ ರಚಿತವಾದ ಮಂತ್ರಿಮಂಡಲದಲ್ಲಿ ಯಾರು ಯಾರು ಇರುವರು, ಮತ್ತು ಅವರು ವಹಿಸಿಕೊಂಡಿರುವ ಖಾತೆಗಳು ಯಾವುವು?**

| | | |
|---|---|---|
| ೧. ಮುರಾರಜಿ ದೇಸಾಯಿ | ಮುಖ್ಯಮಂತ್ರಿ. | ಗೃಹ, ರಾಜಕೀಯ ಹಾಗೂ ಸರ್ವಿಸಿಸ್. |
| ೨. ಬಿ. ಎಸ್. ಹಿರೆ | ಮಂತ್ರಿ. | ಕಂದಾಯ, ಒಕ್ಕಲತನ ಹಾಗು ಅರಣ್ಯ. |
| ೩. ದಿನಕರರಾವ್ ದೇಸಾಯಿ | ,, | ಶಿಕ್ಷಣ ಹಾಗೂ ಕಾಯ್ದೆ. |
| ೪. ಡಾ. ಜಿವರಾಜ ಮೆಹತಾ | ,, | ಹಣಕಾಸು ಉದ್ದಿಮೆ ಹಾಗೂ ಮಧ್ಯಪಾನ ಪ್ರತಿಬಂಧ. |

೫. ಎಂ. ಪಿ. ಪಾಟೀಲ್ ಮಂತ್ರಿ ಸಹಕಾರ ಹಾಗೂ ಸ್ಥಾನಿಕ ಸ್ವರಾಜ್ಯ.
೬. ಜಿ. ಡಿ. ತಪಾಸೇ ,, ಹಿಂದುಳಿದ ವರ್ಗ, ಮೀನುಗಾರಿಕೆ ಹಾಗು ಪುನರ್ನಿವೇಶನ.
೭. ಎಂ. ಎಂ. ನಾಯಕ ನಿಂಬಾಳಕರ ಲೋಕೋಪಯೋಗಿ.
೮. ಶಾಂತಿಲಾಲ್ ಶಹಾ ,, ಕೂಲಿಕಾರ ಮತ್ತು ಆರೋಗ್ಯ
೯. ವಾಯ್. ಬಿ. ಚವ್ಹಾಣ ನಾಗರಿಕ ಪೂರೈಕೆ.

**ಉಪಮಂತ್ರಿಗಳು ಮತ್ತು ಅವರು ವಹಿಸಿಕೊಂಡಿರುವ ಖಾತೆಗಳು**

೧. ಕುಮಾರಿ ಇಂದುಮತಿ ಶೇಠ :— ಶಿಕ್ಷಣ.
೨. ಬಾಬು ಭಾಯಿಜಿ ಪಟೇಲ :— ಲೋಕೋಪಯೋಗಿ.
೩. ಡಿ. ಎನ್. ವಾಂಡ್ರೇಕರ್ :— ಹಿಂದುಳಿದ ವರ್ಗಗಳು
೪. ಕೆ. ಎಫ್. ಪಾಟಿಲ್ :— ಒಕ್ಕಲತನ ಹಾಗು ಅರಣ್ಯ.
೫. ಬಿ. ಡಿ. ಜತ್ತಿ :— ಸಾರ್ವಜನಿಕ ಆರೋಗ್ಯ.
೬. ಬಿ. ಡಿ. ದೇಶಮುಖ :— ಸ್ಥಾನಿಕ ಸ್ವರಾಜ್ಯ ಹಾಗು ಸಹಕಾರ.
೭. ಡಾ. ಟಿ. ಆರ್. ನರವಣೆ :— ಪಾನಪ್ರತಿಬಂಧ.
೮. ಎಂ. ಜಿ. ಫಾಕಿ :— ಕಂದಾಯ.
೯. ವಿ. ಕ. ಸಾಠೆ :— ನಾಗರಿಕ ಪೂರೈಕೆ.

**೧೯೫೨ ರ ಚುನಾವಣೆಯನಂತರ ರಚಿತವಾದ ಒಕ್ಕೂಟ ಮಂತ್ರಿ ಮಂಡಲದಲ್ಲಿ ಯಾರು ಯಾರು ಇದ್ದಾರೆ ಮತ್ತು ಅವರು ವಹಿಸಿಕೊಂಡಿರುವ ಖಾತೆಗಳು ಯಾವುವು ?**

೧. ಪಂ. ಜವಾಹರಲಾಲ್ ನೆಹರೂ ಮುಖ್ಯಮಂತ್ರಿ. ವಿದೇಶ ವ್ಯವಹಾರ.
೨. ಮೌಲಾನಾ ಅಬ್ದುಲ್ ಕಲಾಂ ಅಜಾದ್ ಮಂತ್ರಿ. ಶಿಕ್ಷಣ, ನೈಸರ್ಗಿಕ ಸಂಪತ್ತು ವೈಜ್ಞಾನಿಕ ಸಂಶೋಧನೆ.
೩. ನರಸಿಂಹ ಗೋಪಾಲಸ್ವಾಮಿ ಐಯ್ಯಂಗಾರ್ ಮಂತ್ರಿ ಸಂರಕ್ಷಣ.
೪. ರಾಜಕುಮಾರಿ ಅಮೃತ ಕೌರ ಮಂತ್ರಿ ಆರೋಗ್ಯ.
೫. ಡಾ. ಕೈಲಾಸನಾಥ ಕಟಜು ,, ಗೃಹ ಮತ್ತು ಸಂಸ್ಥಾನಗಳು.
೬. ರಫಿ ಅಹಮದ್ ಕಿಡವಾಯಿ ,, ಆಹಾರ, ಒಕ್ಕಲುತನ.





೭. ಚಿಂತಾಮಣಿ ದ್ವಾರಕನಾಥ ದೇಶಮುಖ ಮಂತ್ರಿ ಹಣಕಾಸು.

೮. ಜಗಜೀವನ ರಾಮ ಮಂತ್ರಿ ಅಂಚೆ, ತಂತಿ ಮತ್ತು ಸಂಪರ್ಕ.

೯. ಗುಲಝಾರಿಲಾಲ್ ನಂದಾ ,, ಯೋಜನೆ ಮತ್ತು ನದಿ ಕೊಳ್ಳದ ಯೋಜನೆ.

೧೦. ತಿರುವೆಲ್ಲೂರು ತತ್ತಾಯಿ ಕೃಷ್ಣಮಾಚಾರಿ ,, ಉದ್ದಿಮೆ, ವಾಣಿಜ್ಯ.

೧೧. ಚಾರುಚಂದ್ರ ವಿಶ್ವಾಸ ,, ಕಾಯಿದೆ, ಅಲ್ಪಸಂಖ್ಯಾಕರ ವ್ಯವಹಾರ.

೧೨. ಲಾಲ್ ಬಹದ್ದೂರ ಶಾಸ್ತ್ರಿ ,, ರೈಲ್ವೆ ಮತ್ತು ಸಾರಿಗೆ.

೧೩. ಸರದಾರ್ ಸ್ವರ್ಣ ಸಿಂಗ ,, ಲೋಕೋಪಯೋಗಿ, ವಸತಿ ಸೌಕರ್ಯ, ಪೂರೈಕೆ.

೧೪. ವರಹಗಿರಿ ವೆಂಕಟಗಿರಿ ,, ಕೂಲಿಕಾರ.

೧೫. ಕ್ಯಾಸಂಬಳ್ಳಿ ಚಂಗಲರಾಯ ರೆಡ್ಡಿ ( ಕನ್ನಡಿಗ ) ,, ಉತ್ಪಾದನೆ.

## ಕ್ಯಾಬಿನೆಟ್ ರ್‍ಯಾಂಕದ ಮಂತ್ರಿಗಳು.

೧. ಅಜಿತ ಪ್ರಸಾದ ಜೈನ ಪುನರ್ನಿವೇಶನ.

೨. ಸತ್ಯನಾರಾಯಣ ಸಿಂಹ ಪಾರ್ಲಿಮೆಂಟರಿ ವ್ಯವಹಾರ.

೩. ಮಹಾವೀರ ತ್ಯಾಗಿ ಹಣಕಾಸು.

೪. ಬಾಲಕೃಷ್ಣ ವಿಶ್ವನಾಥ ಕೇಸಕರ ಸುದ್ದಿ, ಆಕಾಶವಾಣಿ.

## ಉಪಮಂತ್ರಿಗಳು.

೧. ದತ್ತಾತ್ರಯ ಪರಶುರಾಮ ಕರಮರಕರ. ( ಕನ್ನಡಿಗ )

೨. ಸುರೇಂದ್ರನಾಥ ಬರ್ಗೋಹೀನ.

### ಸಮಾಪ್ತ.

ರಲ್ಲಿಯ ಎಷ್ಟೋ ಸಭಾಸದರು ಮೇಲ್ತರಗತಿಯ ಮತದಾರ ಸಂಘದಿಂದ ಆರಿಸಿದವರು ಇರುವರು ಇವರಲ್ಲಿ ಸರಕಾರದಿಂದ ನಿಯುಕ್ತರಾದ ಸಭಾಸದರ ಸಂಖ್ಯೆಯು ಬಹಳ ಕಡಿಮೆಯಿರುವದು. ಲೇ. ಕೌನ್ಸಿಲಿನ ಅಧ್ಯಕ್ಷ ಉಪಾಧ್ಯಕ್ಷರ ಆಯ್ಕೆಯು ಇದೇ ಸಭೆಯಿಂದಾಗುತ್ತದೆ. ಮತ್ತು ಅವರ ಸಂಬಳವನ್ನಾದರೂ ಅದೇ ಸಭೆಯೇ ಗೊತ್ತುಪಡಿಸುತ್ತದೆ. ಕೌನ್ಸಿಲಿದ ಆಯ್ಕೆಯು ಒಂದುಸಾರೆ ಆದನಂತರ ಪ್ರತಿ ಮೂರು ವರ್ಷಗಳಿಗೆ ಅವರ ೩ ಸಭಾಸದರು ಕಡಿಮೆಯಾಗಿ ಅವರ ಪ್ರತಿಯಾಗಿ ಬೇರೆ ಸಭಾಸದರು ಆರಿಸಿ ಬರುತ್ತಾರೆ.

ಈ ಕೌನ್ಸಿಲ್ಲಿನ ಕೆಲಸಗಳು:—ಕೇವಲ ಬಜೆಟ್ಟಿನ ಸಂಬಂಧ ವಿಚಾರ ವಿನಿಮಯಗಳನ್ನು ಮಾಡುವದಿಷ್ಟೇ ಇವರ ಕೆಲಸವು. ಮಾತ್ರ ಮತವನ್ನು ವ್ಯಕ್ತಪಡಿಸಲು ಬರುವದಿಲ್ಲ. ಕೌನ್ಸಿಲ್ಲಿನ ಉಳಿದ ಕೆಲಸಗಳು ಅಸೆಂಬ್ಲಿಯ ಕೆಲಸಗಳಂತೆ ನಡೆಯುವವು.

ಈ ಎರಡೂ ಸಭೆಗಳು ಪಾಸುಮಾಡಿದ ಯಾವದೊಂದು ಕಾಯ್ದೆಯು ಗವ್ಹರ್ನರರನ ಸಮ್ಮತಿಯು ದೊರೆತ ಬಳಿಕ ಅಮಲಿನಲ್ಲಿ ಬರುವದು.

**೬. ಈ ೧೯೩೫ರ ಕಾಯ್ದೆಯಂತೆ ಪ್ರಾಂತಿಕ ರಾಜಘಟನೆಯಲ್ಲಿ ಹೆಚ್ಚು ಕಡಿಮೆಯಾಗುವದೆಂಬದನ್ನು ಮುಂಬಯಿ ಇಲಾಖೆಯ ರಾಜ್ಯಘಟನೆಯಿಂದ ಉದಹರಿಸಿ ಸ್ಪಷ್ಟಮಾಡಿರಿ.**

ಮುಂಬಯಿ ಇಲಾಖೆಯ ಮುಖ್ಯಾಧಿಕಾರಿಯು ಗವ್ಹರ್ನರನು; ಸನ್ ೧೯೧೯ರ ಮಾಂಟ-ಫರ್ಡರ ಕಾಯದೆಯಂತೆ ಪ್ರಾಂತದಲ್ಲಿಯ ಖಾತೆಗಳಲ್ಲಿ ಎರಡು ಭಾಗಗಳನ್ನು ಮಾಡಿತ್ತು. ಅದರಲ್ಲಿ ಸುಮಾರು ಅರ್ಧದಷ್ಟು ಖಾತೆಗಳ ಕಾರಭಾರವನ್ನು ಗವ್ಹರ್ನರನ ಹಾಗು ಅವನ ಕಾರ್ಯಕಾರಿ ಮಂತ್ರಿಗಳ ಕಡೆಗೆ ಕೊಟ್ಟಿತ್ತು. ಮತ್ತು ಉಳಿದ ಖಾತೆಗಳ ಕಾರಭಾರವನ್ನು ಕಾಯದೆ ಮಂಡಲಗಳ ಜವಾಬದಾರ ದಿವಾಣರ ಕಡೆಗೆ ಒಪ್ಪಿಸಿತ್ತು. ಆದರೆ ೧೯೩೫ರ ಕಾಯ್ದೆಯನ್ವಯ ಪ್ರಾಂತದಲ್ಲಿಯ ಎಲ್ಲ ಖಾತೆಗಳ ಕಾರಭಾರವನ್ನು ಕಾಯದೆ ಮಂಡಲಕ್ಕೆ ಜವಾಬದಾರರಾದ ಮಂತ್ರಿಗಳ ವಶದಲ್ಲಿ ಕೊಟ್ಟಿರುತ್ತದೆ. ಈ ಪ್ರಕಾರ ಈ ೧೯೩೫ರ ಹೊಸ ಕಾಯಿದೆಯಂತೆ ಮೊದಲಿನ ದ್ವಿದಲ ರಾಜಪದ್ಧತಿಯು ನಷ್ಟವಾಗಿ ಪ್ರಾಂತಕ್ಕೆ ಸ್ವಾಯತ್ತತೆಯು ಪ್ರಾಪ್ತವಾಗಿರುತ್ತದೆ.

ಸನ್ನ ೧೯೧೯ರ ಕಾಯದೆಯಂತೆ ಮುಂಬಯಿ ಇಲಾಖೆಯಲ್ಲಿ ಒಂದು ಕಾಯದೆ ಮಂಡಲವಿತ್ತು. ಅದರಲ್ಲಿ ೧೧೪ ಸಭಾಸದರಿದ್ದರು. ಅವರಲ್ಲಿ ೮೬ ಜನ ಸಭಾಸದರು ಲೋಕನಿಯುಕ್ತರಿದ್ದರು. ಆದರೆ ೧೯೩೫ರ ಕಾಯದೆಯಂತೆ ಈ ಇಲಾಖೆಯಲ್ಲಿ ಲೇಜಿಸ್ಲೆಟಿವ್ಹ ಅಸೆಂಬ್ಲಿ ಮತ್ತು ಲಿಜಿಸ್ಲೆಟಿವ್ಹ ಕೌನ್ಸಿಲ್ಲು ಹೀಗೆ ಎರಡು ಕಾಯದೆ ಮಂಡಲಗಳು ಸ್ಥಾಪನೆಯಾದವು. ಈಗ ಅಸೆಂಬ್ಲಿಯಲ್ಲಿ ೧೭೫ ಸಭಾಸದರಿದ್ದು ಅವರೆಲ್ಲರೂ ಲೋಕನಿಯುಕ್ತರು. ಕೌನ್ಸಿಲ್ಲಿನಲ್ಲಿ ೨೯-೩೦ ಜನರಿದ್ದು ಮೂರು ನಾಲ್ಕು ಜನರ ಹೊರತು ಉಳಿದವರೆಲ್ಲ ಲೋಕನಿಯುಕ್ತರು ಆ ಮೂರು ನಾಲ್ಕು ಜನರನ್ನು ಮಾತ್ರ ಗವ್ಹರ್ನರನು ನೇಮಿಸಿರುತ್ತಾನೆ. ಮೊದಲು ಅಂದರೆ ೧೯೧೯ರ ಕಾಯದೆಯಂತೆ ಚುನಾವಣಿ ಇದ್ದ ಕಾಲಕ್ಕೆ ಜನಸಂಖ್ಯೆಯಲ್ಲಿ ನೂರಕ್ಕೆ ಮೂವರು ಮಾತ್ರ ಮತ ಕೊಡಲು ಅರ್ಹರಾಗಿದ್ದರು. ಈಗ ಹೊಸ ಕಾಯದೆಯಂತೆ ನೂರಕ್ಕೆ ಹದಿನಾಲ್ಕು ಜನರು ಮತ ಕೊಡಲು ತಕ್ಕವರಾಗಿದ್ದಾರೆ.

ಗವ್ಹರ್ನರನ ಅಧಿಕಾರ:—

ಪ್ರಾಂತದಲ್ಲಿಯ ಎಲ್ಲ ಖಾತೆಗಳು—ಮಂತ್ರಿಗಳ ವಶಕ್ಕೆ ಒಪ್ಪಿಸಿರುವವು. ಆದರೂ ಕಾಯದೆ, ವ್ಯವಸ್ಥೆ, ಅಲ್ಪಸಂಖ್ಯಾಕರ ರಕ್ಷಣೆ, ಸನದಿ ನೌಕರರ ಹಕ್ಕು ಮುಂತಾದ ಕೆಲ ಸಂಗತಿಗಳಲ್ಲಿ ಗವ್ಹರ್ನರನ ಕೈಯಲ್ಲಿ ಹೆಚ್ಚಿನ ಅಧಿಕಾರವಿರುತ್ತದೆ. ಅದಕ್ಕೆ 'ಸಂರಕ್ಷಕ ಬಂಧನ' (ಶೇಫ್ ಗಾರ್ಡ) ಅನ್ನುತ್ತಾರೆ. ಕಾಯದೆ ಮಂಡಲಗಳ ಮೇಲೆ ಗವ್ಹರ್ನರನ ಪೂರ್ಣ ಅಧಿಕಾರ (ಸತ್ತೆ) ನಡೆಯುವದು. ಕಾಯದೆ ಮಂಡಲದವರು ಪಾಸು ಮಾಡಿದ ಕಾಯದೆಗಳು ಗವ್ಹರ್ನರನ ಮಂಜೂರಿಯಿಲ್ಲದೆ ಅಮಲಿನಲ್ಲಿ ಬರುವದಿಲ್ಲ. ಕಾಯದೆ ಮಂಡಲಗಳು ಪಾಸು ಮಾಡಿದ ಕಾಯದೆ ನಾಮಂಜೂರ ಮಾಡುವ, ಮತ್ತು ನಾಮಂಜೂರ ಮಾಡಿದ ಕಾಯದೆಗಳನ್ನು ಪಾಸು ಮಾಡುವ ಅಧಿಕಾರವು ಗವ್ಹರ್ನರನಿಗಿರುತ್ತದೆ. ಹಾಗು ಪ್ರಸಂಗ ವಿಶೇಷದಲ್ಲಿ ಅವನಿಗೆ 'ಒಟ್ಟಹುಕುಂ' (ಆರ್ಡಿನನ್ಸ) ಗಳನ್ನು ಹೊರಡಿಸಲು ಬರುತ್ತದೆ. ತೊಂದರೆ (ಬಿಕ್ಕಟ್ಟಿನ) ಯ ಪ್ರಸಂಗದಲ್ಲಿ ಪ್ರಾಂತದ ಎಲ್ಲ ಕಾರಭಾರವನ್ನು ಗವ್ಹರ್ನರನು ತನ್ನ ಕೈಯಲ್ಲಿ ತಕ್ಕೊಂಡು ಸಾಗಿಸುವ ಅಧಿಕಾರವವನಿಗಿರುತ್ತದೆ. (ಪ್ರತಿಯೊಂದು ಪ್ರಾಂತದ ಗವ್ಹರ್ನರರಿಗೆ ಹೀಗೆಯೇ ಅಧಿಕಾರ ಕೊಟ್ಟಿರುತ್ತದೆ

**೭. ಪ್ರಾಂತಿಕ ಹಾಗು ವರಿಷ್ಠ ಕಾಯದೆ ಮಂಡಲಗಳಲ್ಲಿ ಯಾವ ಪದ್ಧತಿಯಿಂದ ಕಾಯದೆಗಳನ್ನು ಪಾಸು ಮಾಡುವರು ?**

ಕಾಯದೆಗಳನ್ನು ಮಾಡುವದಕ್ಕಾಗಿ ತಯಾರಿಸಿದ ಆರಂಭದ ಮಸೂದೆಗಳಿಗೆ 'ಬಿಲ್ಲು'ಗಳೆನ್ನುವರು. ಈ ಬಿಲ್ಲುಗಳನ್ನು ಗೃಹದಲ್ಲಿ ಮಂಡಿಸುವ ಅಧಿಕಾರವು ಕಾಯದೆ ಮಂಡಲದಲ್ಲಿರುವ ಯಾವನಾದರೂ ಸರಕಾರಿ ಇಲ್ಲವೆ ಬಿನ್‌ಸರಕಾರಿ ಸಭಾಸದರಿಗೆ ಉಂಟು. ಯಾವದೇ ಬಿಲ್ಲು ಕಾಯದೆ ಮಂಡಲದಲ್ಲಿ ಮೂರು ಸಾರೆ ಪಾಸು ಆಗಬೇಕಾಗುತ್ತದೆ. ಬಿಲ್ಲಿನ ಪ್ರಥಮ ವಾಚನವು ಅದರ ಮೂಲಸ್ವರೂಪದಲ್ಲಿರುತ್ತದೆ. ಆ ಕಾಲಕ್ಕೆ ಬಿಲ್ಲಿನ ಉದ್ದೇಶ, ಅದರ ಸಾಮಾನ್ಯ ಸ್ವರೂಪಗಳನ್ನಷ್ಟೇ ಮಂಡಿಸುವರು. ಅದರ ದ್ವಿತೀಯ ವಾಚನದ ಕಾಲಕ್ಕೆ ಆ ಬಿಲ್ಲಿನ ವಿಷಯವಾಗಿ ಸಾಧಕ-ಬಾಧಕಗಳ ಚರ್ಚೆ ಮಾಡಲ್ಪಡುವದು. ಮಹತ್ವದ ಬಿಲ್ಲುಗಳಿದ್ದಲ್ಲಿ ಅವನ್ನು ಸಭೆಯ ಕೆಲವು ಸಭಾಸದರನ್ನು ಸಿಲೆಕ್ಟ ಮಾಡಿ ಅವರ ಕಮಿಟಿಯೆಂದು ಗೊತ್ತುಮಾಡಿ ಹೆಚ್ಚು ವಿಚಾರ ಮಾಡುವ ಕುರಿತು ಆ ಕಮಿಟಿಗೆ ಒಪ್ಪಿಸುತ್ತಾರೆ. ಆ ಕಮಿಟಿಯಿಂದ ಆ ಬಿಲ್ಲಿನ ಸುಧಾರಣೆಯಾಗಿ ಬಂದ ನಂತರ ಆ ಬಿಲ್ಲಿನ ತೃತೀಯ ವಾಚನಕ್ಕಾಗಿ ಸಭೆಯ ಮುಂದೆ ಮತ್ತೆ ಮಂಡಿಸಲ್ಪಡುತ್ತದೆ. ಅಲ್ಲಿ ಅದರಲ್ಲಿಯ ಕಲಮುವಾರ ಚರ್ಚೆಯಾಗುವದು ಮುಂದೆ ಅದು ಬಹುಮತದಿಂದ ಮಂಜೂರು ಆಗುವದು. ಇಷ್ಟಾದ ಮೇಲೆ ಆ ಬಿಲ್ಲನ್ನು ಕಾಯದೇ ಮಂಡಲದ ಎರಡನೆಯ ಸಭೆಗೆ ಮಂಜೂರಿಗಾಗಿ ಕಳಿಸಲ್ಪಡುವದು ಅಲ್ಲಿಯೂ ಅದು ಪಾಸಾದ ಬಳಿಕ ಅದನ್ನು ಪ್ರಾಂತದ ಗವ್ಹರ್ನರನ, (ವರಿಷ್ಠ ಸಭೆಯಲ್ಲಿ ಬಂದ ಬಿಲ್ಲು ಇದ್ದರೆ ಗ. ಜನರಲ್ಲನ) ಕಡೆಗೆ ಮಂಜೂರಿಗಾಗಿ ಕಳಿಸುವರು. ಅಲ್ಲಿ ಅದಕ್ಕೆ ಮಂಜೂರಿ ದೊರೆತರೆ ಆ ಬಿಲ್ಲು ಕಾಯದೆಯ ಸ್ವರೂಪವನ್ನು ಹೊಂದುತ್ತದೆ.

**೮. ೧೯೩೫ರ ಕಾಯದೆಯಂತೆ ಪ್ರಾಂತದ ಗವ್ಹರ್ನರನು ತನ್ನ ಮಂತ್ರಿಮಂಡಲಗಳ ನೇಮಕವನ್ನು ಹೇಗೆ ಮಾಡುವನು? ಹಾಗು ಮಂತ್ರಿಮಂಡಲಗಳ 'ಸಂಯುಕ್ತ ಜವಾಬದಾರಿ'ಯೆಂದರೇನು ?**

ಹೊಸದಾಗಿ ಕಾಯದೆ ಮಂಡಲದ ಆಯ್ಕೆಯಾದ ಮೇಲೆ ಕಾಯದೆ ಮಂಡಲದಲ್ಲಿ ಬಹುಮತವುಳ್ಳ ಪಕ್ಷದ ಮುಖ್ಯನನ್ನು ಗವ್ಹರ್ನರನು ಆಮಂ

ತ್ರಿಸುತ್ತಾನೆ. ಮತ್ತು ಅವನಿಗೆ 'ಮಂತ್ರಿಮಂಡಲ'ವನ್ನು ರಚಿಸಿಕೊಳ್ಳಲು ತಿಳಿಸುತ್ತಾನೆ ಇದರಂತೆ ರಚಿತವಾದ ಮಂತ್ರಿಮಂಡಲದ ನೇಮಕವನ್ನು ಗವ್ಹರ್ನರನು ಪ್ರಸಿದ್ಧಪಡಿಸುವನು. ಆ ಮುಂದಾಳುವೇ ಮುಖ್ಯಮಂತ್ರಿ ಅಥವಾ ಪ್ರಧಾನಿಯಾಗುವನು. ಮಂತ್ರಿಮಂಡಲದಲ್ಲಿಯ ಮಂತ್ರಿಗಳು ಇಂತಿಷ್ಟೇ ಜನರಿರಬೇಕೆಂಬ ನಿಯಮವಿರುವದಿಲ್ಲ. ಪರಿಸ್ಥಿತಿಯ ಪ್ರಕಾರವಾಗಿ ಹೆಚ್ಚುಕಡಿಮೆ ಮಾಡಲು ಬರುವದು. ಆ ಮಂತ್ರಿಗಳ ವೇತನವನ್ನಾದರೂ ಆ ಕಾಯದೆಮಂಡಲವು ಗೊತ್ತುಪಡಿಸುವದು.

ಮಂತ್ರಿಮಂಡಲದಲ್ಲಿಯ ಮಂತ್ರಿಗಳೆಲ್ಲರೂ ಸಂಯುಕ್ತ ಜವಾಬದಾರಿಯ ತತ್ವಕ್ಕೆ ಅಂಟಿಕೊಳ್ಳಬೇಕಾಗುತ್ತವೆ. ಕೆಲಸಗಳ ಅನುಕೂಲಕ್ಕಾಗಿ ಬೇರೆ ಬೇರೆ ಖಾತೆಗಳನ್ನು ಬೇರೆ ಬೇರೆ ಮಂತ್ರಿಗಳ ಕಡೆಗೆ ಹಂಚಿರುತ್ತಾರೆ ಆದರೂ ಪ್ರತಿಯೊಬ್ಬ ಮಂತ್ರಿಯ ಭಾಷಣ ಹಾಗು ಕಾರಭಾರಗಳು ಎಲ್ಲ ಮಂತ್ರಿಗಳ ಮಂಡಲದ್ದಿರುವವೆಂದು ಎಣಿಸಲ್ಪಡುತ್ತದೆ. ಇದರಿಂದ ಮಂತ್ರಿಗಳೆಲ್ಲರ ಧೋರಣೆಯು ಒಂದೇ ಪ್ರಕಾರದ್ದಿರಬೇಕಾಗುತ್ತದೆ. ಒಂದು ವೇಳೆ ಒಬ್ಬ ಮಂತ್ರಿಗೆ ಮಂತ್ರಿಮಂಡಲ ಧೋರಣವು ಒಪ್ಪಿಗೆಯಾಗದಿದ್ದರೆ ಅವನೇ ತನ್ನ ಮಂತ್ರಿಪದಕ್ಕೆ ಹೊರತಾಗಿ ರಾಜೀನಾಮೆಯನ್ನು ಒಪ್ಪಿಸಬೇಕಾಗುತ್ತದೆ. ಸಾರಾಂಶವೇನಂದರೆ—ಯೋಗ್ಯಾಯೋಗ್ಯ ಸಂಗತಿಗಳೆಲ್ಲದರಲ್ಲಿ (ಪ್ರಾಂತದ ಕಾರಭಾರದ ದೃಷ್ಟಿಯಿಂದ) ಮಂತ್ರಿಮಂಡಲವು ಜವಾಬದಾರಿಕೆಯನ್ನು ವಹಿಸಬೇಕಾಗುವದು. ಇದಕ್ಕೇ 'ಸಂಯುಕ್ತ ಜವಾಬದಾರಿ' ಎಂದೆನ್ನುತ್ತಾರೆ.

**೯. ಪ್ರಾಂತದ ಕಾರಭಾರದಲ್ಲಿ ತೊಂದರೆಗಳು ಹೇಗೆ ಉದ್ಭೂತವಾಗುವವು? ಹಾಗು ಅಂಥ ಬಿಕ್ಕಟ್ಟಿನ ಪ್ರಸಂಗವೊದಗಿದರೆ ಗವ್ಹರ್ನರನು ಕೈಕೊಳ್ಳುವ ಮಾರ್ಗವಾವುದು?**

ಕಾರಭಾರ ಸಾಗಿಸುವ ಮಂತ್ರಿಮಂಡಳವೇ ರಾಜೀನಾಮೆಯನ್ನು ಸಲ್ಲಿಸಿದರೆ ಕಾರಭಾರದಲ್ಲಿ ಬಿಕ್ಕಟ್ಟಿನ ಪ್ರಸಂಗಗಳು ನಿರ್ಮಾಣವಾಗುವವು ಹೀಗೆ ಮಂತ್ರಿಮಂಡಳವು ರಾಜೀನಾಮೆಯನ್ನು ಕೊಡುವ ಕಾರಣಗಳು ಸಾಮಾನ್ಯವಾಗಿ ಮುಂದೆ ಬರೆದಂತೆ ಇರುವವು. ೧. ಗವ್ಹರ್ನರನೂ, ಮಂತ್ರಿಮಂಡಳವೂ ಇವರಲ್ಲಿ ಮಹತ್ವದ ಪ್ರಶ್ನೆಯ ಸಂಬಂಧದಿಂದ ತೀವ್ರ ಮತಭೇದವುಂಟಾದ ಪ್ರಸಂಗದಲ್ಲಿ (೨) ಒಂದಾನೊಂದು ವಿಶಿಷ್ಟಪ್ರಸಂಗ

ದಲ್ಲಿ ಸರಕಾರದ ಧೋರಣವು ಮಂತ್ರಿಮಂಡಲಕ್ಕೆ ಒಪ್ಪಿತವಾಗದಿದ್ದಲ್ಲಿ(೩) ಮಂತ್ರಿಮಂಡಲದ ಧೋರಣ ಹಾಗು ಕಾರಭಾರಗಳು ಒಪ್ಪಿತವಾಗದ್ದರಿಂದ ಕಾಯದೆ ಮಂಡಲವಲ್ಲಿ ಅವರಿಗಿದ್ದ ಬಹುಮತವು ಇಲ್ಲದಾಗುತ್ತದೆ. ಮತ್ತು ಆ ಮಂತ್ರಿಮಂಡಲದ ಮೇಲೆ ಅವಿಶ್ವಾಸದರ್ಶಕ ಗೊತ್ತುವಳಿಗಳು ಉದಯಕ್ಕೆ ಬರುವವು. ಇಂಥ ಪ್ರಸಂಗದಲ್ಲಿ.

ಮೇಲಿನ ಮೂರು ಕಾರಣಗಳಲ್ಲಿ ಕೆಲವೊಂದು ಕಾರಣದಿಂದ ಮಂತ್ರಿಮಂಡಲವು ಕಾರಭಾರದಿಂದ ಮುಕ್ತವಾಗುವದು.

ಪ್ರಾಂತದ ಗವ್ಹರ್ನರನು ಇಂಥ ಪ್ರಸಂಗಗಳನ್ನು ನೀಗುವದಕ್ಕಾಗಿ ಕೆಳಗೆ ಹೇಳಿದಂತೆ ಯೋಜನೆ ಮಾಡಿ ಕಾರಭಾರದಲ್ಲಿ ಅಂತರಿಸದಂತೆ ಮಾಡುವನು.

೧. ಕಾಯ್ದೆಮಂಡಲದಲ್ಲಿಯ ಬೇರೆ ಪಕ್ಷದ ಮುಂದಾಳುವಿಗೆ ಮಂತ್ರಿಮಂಡಲ ರಚಿಸಲು ವಿನಂತಿಸುವನು.

೨. ಮತಾಧಿಕ್ಯವಿಲ್ಲದ ಮುಂದಾಳು ದೊರೆಯದಿದ್ದಲ್ಲಿ ಗವ್ಹರ್ನರನಿಗೆ ಇಷ್ಟ ಉಂಟಾದರೆ ಮತ್ತೊಮ್ಮೆ ಚುನಾವಣೆಯನ್ನು ಮಾಡುತ್ತಾನೆ. ಮತ್ತು ಅದರಿಂದ ಆರಿಸಿಬಂದವರಲ್ಲಿ ಮತಾಧಿಕ್ಯವುಳ್ಳ ಮುಂದಾಳುವಿನಿಂದ ಮಂತ್ರಿಮಂಡಲ ರಚಿಸಿಕೊಳ್ಳುವನು.

೩. ಒಂದು ವೇಳೆ ಮೇಲಿನಂತೆಯೂ ಅಶಕ್ಯವಾದರೆ—ಬಹುಮತದಿಂದ ಆರಿಸಿ ಬಂದ ಮುಂದಾಳುವು ಮಂತ್ರಿಮಂಡಲವನ್ನು ರಚಿಸಲು ಒಪ್ಪದಿದ್ದರೆ—ಗವ್ಹರ್ನರನು ತನಗಿರುವ ಕಾಯದೆಯ ಆಧಾರದಿಂದ ಆ ಕಾಯದೆ ಮಂಡಲವನ್ನು ತಡೆಹಿಡಿದು ಪ್ರಾಂತದ ಎಲ್ಲ ಕಾರಭಾರವನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳುವನು. ಈ ಕಾರಭಾರವನ್ನು ತನ್ನ ಪಾರ್ಲಮೆಂಟಿನ ಅಪ್ಪಣೆಯಿಂದ ಹೆಚ್ಚೆಂದರೆ ಮೂರು ವರ್ಷಗಳ ವರೆಗೆ ಸಾಗಿಸುವನು.

**೧೦. ಪ್ರಾಂತಿಕ ಕಾಯದೆಮಂಡಗಳ ಸಭಾಸದರ ಅಧಿಕಾರಗಳೇನು ?**

ಲೇ. ಅಸೆಂಬ್ಲಿ ಹಾಗು ಲೇ. ಕೌನ್ಸಿಲಗಳ ಸಭಾಸದರಿಗೆ ಪ್ರಶ್ನೆ ಉಪಪ್ರಶ್ನೆಗಳನ್ನು ವಿಚಾರಿಸಲಿಕ್ಕೆ, ಗೊತ್ತುವಳಿ ತರುವದಕ್ಕೆ ಬರುವದಲ್ಲದೆ ಸೂಚನೆ, ನಿಂದಾವ್ಯಂಜಕ ಹಾಗೂ ಅವಿಶ್ವಾಸದ ಗೊತ್ತುವಳಿ, ಬಿಲ್ಲು

ಗಳನ್ನು ತರುವದು ಇವೆಲ್ಲ ಅಧಿಕಾರಗಳಿರುವವು. ಕಾಯದೇಮಂಡಳದ ಕೆಲಸ ನಡೆವ ಕಾಲಕ್ಕೆ ಅವರಿಗೆ ಭಾಷಣ ಸ್ವಾತಂತ್ರ್ಯವಿರುವದು. ಆದರೆ ಈ ಭಾಷಣ ಸ್ವಾತಂತ್ರ್ಯದ ಹಕ್ಕಿನಿಂದ ವೈಯಕ್ತಿಕ ಆರೋಪಗಳನ್ನು ಸಮರ್ಥನೆ ಮಾಡಲಿಕ್ಕೆ ಬರಲಾರದು.

**೧೧. ಪ್ರಾಂತಿಕ ಲೆಜಿಸ್ಲೆಟಿವ್ಹ ಅಸೆಂಬ್ಲಿಯ ಆಯ್ಕೆಯಲ್ಲಿ ಮತ ಕೊಡುವವರ ಯೋಗ್ಯತೆ ಹೇಗಿರಬೇಕು ?**

ಪುರುಷರು:—

೧. ಪ್ರಾಪ್ತಿಯ ಮೇಲಿನ ಕರ ಕೊಡುವವರು.

೨. ತೀರ ಕಡಿಮೆಯೆಂದರೆ ೮ ರೂ. ತೆರಿಗೆ ತೆತ್ತುವವರು.

೩. ಮುಂಬಯಿ ಶಹರದಲ್ಲಿ ವರ್ಷಾ ಅರವತ್ತು ಇತರ ಊರುಗಳಲ್ಲಿ ೧೮ ರೂ. ಮನೆ ಬಾಡಿಗೆ ಕೊಡುವವರೂ, ತೆಗೆದುಕೊಳ್ಳುವವರೂ.

೪. ಮ್ಯಾಟ್ರಿಕ್ ಪರೀಕ್ಷೆ ಪಾಸಾದವರು.

೫. ಸೈನ್ಯದ ಸಿಪಾಯಿಗಳೂ, ಸೈನ್ಯದಿಂದ ಪೆನಶನ್ನು ಪಡೆದವರೂ.

ಸ್ತ್ರೀಯರು:—

೧. ಪುರುಷರ ಸಂಬಂಧ ಮೇಲೆ ಹೇಳಿದವುಗಳನ್ನು ಪೂರೈಸುವವಳು.

೨. ಓದು-ಬರೆಹ ಬಲ್ಲವಳು.

೩. ಪ್ರಾಪ್ತಿಯ ಮೇಲಿನ ಕರ ಕೊಡುವವಳು.

೪. ಸೈನ್ಯದ ಪೆನಶನ್ನು ತೆಗೆದುಕೊಳ್ಳುವವಳು.

೫. ಮನೆಯ ಬಾಡಿಗೆ ಹಾಗು ತೆರಿಗೆಗಳನ್ನು ಕೆಲವೊಂದು ಗೊತ್ತು ಪಡಿಸಿದ ಮರ್ಯಾದೆಯ ವರೆಗೆ ಕೊಡುತ್ತಿದ್ದವನ ಹೆಂಡತಿಯು.

ಅಸ್ಪೃಶ್ಯರು:—

೧. ಓದು-ಬರೆಹ ಬಲ್ಲವ.

೨. ಹಳ್ಳಿಗಳಲ್ಲಿಯ ಹೊಲೆಯ—ಮಾದಿಗಳು.

**೧೨. ಪ್ರಾಂತಿಕ ಸರಕಾರದ ಉತ್ಪನ್ನದ ಬಾಬುಗಳಾವವು ?**

೧. ಭೂಕಂದಾಯ. ೨. ಅಬಕಾರಿ. ೩. ಕೋರ್ಟ ಫೀ ಸ್ಟಾಂಪ್ಸ. ೪. ರಜಿಸ್ಟರ (ನೋಂದಣಿ) ಖಾತೆ. ೫. ಅರಣ್ಯ. ೬. ಮನರಂಜನೆ ಬಾಬು ಇತ್ಯಾದಿ.

**೧೩. ಭಾರತ ಸರಕಾರದ ಉತ್ಪನ್ನದ ಬಾಬುಗಳಾವವು?**

೧. ಪ್ರಾಂತಿಕ ಸರಕಾರಗಳಿಂದ ದೊರೆಯುತಕ್ಕ ಕಪ್ಪಕಾಣಿಕೆ.

೨. ಪರದೇಶದ ಆಯಾತ-ನಿರ್ಯಾತ ಪದಾರ್ಥಗಳ ಮೇಲಿನ ಸುಂಕ

೩. ಉಗೆಬಂಡಿ, ಪೋಸ್ಟ, ತಾರಾಯಂತ್ರಗಳಿಂದ ಬರತಕ್ಕ ಉತ್ಪನ್ನ.

೪. ೨೦೦೦ ರೂ ಮೇಲಿನ ಪ್ರಾಪ್ತಿಯುಳ್ಳವರಿಂದ ಬರತಕ್ಕ ಪ್ರಾಪ್ತಿಯು ಕರ.

೫. ಉಪ್ಪಿನ ಮೇಲಿನ ಕರ.

೬. ಅಫೀಮಿನ ಸಂಬಂಧದ ಉತ್ಪನ್ನ.

೭. ನಾಣ್ಯಮುದ್ರೆ, ವ್ಯಾಜ್ಯ, ಅರಣ್ಯ, ಕಾಲುವೆ, ಮೊದಲಾದವುಗಳ ಉತ್ಪನ್ನ.

**೧೪. ಪ್ರಾಂತದ ಅಂದಾಜಪತ್ರಿಕೆ (ಬಜೆಟ್ಟ) ಅಂದರೇನು? ಹೊಸ ಕಾಯದೆಯಂತೆ ಅಂದಾಜಪತ್ರಿಕೆ ಹೇಗೆ ತಯಾರಿಸಲ್ಪಡುತ್ತದೆ?**

ಜಮಾ-ಖರ್ಚಿನ ಅಂದಾಜನ್ನು ತೋರಿಸುವ ಪತ್ರಿಕೆಯೇ ಬಜೆಟ್ಟ. ಅದರಲ್ಲಿ ನಡೆಯುವ ವರ್ಷದ ಜಮಾಖರ್ಚಿನ ದುರಸ್ತ ಅಂದಾಜು ಮತ್ತು ಮುಂದಿನ ವರ್ಷದ ಜಮೆ ಹಾಗು ಖರ್ಚು ಇವುಗಳ ಸಂಬಂಧ ಮಾಡಿದ ಅಂದಾಜು, ಇವೆಲ್ಲವುಗಳ ಸಮಾವೇಶವಾಗುತ್ತದೆ. ಇದಲ್ಲದೆ ಬಜೆಟ್ಟಿನಲ್ಲಿ ಹೊಸ ಕರಗಳನ್ನು ಹೇರುವದು, ಮತ್ತು ಹಳೆಯ ಕರದಲ್ಲಿ ಹೆಚ್ಚು ಕಡಿಮೆ ಮಾಡುವದು, ಈ ವಿಷಯಗಳಲ್ಲಿ ಸೂಚನೆ ಮಾಡಲ್ಪಟ್ಟಿರುವದು. ಪ್ರತಿಯೊಂದು ವರ್ಷದಲ್ಲಿ ಗವ್ಹರ್ನರರ ಮಂತ್ರಿಮಂಡಲದಲ್ಲಿಯ ಆರ್ಥಿಕ ಮಂತ್ರಿಯು ಈ ಬಜೆಟ್ಟು ತಯಾರಿಸಿ ಫೆಬ್ರುವರಿ ತಿಂಗಳಲ್ಲಿ ಕಾಯದೆ ಮಂಡಲದ ಮುಂದೆ ಇಡುವನು.

ಬಜೆಟ್ಟಿನಲ್ಲಿಯ ಖರ್ಚಿನ ಬಾಬುಗಳಲ್ಲಿ ಗವ್ಹರ್ನರರ ಪಗಾರ ಹಾಗು ಅವನ ಇತರ ಖರ್ಚು, ಆಫೀಸದ ಖರ್ಚು, ಈ ಬಾಬುಗಳ ಮೇಲೆ ಯಾವ ಕಾಯದೇ ಮಂಡಲಕ್ಕೂ ಚರ್ಚಿಸುವ ಅಧಿಕಾರವಿರುವದಿಲ್ಲ. ಇತರ ಬಾಬುಗಳ ಸಂಬಂಧ ಲೇಜಿಸ್ಲೆಟಿವ್ಹ ಕೌನ್ಸಿಲ್ಲಿನಲ್ಲಿ ಮಾತ್ರ ಚರ್ಚಿಸಲ್ಪಡುವದು. ಆದರೆ ಬಜೆಟ್ಟನ್ನು ಪಾಸ ಮಾಡುವದಕ್ಕೂ, ನಾಪಾಸ ಮಾಡುವದಕ್ಕೂ ಮತ ಕೊಡುವ ಅಧಿಕಾರ. ಈ ಲೇ ಕೌನ್ಸಿಲ್ಲಿ

ಗಿರುವದಿಲ್ಲ. ಲೇ ಅಸೆಂಬ್ಲಿಯಿಂದಲೇ ಬಜೆಟ್ಟು ಪಾಸಾಗಬೇಕಾಗುತ್ತದೆ. ಅಸೆಂಬ್ಲಿಗೆ ಬಜೆಟ್ಟಿನಲ್ಲಿಯ ಕೆಲವು ವಿಶಿಷ್ಟ ಬಾಬುಗಳ ರಕಮನ್ನು ಹೊರತುಪಡಿಸಿ ಯಾವದಾದರೂ ರಕಮಿನ ಬೇಡಿಕೆಯು ಪೂರ್ಣವಾಗಿ ಇಲ್ಲವೆ ಕೆಲ ಅಂಶದಿಂದ ಮಂಜೂರ ಇಲ್ಲವೆ ನಾಮಂಜೂರು ಮಾಡುವ ಅಧಿಕಾರವಿದೆ. ಕೊನೆಗೆ ಗವ್ಹರ್ನರನು ಆ ಬಜೆಟ್ಟಿಗೆ ಮಾನ್ಯತೆಯನ್ನು ಕೊಡುತ್ತಾನೆ. ಅಸೆಂಬ್ಲಿಯಿಂದ ಮಂಜೂರಾಗಿದ್ದ ಖರ್ಚಿನ ಬಾಬನ್ನು ಗವ್ಹರ್ನರನು ಮಂಜೂರ ಮಾಡಬಹುದು. ಈ ನಾಮಂಜೂರನ್ನು ಮಂಜೂರ ಮಾಡುವ ಗವ್ಹರ್ನರನ ಅಧಿಕಾರಕ್ಕೆ 'ಸರ್ಟಿಫಿಕೇಶನದ ಅಧಿಕಾರ'ವೆಂಬ ಹೆಸರು.

## ೧೫. ಮುಂಬಯಿ ಇಲಾಖೆಯ ರಾಜ್ಯವ್ಯವಸ್ಥೆಯನ್ನು ವರ್ಣಿಸಿರಿ.

ಈ ಇಲಾಖೆಯ ಮುಖ್ಯಾಧಿಕಾರಿಯು ಗವ್ಹರ್ನರನು. ಇವನ ಕೈಯಲ್ಲಿ ಒಂದು ಮಂತ್ರಿಮಂಡಲವೂ ಎರಡು ಕಾಯದೇಮಂಡಲಗಳೂ ಇರುವವು. ಇಲಾಖೆಯ ಬಜೆಟ್ಟನ್ನು ಮಂಜೂರ ಮಾಡುವದು, ರಾಜ್ಯ ಕಾರಭಾರಾಡಳಿತೆಗೆ ಕಾಯದೆಗಳನ್ನು ಮಾಡುವದು, ಈ ಕೆಲಸಗಳು ಕಾಯದೆಮಂಡಲದವು. ಅದರಂತೆ ಮಂತ್ರಿಮಂಡಲವು ಗವ್ಹರ್ನರನ ಸಲಹೆಯಂತೆ ಇಲಾಖೆಯ ಎಲ್ಲ ಕಾರಭಾರವನ್ನು ಸಾಗಿಸುತ್ತದೆ. ಬೇರೆ ಬೇರೆ ಖಾತೆಗಳನ್ನು ಬೇರೆ ಬೇರೆ ಮಂತ್ರಿಗಳ ವಶಕ್ಕೆ ಕೊಟ್ಟಿವೆ. ಪ್ರತಿಯೊಬ್ಬ ಮಂತ್ರಿಗೆ ಸ್ವತಂತ್ರ ಕಚೇರಿಯಿರುತ್ತದೆ. ಅವನು ತನ್ನ ಖಾತೆಯ ಧೋರಣವನ್ನು ಗೊತ್ತುಪಡಿಸಿಕೊಂಡು ಅದರಂತೆ ಕೆಳಗಿನ ಅಧಿಕಾರಿಗಳಿಗೆ ಹುಕುಂ (ಅಪ್ಪಣೆ) ಕೊಡುತ್ತಾನೆ. ಮತ್ತು ಅವರ ಕೆಲಸಗಳ ಕಡೆಗೆ ಲಕ್ಷ್ಯಕೊಡುತ್ತಾನೆ.

ಕಾರಭಾರದ ಅನುಕೂಲತೆಗಾಗಿ ಈ ಇಲಾಖೆಯಲ್ಲಿ(ಪ್ರಾಂತ), ಜಿಲ್ಲೆ, ತಾಲ್ಲೂಕು, ಊರು. ಹೀಗೆ ಕ್ರಮದಿಂದ ಸಣ್ಣ ಸಣ್ಣ ವಿಭಾಗ ಮಾಡಿದೆ. ಇಲಾಖೆಯಲ್ಲಿ ಮೂರು ಭಾಗ (ಪ್ರಾಂತ) ಗಳಿದ್ದು ಪ್ರತಿಯೊಂದರ ಮೇಲೆ 'ಕಮಿಶನರ'ನೆಂಬವನನ್ನು ನೇಮಿಸಿರುತ್ತದೆ. ಅವನ ಕಡೆಗೆ ಮುಖ್ಯವಾಗಿ ಭೂಕಂದಾಯದ ಸಂಬಂಧದಲ್ಲಿ ಲಕ್ಷ್ಯವಿಡುವ ಕೆಲಸವಿರುತ್ತದೆ. ಆದರೆ ಇಲಾಖೆಯ ಮಹತ್ವದ ವಿಭಾಗಗಳೆಂದರೆ ಜಿಲ್ಲೆಗಳು. ಒಂದೊಂದು

ಜಿಲ್ಲೆಗೆ ಕಲೆಕ್ಟರನೆಂಬವನು ಅಧಿಕಾರಿಯು. ಸರಕಾರೀ ಕಾಯದೆ, ಆಜ್ಞೆಗಳನ್ನು ಅಮಲು ನಡಸುವ ಅಧಿಕಾರಿಯಿವನು. ಜಿಲ್ಲೆಯಲ್ಲಿಯ ಭೂಕಂದಾಯ ವ್ಯವಸ್ಥೆಯು ಇವನ ಕಡೆಗಿದ್ದು ಉಳಿದ ಬಹುಶಃ ಎಲ್ಲ ಖಾತೆಗಳ ಕಾರಭಾರದ ಮೇಲೆ ಇವನು ಲಕ್ಷ್ಯವಿಡಬೇಕಾಗುತ್ತದೆ. ಕಲೆಕ್ಟರನು ಜಿಲ್ಲೆಯ ಮಾಜಿಸ್ಟ್ರೇಟನೂ ಅಹುದು. ಜಿಲ್ಲೆಯಲ್ಲಿ ಶಾಂತತೆಯನ್ನಿಡುವದು ಇವನ ಕೆಲಸ. ಅದರ ಜವಾಬದಾರಿಯು ಇವನಿಗೇ ಇರುತ್ತದೆ. ಡಿ. ಮ್ಯಾಜಿಸ್ಟ್ರೇಟ ಈ ಹುದ್ದೆಯ ನಾತೆಯಿಂದ ಮಹತ್ವದ ಫೌಜದಾರೀ ಗುನ್ಹೆಗಳ ಬಗ್ಗೆ ನಿರ್ಣಯು ಕೊಡುತ್ತಾನೆ. ಗುನ್ಹೆಗಾನನಿಗೆ ಎರಡು ವರ್ಷ ಶಿಕ್ಷೆ ಹಾಗು ಸಾವಿರ ರೂಪಾಯಿ ದಂಡ ಮಾಡುವ ಅಧಿಕಾರವಿವನಿಗಿರುತ್ತದೆ. ಅದರಂತೆ ಜಿಲ್ಲೆಯಲ್ಲಿರುವ ಉಳಿದ ಸಣ್ಣ ಸಣ್ಣ ಮ್ಯಾಜಿಸ್ಟ್ರೇಟರ ಮೇಲೆ ಇವನ ಲಕ್ಷ್ಯವಿರುತ್ತದೆ. ಒಬ್ಬ ಕಲೆಕ್ಟರನ ಹೊರತು ಜಿಲ್ಲೆಯಲ್ಲಿ ನ್ಯಾಯಖಾತೆಯು, ಪೋಲಿಸ, ಜಂಗಲ (ಫಾರೆಸ್ಟ) ಶಿಕ್ಷಣ ಮೊದಲಾದ ಖಾತೆಗಳ ಅಧಿಕಾರಿಗಳಿರುವರು. ಪ್ರತಿ ತಾಲೂಕಿಗೊಬ್ಬ ಮುಖ್ಯಾಧಿಕಾರಿಯಿರುವನು. ಅವನೇ ಮಾಮಲೇದಾರನು. ಜಿಲ್ಲೆಗ ಅಧಿಕಾರ ನಡೆಯಿಸಲು ಕಲೆಕ್ಟರನು ಹೇಗೋ ಹಾಗೆಯೇ ತಾಲೂಕಿಗ ಮಾಮಲೇದಾರನು. ಮಾಮಲೇದಾರ ಮಹಾಲಕರಿಗಳ ಕೆಲಸದ ಮೇಲೆ ಕಲೆಕ್ಟರನ ಲಕ್ಷ್ಯವಿರುವದು. ಊರಿನ ಮುಖ್ಯಾಧಿಕಾರಿಗಳು ಗೌಡ ಕುಲಕರ್ಣಿಯವರು. ಇವರಿಂದ ಗ್ರಾಮದ ಕಾರಭಾರ ಸಾಗುತ್ತದೆ. ಇವರ ಮೇಲೆ ಮಾಮಲೆದಾರರ ಅಧಿಕಾರವಿರುವದು.

ಈ ಪ್ರಕಾರ ಮುಂಬಯಿ ಇಲಾಖೆಯ ರಾಜ್ಯಕಾರಭಾರ ನಡೆದಿರುತ್ತದೆ.

**೧೬. ನ್ಯಾಯಖಾತೆಯಲ್ಲಿ ದಿವಾಣಿಯ ಕೆಲಸವು ಹೇಗೆ ನಡೆಯುತ್ತದೆ ?**

ಪ್ರತಿಯೊಂದು ಜಿಲ್ಹೆಗ ಒಂದು ಮುಖ್ಯ ಕೋರ್ಟ ಇರುತ್ತದೆ. ಅದರ ನ್ಯಾಯಾಧೀಶನಿಗೆ 'ಡಿಸ್ಟ್ರಿಕ್ಟಜಜ್ಜ'ನೆನ್ನುವರು. ಅವನ ಹಾವಳ್ಳಿ ತಾಲೂಕುಗಳಲ್ಲಿಯ ಸಬ್‌ಜಜ್ಜ ಅಥವಾ ಮುನ್ಸಫಕೋರ್ಟುಗಳಿರುವವು. ಆ ಕೋರ್ಟುಗಳಲ್ಲಿ ಆಸ್ತಿ, ಕೊಡತಕ್ಕೊಳ್ಳುವ ವ್ಯವಹಾರಗಳು, ವಾರಸಾ ಹಕ್ಕುಕಾರ ಮುಂತಾದವುಗಳ ಸಂಬಂಧವಾಗಿ ದಿವಾಣಿ ದಾವೆಗಳು ನಡೆಯು

ತ್ತವೆ. ತಾಲೂಕಿನಲ್ಲಿಯ ಕೋರ್ಟುಗಳು ವಿಧಿಸಿದ ನಿರ್ಣಯಗಳ ವಿರುದ್ಧ ವಾಗಿ ಜಿಲ್ಲಾ ಕೋರ್ಟಿಗೆ 'ಅಪೀಲು' ಮಾಡಲಿಕ್ಕೆ ಬರುವದು.

ಇಲಾಖೆಯ ಮುಖ್ಯ ಪಟ್ಟಣದಲ್ಲಿ 'ಹಾಯಕೋರ್ಟು' ಇರುತ್ತದೆ. ಜಿಲ್ಲಾ ಕೋರ್ಟಿನ ಮೇಲೆ ಈ ಹಾಯಕೋರ್ಟಿಗೆ ಅಪೀಲು ಮಾಡಲಿಕ್ಕೆ ಬರುವದು. ಹಾಯಕೋರ್ಟು ಇಲಾಖೆಯಲ್ಲಿಯ ಎಲ್ಲ ಕೋರ್ಟುಗಳ ಮೇಲೆ ಲಕ್ಷ್ಯಪೂರೈಸುತ್ತದೆ. ಇಲಾಖೆಯ ಪಟ್ಟಣದಲ್ಲಿ ಹಾಯಕೋರ್ಟಿನ ವಶದಲ್ಲಿ ದಿವಾಣಿ ದಾವೆಗಳನ್ನು ನಡೆಯಿಸುವದಕ್ಕಾಗಿ 'ಸ್ಮಾಲ್‌ಕಾಜ' ಕೋರ್ಟು ಇರುತ್ತದೆ. ಈ ಹಾಯಕೋರ್ಟಿನ ಮೇಲೆ ದಿಲ್ಲಿಯ ರಾಜಧಾನಿಯಲ್ಲಿರುವ 'ಫೆಡರಲ್ ಕೋರ್ಟಿಗೆ' ಅಪೀಲು ಮಾಡಲು ಬರುವದು.

ಇಲಾಖೆಯಲ್ಲಿಯ ಸಣ್ಣದೊಡ್ಡ ಕೋರ್ಟುಗಳಿಗೆ ಯಾವ ಯಾವ ಪ್ರಕಾರದ ದಿವಾಣಿ ದಾವೆಗಳನ್ನು ನಡೆಯಿಸುವ ಅಧಿಕಾರವಿರುತ್ತದೆಂಬದು ಕಾಯದೆಗಳಿಂದ ನಿಶ್ಚಿತಪಡಿಸಿರುತ್ತದೆ.

**೧೭. ಇಲಾಖೆಯ ರಾಜ್ಯವ್ಯವಸ್ಥೆಯಲ್ಲಿ ಮುಖ್ಯ ಸರಕಾರೀ ಖಾತೆಗಳನ್ನೂ ಅವುಗಳ ಕಾರ್ಯಗಳನ್ನೂ ಬರೆಯಿರಿ.**

ಇಲಾಖೆಯಲ್ಲಿಯ ರಾಜ್ಯವ್ಯವಸ್ಥೆಯಲ್ಲಿಯ ಮುಖ್ಯ ಸರಕಾರೀ ಖಾತೆಗಳು—

೧. ಜಮೀನ ಕಂದಾಯ ಖಾತೆ— ಭೂಮಿಯ ಕಂದಾಯವನ್ನು ಗೊತ್ತುಪಡಿಸಿ ವಸೂಲ ಮಾಡುವದು.

೨. ನ್ಯಾಯಖಾತೆ:— ರೈತರ ದಿವಾಣಿ ಮತ್ತು ಫೌಜದಾರೀ ಖಟ್ಲೆಗಳನ್ನು ನಡಿಸುವದು.

೩. ಪೋಲೀಸ ಖಾತೆ:— ಪ್ರಾಂತದಲ್ಲಿ ಶಾಂತತೆಯನ್ನು ಕಾಯ್ದುಕೊಂಡು ಗುನ್ಹೆಗಳ ವಿಚಾರಣೆ ಮಾಡುವದು.

೪. ಶಿಕ್ಷಣಖಾತೆ: ಪ್ರಜೆಗಳಿಗೆ ಶಿಕ್ಷಣ ಕೊಡುವ ಶಾಲೆ-ಕಾಲೇಜುಗಳನ್ನು ನಡಿಸುವದು.

೫. ಪಬ್ಲಿಕವರ್ಕ್ಸ ಖಾತೆ:— ಸರಕಾರೀ ಕಟ್ಟಡ, ಮಾರ್ಗ, ಪೂಲು ಮೊದಲಾದವುಗಳನ್ನು ಕಟ್ಟಿಸಿ ಸುಸ್ಥಿರೂಪದಲ್ಲಿಡಿಸುವದು ಅದರಂತೆ ಕಾಲುವೆ, ಒಡ್ಡುಕಟ್ಟುಗಳನ್ನು ಕಟ್ಟಿಸಿ ಅವುಗಳ ನೀರನ್ನು ಒಕ್ಕಲತನಕ್ಕಾಗಿ ಉಪಯೋಗಿಸುವಂತೆ ಮಾಡುವದು.

೬. ಅರಣ್ಯಖಾತೆ:—ಅಡವಿಯ ಸಂರಕ್ಷಣ, ಹಳೆಯ ಗಿಡಗಳನ್ನು ಕಡಿಸುವದು, ಹೊಸ ಗಿಡಗಳನ್ನು ನೆಡಿಸುವದು ಇತ್ಯಾದಿ ಕೆಲಸ ಮಾಡಿಸುವದು.

೭. ಅಬಕಾರೀ ಖಾತೆ:— ಮಾದಕ ಪದಾರ್ಥಗಳ (ಸರಾಯಿ, ಅಫೀಮು, ಗಾಂಜಾ) ಉತ್ಪತ್ತಿ ಹಾಗು ವಿತರಣಗಳ ವ್ಯವಸ್ಥೆಮಾಡುವದು.

೮. ವೈದ್ಯಕ ಮತ್ತು ಸ್ಯಾನಿಟರಿ ಖಾತೆ:— ಜಿಲ್ಹೆಯ ಹಾಗು ತಾಲೂಕಿನ ಮುಖ್ಯಸ್ಥಳಗಳಲ್ಲಿ ಸರಕಾರಿ ಆಸ್ಪತ್ರೆಗಳನ್ನು ತೆರೆಯುವದು ಮತ್ತು ಜನರ ಆರೋಗ್ಯ ಚೆನ್ನಾಗಿ ಉಳಿಯುವಂತೆ ವ್ಯವಸ್ಥೆಮಾಡುವದು

೯. ಒಕ್ಕಲತನ ಖಾತೆ:— ಒಕ್ಕಲತನದ ಉದ್ಯೋಗದ ಹೆಚ್ಚಳಕ್ಕಾಗಿ ಪ್ರಯತ್ನಿಸುವದು.

೧೦. ಸ್ಥಾನಿಕ ಸ್ವರಾಜ್ಯ ಖಾತೆ:—ಮುನಸಿಪಾಲಟಿ, ಲೋಕಲ್ ಬೋರ್ಡು, ಗ್ರಾಮಪಂಚಾಯತಿ ಈ ಸಂಸ್ಥೆಗಳ ಕಾರಭಾರದ ಮೇಲೆ ಲಕ್ಷ್ಯವಿಡುವದು, ಅವುಗಳನ್ನು ಒಳ್ಳೇ ಸ್ಥಿತಿಗೆ ತರುವದು ಮತ್ತು ಅವುಗಳನ್ನು ಹೆಚ್ಚಿಸುವದು.

**೧೮. ಭಾರತದಲ್ಲಿ ಭೂಕಂದಾಯದ ವಸೂಲಿಯ ಪದ್ಧತಿಗಳಾವವು ?**

೧. ಕಾಯಂ ಧಾರಾಪದ್ಧತಿ. ೨. ಜಮೀನದಾರಿ ಪದ್ಧತಿ ಮತ್ತು ೩. ರೈತವಾರಿ ಪದ್ಧತಿ.

೧. ಕಾಯಂ ಧಾರಾ ಪದ್ಧತಿ:— ಈ ಪದ್ಧತಿಯು ಬಂಗಾಲದಲ್ಲಿ ನಡೆಯುವದು. ಅಲ್ಲಿಯ ಜಮೀನದಾರರು ತಮ್ಮ ಹೊಲಗಳ ಮಾಲಕರು. ಸರಕಾರವು ಅವರ ಜಮೀನುಗಳ ಕಂದಾಯವನ್ನು ಒಮ್ಮೆ ನಿಶ್ಚಿತ ಪಡಿಸಿದ್ದು ಅದರಲ್ಲಿ ಎಂದೂ ಹೆಚ್ಚು ಕಡಿಮೆಯಾಗುವಂತಿಲ್ಲ. ಈ ಪದ್ಧತಿಯು 'ಕಾಯಂಧಾರಾ' ಎನ್ನಿಸುವದು.

೨. ಜಮೀನದಾರಿ ಪದ್ಧತಿ:—ಈ ಪದ್ಧತಿಯು ಸಂಯುಕ್ತಪ್ರಾಂತ, ಪಂಜಾಬ, ಮಧ್ಯಪ್ರಾಂತಗಳಲ್ಲಿದೆ. ಜಮೀನದಾರರು ರೈತರಿಂದ ತೆರಿಗೆಯನ್ನು ವಸೂಲ ಮಾಡಿಕೊಂಡು ಅದರಲ್ಲಿಯ ನಿಶ್ಚಿತ ಭಾಗವನ್ನು ಸರಕಾರಕ್ಕೆ ಮುಟ್ಟಿಸುತ್ತಾರೆ. ಆದರೆ ಸರಕಾರಕ್ಕೆ ಕೊಡತಕ್ಕ ಭಾಗವು ಕಾಯಮಾಗಿ ಇರುವದಿಲ್ಲ. ಪ್ರತಿ ೨೦ ಅಥವಾ ೩೦ ವರ್ಷಗಳಿಗೆ ಸರ

ಕಾರದವರು ಜಮೀನುದಾರರೊಡನೆ ಹೊಸ ಕರಾರು ಮಾಡಿಕೊಂಡು ಆ ಭಾಗದಲ್ಲಿ ಹೆಚ್ಚು ಕಡಿಮೆ ಮಾಡಿಕೊಳ್ಳುವರು. ಈ ಪದ್ಧತಿಗೆ ಜಮೀನ ದಾರಿ ಪದ್ಧತಿ ಅನ್ನುವರು.

೩. ರೈತವಾರಿ ಪದ್ಧತಿ:— ಈ ಪದ್ಧತಿಯು ಮುಂಬಯಿ, ಮದ್ರಾಸ ಪ್ರಾಂತಗಳಲ್ಲಿ ನಡೆಯುವದು. ಪ್ರತಿಯೊಬ್ಬ ಸಣ್ಣ ದೊಡ್ಡ ಒಕ್ಕಲಿಗನು ಸ್ವತಃ ಸರಕಾರಕ್ಕೆ ಗೊತ್ತುಮಾಡಿದ ತೆರಿಗೆಯನ್ನು ತೆತ್ತುತ್ತಾನೆ. ಕೆಲವೊಂದು ನಿಶ್ಚಿತ ಅವಧಿಯಿಂದ ಅಂದರೆ ೧೦, ೨೦, ೩೦, ವರ್ಷಗಳಿಗೆ ರಿವ್ಹಿಜನ್ ಆಗಿ ಕಂದಾಯದಲ್ಲಿ ಹೆಚ್ಚು ಕಡಿಯಾಗುವದು. ಇದೇ ರೈತ ವಾರಿ ಪದ್ಧತಿಯು.

### ೧೯. ಸ್ಥಾನಿಕ ಸ್ವರಾಜ್ಯವೆಂದರೇನು ?

ಜನರಿಗೆ ಸಾರ್ವಜನಿಕ ಸಂಸ್ಥೆಗಳನ್ನು ನಡೆಯಿಸಲಿಕ್ಕೆ ಬರಬೇಕು. ಅದರ ಅನುಭವವನ್ನು ಪಡೆಯಬೇಕು. ಮತ್ತು ರಾಜ್ಯಕಾರಭಾರದ ಶಿಕ್ಷಣವು ದೊರೆತು ಜವಾಬದಾರಿಯ ಕೆಲಸಗಳನ್ನು ಮಾಡುವ ಯೋಗ್ಯತೆಯು ಅವರಲ್ಲಿ ಉಂಟಾಗಬೇಕು ಎಂಬ ಉದ್ದೇಶಗಳಿಂದ ಕೆಲವೊಂದು ನಿಶ್ಚಿತ ಪ್ರದೇಶದಲ್ಲಿಯ ಗೊತ್ತುಪಡಿಸಿದ ಕಾರಭಾರವನ್ನು ಸಾಗಿಸುವ ಅಧಿಕಾರವನ್ನು ಸರಕಾರದವರು ಅವರಿಗೆ ಕೊಟ್ಟಿರುತ್ತಾರೆ. ಅದಕ್ಕೆ 'ಸ್ಥಾನಿಕ ಸ್ವರಾಜ್ಯ' ವೆಂಬ ಹೆಸರು. ಸ್ಥಾನಿಕ ಸ್ವರಾಜ್ಯದಲ್ಲಿ ೧ ಲೋಕಲ ಬೋರ್ಡ. ೨. ಮ್ಯುನಿಸಿಪಾಲಟಿ. ೩. ಗ್ರಾಮಪಂಚಾಯತ ಇವೇ ಮುಖ್ಯವಾಗಿರುವವು. ಈ ಸಂಸ್ಥೆಗಳ ಕೆಲಸಗಳು ಒಂದು ಮಂಡಲದಿಂದ ಉಂಟಾಗುತ್ತದೆ. ಇವುಗಳಲ್ಲಿಯ ಎಲ್ಲ ಸಭಾಸದರು ಲೋಕನಿಯುಕ್ತರಿರುವರು.

### ೨೦. 'ಲೋಕಲಬೋರ್ಡ' ಸಂಸ್ಥೆಯು ಕುರಿತು ಬರೆಯಿರಿ.

ಜಿಲ್ಹೆಯಲ್ಲಿ ಕೆಲವು ವಿಶಿಷ್ಟ ಸಾರ್ವಜನಿಕ ಕೆಲಸ ನಡೆಯಿಸುವದಕ್ಕೆ ನೇಮಿಸಿದ ಮಂಡಲಕ್ಕೆ 'ಲೋಕಲಬೋರ್ಡ' ಎಂಬ ಹೆಸರು. ಇದರಲ್ಲಿಯ ಎಲ್ಲ ಸಭಾಸದರು ಲೋಕನಿಯುಕ್ತರಾಗಿರುವರು.

ಈ ಲೋಕಲಬೋರ್ಡಿನ ಕೆಲಸಗಳು:—೧. ಮಾರ್ಗಗಳು ಅಂದರೆ ಜಿಲ್ಹೆಯಲ್ಲಿಯ ಮಾರ್ಗ, ಪೂಲುಗಳನ್ನು ಕಟ್ಟಿಸುವದು. ೨. ಆರೋಗ್ಯ

ಜಿಲ್ಹೆಯಲ್ಲಿಯ ಕೆಲವು ಕಡೆಯಲ್ಲಿ ದವಾಖಾನೆಗಳನ್ನು ತೆರೆಯುವದು; ಪ್ಲೈಗ್ ಚುಚ್ಚುವದು; ಸಾಂಸರ್ಗಿಕ ರೋಗ ಪ್ರತಿಬಂಧ ಮಾಡುವದು. ಇತ್ಯಾದಿ. ೩. ಇತರ ಸೌಕರ್ಯಗಳು ಧರ್ಮಶಾಲೆ, ಬಾವಿ, ಕೆರೆಗಳನ್ನು ಕಟ್ಟಿಸುವದು; ಸಂತೆ ನೆರೆಯಿಸುವ ವ್ಯವಸ್ಥೆ ಮಾಡಿಸುವದು. ಇತ್ಯಾದಿ ೪. ಪ್ರಾಥಮಿಕ ಶಿಕ್ಷಣ ಶಾಲೆಗಳನ್ನು ಕಟ್ಟಿಸುವದು; ತಮ್ಮಲ್ಲಿ ಒಂದು ಸ್ಕೂಲಬೋರ್ಡ ಮಾಡಿಕೊಂಡು ಅದರ ಮುಖಾಂತರ ಶಾಲೆಗಳ ವ್ಯವಸ್ಥೆಯನ್ನು ನೋಡುವದು.

ಉತ್ಪನ್ನ:— ಲೋಕಲ್ಫಂಡ (ತೆರಿಗೆಯ ಹಿಂದೆ ಪ್ರತಿಯೊಂದು ರೂಪಾಯಿಗೆ ಒಂದು ಆಣೆಗೆ ಮಿಕ್ಕಿ ವಸೂಲ ಮಾಡುವ ಕರ) ಮಾರ್ಗ-ರಸ್ತೆಗಳ ಮೇಲಿನ ಕರ (ಸುಂಕ) ಮತ್ತು ಸರಕಾರದಿಂದ ದೊರೆಯುವ ಸಹಾಯಕ ದ್ರವ್ಯ (ಗ್ರ್ಯಾಂಟು) ಇವೇ ಲೋಕಲಬೋರ್ಡಿನ ಮುಖ್ಯ ಉತ್ಪನ್ನದ ಬಾಬುಗಳು.

## ೨೧. ಮ್ಯುನಸಿಪಾಲಟಿಯ ಬಗ್ಗೆ ಬರೆಯಿರಿ.

ಪಟ್ಟಣದಲ್ಲಿಯ ಕೆಲವು ವಿಶಿಷ್ಟ ಸಾರ್ವಜನಿಕ ಕಾರ್ಯಗಳನ್ನು ಮಾಡುವದಕ್ಕಾಗಿ ನೇಮಿಸಿದ ಮಂಡಲಕ್ಕೆ 'ಮ್ಯುನಸಿಪಾಲ್ಟಿ' ಎಂಬ ಹೆಸರು ಇದರಲ್ಲಿಯ ಸಭಾಸದರೆಲ್ಲ ಲೋಕನಿಯುಕ್ತರು.

ಮ್ಯುನಸಿಪಾಲಿಟಿಯವರ ಕೆಲಸಗಳು:—

೧ ಮಾರ್ಗಗಳು: ಮಾರ್ಗ, ಪೂಲುಗಳನ್ನು ಕಟ್ಟಿಸುವದು.

೨. ಆರೋಗ್ಯ:— ದವಾಖಾನೆ ತೆರೆಯುವದು, ಪ್ಲೈಗ್ ಚುಚ್ಚುವ ವ್ಯವಸ್ಥೆ, ಪಿಡುಗುಗಳಿದ್ದಾಗ ರೋಗ ಪ್ರತಿಬಂಧಕಕ್ಕಾಗಿ ಯತ್ನಿಸುವದು, ಶಹರದ ರಸ್ತೆ, ಕಾಲುವೆ, ಗಟಾರುಗಳನ್ನು ಸ್ವಚ್ಛವಾಗಿರಿಸುವದು, ಹೊಲಸು ನೀರೆಲ್ಲ ಊರಹೊರಗೆ ಹೋಗುವಂತೆ ಮಾಡುವದು.

೩. ಇತರ ಸೌಕರ್ಯ:— ರಾತ್ರಿ ದೀಪದ ವ್ಯವಸ್ಥೆ, ನಳದಿಂದ ನೀರು ತರುವದು, ಸಂತೆ ನೆರೆಯಿಸುವ ವ್ಯವಸ್ಥೆ ಮಾಡಿಸುವದು, ಸಾರ್ವಜನಿಕ ಉದ್ಯಾನ-ವನಗಳು, ವಾಚನಾಲಯ, ಸಭಾಗೃಹಗಳು ಮೊದಲಾದವುಗಳ ಅನುಕೂಲತೆ ಮಾಡಿಕೊಡುವದು.

ಉತ್ಪನ್ನ:— ಮನೆ, ವಾಹನ, ಗಳ ಮೇಲೆ ಕರವನ್ನು ಹೇರುವದಲ್ಲದೆ ವಸ್ತುಗಳ ಮೇಲಿನ ಸುಂಕ, ನೀರಿನ ಪಟ್ಟಿ, ಅಂಗಡಿಗಳ ಬಾಡಿಗೆ

ಮೊದಲಾದ ಉತ್ಪನ್ನದ ಬಾಬುಗಳಲ್ಲದೆ ಸರಕಾರಿಯ ಸಹಾಯಕ ಧನ (ಗ್ರ್ಯಾಂಟು)ವು ಇವೇ ಮ್ಯುನಸಿಪಾಲಿಟಿಯ ಉತ್ಪನ್ನಗಳು ಮುಖ್ಯ ಬಾಬುಗಳು.

## ೨೨. ಗ್ರಾಮಪಂಚಾಯತಿಯನ್ನು ಕುರಿತು ಬರೆ.

ಸಣ್ಣ ಊರುಗಳಲ್ಲಿ ಕೆಲವು ಸಾರ್ವಜನಿಕ ಕಾರ್ಯಗಳನ್ನು ಮಾಡುವದಕ್ಕಾಗಿ ಆಯ್ಕೆಯಿಂದ ಒಂದು ಮಂಡಲವನ್ನು ಸಿದ್ಧಪಡಿಸುವರು. ಅದೇ ಗ್ರಾಮಪಂಚಾಯತಿಯು. ಊರ ಗೌಡನು ಇದರ ಪಂಚರಲ್ಲಿ ಒಬ್ಬನು ಅಧ್ಯಕ್ಷನು ಬಹುಮತದಿಂದ ಬಂದವನು. ಪಂಚರೆಲ್ಲ ಆರಿಸಿ ಬಂದವರು. ಪಂಚರು ಐದು ವರ್ಷಕ್ಕೊಮ್ಮೆ ಸರಪಂಚನು ವರ್ಷಕ್ಕೊಮ್ಮೆ ಆರಿಸಿ ಬರತಕ್ಕದ್ದು.

ಕೆಲಸಗಳು:— ೧. ಊರಲ್ಲಿ ದೀಪದ ವ್ಯವಸ್ಥೆ ೨. ರಸ್ತೆ ದುರಸ್ತಿ ಹಾಗು ಹೊಸ ರಸ್ತೆಗಳ ಕಟ್ಟುವಿಕೆ ೩. ಜನರ ಆರೋಗ್ಯದ ಬಗ್ಗೆ ಎಚ್ಚರ ೪. ನೀರಿನ ವ್ಯವಸ್ಥೆ ೫. ಸಂತೆಯ ವ್ಯವಸ್ಥೆ ೬. ಶಿಕ್ಷಣದ ಬಗ್ಗೆ ಲಕ್ಷ್ಯ ಪೂರೈಸುವದು.

ಉತ್ಪನ್ನಗಳು;— ಮನೆಪಟ್ಟಿ, ಕೊಂಡವಾಡಿ, ಸಂತೆಯ ಕರ, ಲೋ. ಬೋ. ಹಾಗು ಸರಕಾರದ ಗ್ರ್ಯಾಂಟುಗಳು.



## ೬. ಭಾರತೀಯ ಮಹಾವ್ಯಕ್ತಿಗಳು



### ೧. ಜಗದ ಬೆಳಕು—ಬಾಪೂಜಿ.

ಇಪ್ಪತ್ತನೆಯ ಶತಮಾನದ ಕ್ರಾಂತಿಪುರುಷನೀತ. ಪಾಶವೀಶಕ್ತಿಯನ್ನು ಆತ್ಮಶಕ್ತಿಯ ಬಲದಿಂದ ಗೆಲಿದ ಅದ್ವಿತೀಯ ಯೋಧ ! ಸತ್ಯ-ಅಹಿಂಸೆಗಳ ಮಹತಿಯನ್ನು ಜಗಕೆ ಬೀರಿದ ಮಹಾಪುರುಷ !! ಮಾನವತೆ ದೇವತ್ವವಾಗಬಲ್ಲುದೆ? ಎಂಬುದಕ್ಕೆ ಪ್ರತ್ಯಕ್ಷ ಪ್ರಮಾಣ ಬಾಪೂಜಿ. ಅಂತೇ ಬಾಪೂಜಿಯನ್ನು " ಜಗದ ಬೆಳಕು " ಎಂದೆನ್ನಲಾಗುತ್ತದೆ !!

ಪೋರಬಂದರದಲ್ಲಿರುವ ಗಾಂಧಿ ಮನೆತನದಲ್ಲಿ ೧೮೬೯ರಲ್ಲಿ ಜನಿಸಿದರು. ಮೋಹನದಾಸ ಎಂಬುದು ಇಟ್ಟ ಹೆಸರು. ೧೮೮೭ರಲ್ಲಿ ಮ್ಯಾಟ್ರಿಕ್ ಪಾಸಾಗಿ ಹೆಚ್ಚಿನ ಶಿಕ್ಷಣಕ್ಕಾಗಿ ಆಂಗ್ಲನಾಡಿಗೆ ಹೋಗಲು ಬಯಸಿದರು. ಹೊರಡುವ ದಿನ, ತಾಯಿ ಮಗುವಿನಿಂದ ಪವಿತ್ರನಾಗಿಯೇ ಹಿಂದಿರುಗಬೇಕೆಂದು ವಚನ ತಕ್ಕೊಂಡು ಅವರನ್ನು ಬೀಳ್ಕೊಟ್ಟಳು. ಮೋಹನದಾಸರು ೧೮೯೧ರಲ್ಲಿ ಬಾರ್-ಎಟ್-ಲಾ ಪರೀಕ್ಷೆ ಪಾಸಾಗಿ, ಪಾವಿತ್ರ್ಯವನ್ನು ಕಾಯ್ದುಕೊಂಡೇ ಮರಳಿದರು.

ಬಾಪೂಜಿಯವರ ವಿವಾಹ " ಕಸ್ತೂರಬಾ " ಅವರೊಡನಾಯಿತು. ಆದರ್ಶ ಸ್ತ್ರೀಯಾಗುವಂತೆ ಶಿಕ್ಷಣವನ್ನಿತ್ತರು. ತಾವಾದರೋ ಸನ್ಯಾಸಿಯಂತೆ ವಿಲಾಸರಹಿತ ಜೀವನ ಸಾಗಿಸುತ್ತಿದ್ದರು. ಯಾವಾಗಲೂ ವಿಚಾರಪರರು. ಜನತೆಯ ಕಷ್ಟ ಕಂಡಾಗಲೆಲ್ಲ ಅವರ ಹೃದಯ ಮರುಗುತ್ತಿತ್ತು. ಅಳುತ್ತಿತ್ತು. ಅಂತೇ ಆಫ್ರಿಕೆಯಲ್ಲಿಯ ಹಿಂದೀಯರಿಗಾಗಿ, ಅವರ ಹಕ್ಕುಗಳಿಗಾಗಿ ಹೋರಾಡಿ ವಿಜಯ ಸಂಪಾದಿಸಿದರು. ಭಾರತಕ್ಕೆ ಹಿಂತಿರುಗಿದರು. ಇಲ್ಲಿ ತಮ್ಮ ಅಮೌಲ್ಯವಾದ ಸೇವೆಯಿಂದ ಜಗದ ಇತಿಹಾಸದಲ್ಲಿಯೇ ತಮ್ಮದೇ ಆದ ಸ್ಥಾನ ಗಳಿಸಿಕೊಂಡಿದ್ದಾರೆ.

ಬಾಪೂಜಿಯವರು ಪ್ರತಿಯೊಂದನ್ನೂ ತಮ್ಮ ವಿಚಾರದ ಒರೆಗಲ್ಲಿಗೆ ತಿಕ್ಕಿ ನೋಡಿದವರು, ದಲಿತೋದ್ಧಾರ, ಹೆಮ್ಮಕ್ಕಳ ಸುಧಾರಣೆ, ಖಾದಿ

ಪ್ರಚಾರ, ಮೂಲಶಿಕ್ಷಣ, ಒಂದೇ ಎರಡೇ ಹೀಗೆಯೇ ಬರೆಯುತ್ತ ಹೋದರೆ ಅದೇ ಒಂದು ಗ್ರಂಥವಾಗುವದು.

ಅವರ ಜಿಗಟುತನದ ಹೋರಾಟ ನಾಡಿನಲ್ಲಿ ನವಚೈತನ್ಯ ಹುಟ್ಟಿಸಿತು. ಭಾರತೀಯ ಜೀವನದಲ್ಲಿಯೇ ಅನೇಕ ಕ್ರಾಂತಿಕಾರಕ ಬದಲಾವಣೆಗಳಾದವು. ಅವರ ಅವಿಶ್ರಾಂತ ಹೋರಾಟದ ಫಲವೆಂದೇ ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ಗಾಂಧೀವಾದದ ಮೂಲಗುರಿ "ರಕ್ತರಹಿತ" ಕ್ರಾಂತಿಯೇ ಆಗಿದೆ.

ಪೂಜ್ಯ ಬಾಪೂಜಿಯ ಸಾವೂ ಸಹ ಮಹಾತ್ಮ್ಯವುಳ್ಳದ್ದು. ಅವರ ಮರಣ ಭಾರತದಲ್ಲಿಯ ಮತೀಯ ಭಾವನೆಗಳನ್ನು ಬೇರು ಸಹಿತ ಕಿತ್ತು ಬಿಸುಟಿತು! ೧೯೪೮ನೇ ವರುಷ ಗೋಡಸೆ ಎಂಬವನಿಂದ ಕೊಲೆಯಾದರೂ ಅವರು ಅಮರರಾದರು! ನಾಡಿಗೆ ಸಲ್ಲಿಸುವ ಸೇವೆ ಇದಕ್ಕೂ ಹೆಚ್ಚಿನದು ಇನ್ನೇನಿದೆ?

## ೨. ಭಾರತದ ಕೋಕಿಲೆ—**ಸರೋಜಿನಿದೇವಿ**

ಆದರ್ಶ ಗ್ರಹಿಣಿ, ಕವಿಯಿತ್ರಿ, ಅಚಲದೇಶಪ್ರೇಮದ ಪ್ರತೀಕ ಸರೋಜನಿದೇವಿ ನಾಯಡು. ಅವರು ತಮ್ಮ ಹದಿಮೂರನೆಯ ವಯಸ್ಸಿನಲ್ಲಿಯೇ ಆಂಗ್ಲಭಾಷೆಯಲ್ಲಿ ಕಾವ್ಯಗಳನ್ನು ರಚಿಸಿದುದು ಸಣ್ಣ ಸಂಗತಿಯಲ್ಲ?

ಇವರು ಹೈದರಾಬಾದದಲ್ಲಿ ಚಟ್ಟೋಪಾಧ್ಯಾಯರ ಮನೆತನದಲ್ಲಿ ಹುಟ್ಟಿದರು. ೧೨ನೆಯ ವಯಸ್ಸಿನಲ್ಲಿ ಮ್ಯಾಟ್ರಿಕ್ ಪಾಸಾಗಿ ೧೮೯೫ರಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಇಂಗ್ಲಂಡಕ್ಕೆ ಹೋದರು. ಆದರೆ ಮೂರು ವರುಷ ವ್ಯಾಸಂಗ ಮಾಡುವಷ್ಟರಲ್ಲಿಯೇ ಅನಾರೋಗ್ಯದ ಮೂಲಕ ಭಾರತಕ್ಕೆ ಮರಳಿದರು. ನಂತರ ಇಲ್ಲಿ ಡಾ. ನಾಯುಡುರವರೊಡನೆ ವಿವಾಹವಾಯಿತು. ಬಾಪೂಜಿಯವರಿಂದ ಭಾರತದಲ್ಲಾದ ಕ್ರಾಂತಿ ಇವರನ್ನು ಮುಗ್ಧರನ್ನಾಗಿ ಮಾಡಿತು. ಇವರಿಗೆ ದೇಶದ ಏಳ್ಗೆಯ ಚಿಂತೆ ಬಾಧಿಸತೊಡಗಿತು.

ಇವರು ಕಾಂಗ್ರೆಸ್ಸಿನ ತತ್ವಪ್ರಚಾರಕ್ಕಾಗಿ ಭಾರತದಾದ್ಯಂತ ಸುತ್ತಾಡಿದ್ದಾರೆ. ಹಲವು ಸಲ ಸೆರೆಮನೆ ವಾಸವಾಗಿದೆ. ರಾಷ್ಟ್ರಸೇವೆಯಲ್ಲಿ

ಮುದಿಯಾದರೂ ಹಿಂದುಳಿಯಲಾಗದೆಂದು ಉಪ್ಪಿನ ಸತ್ಯಾಗ್ರಹದಲ್ಲಿ ಮುಂದಾಳುತನ ವಹಿಸಿದರು. ೧೯೩೧ರಲ್ಲಿ ಅ. ಭಾ. ಕಾಂ. ಕ. ವಿಶೇಷ ಅಧಿವೇಶನದಲ್ಲಿ ಅಧ್ಯಕ್ಷತೆಯ ಸ್ಥಾನ ಇವರಿಗೆ ದೊರೆಯಿತು. ಬಾಪೂಜಿಯ ತತ್ವಗಳನ್ನೂ ಅನುಸರಿಸುವ ಸ್ತ್ರೀಯರಲ್ಲಿ ಇವರೇ ಅಗ್ರಗಣ್ಯರು. ಮುಪ್ಪಿನವರಾಗಿದ್ದರೂ ಸಹ ೧೯೪೨ರ ಮಹಾಕ್ರಾಂತಿಯಲ್ಲಿ ವೀರರಮಣಿಯಂತೆ ಧುಮ್ಮಿಕ್ಕಿದರು

ಸ್ವಾತಂತ್ರ್ಯದೊರೆತ ತರುವಾಯ ಇವರು ಬಿಹಾರದ ಗವರ್ನರರೆಂದು ನಿಯಮಿಸಲ್ಪಟ್ಟರು. ಭಾರತವು ಹೆಣ್ಮಕ್ಕಳಿಗಾಗಿ ಉದಾರ ಧೋರಣೆಯುಳ್ಳದ್ದೆಂದು ಹೇಳಲು ಇದು ಸಾಕಷ್ಟೇ!

ಆಡಳಿತೆಯನ್ನು ಕೈಕೊಂಡಿರುವಾಗಲೇ ಹೃದಯಕ್ರಿಯೆ ನಿಂತು ದಿವಂಗತರಾದರು! ಆಗ ಉಕ್ಕಿನ ಮನುಷ್ಯ ಪಟೇಲರು ಹೇಳಿದ ಮಾತು "ಭಾರತದ ಕೋಕಿಲೆಯ ಗಾನವನ್ನು ಇನ್ನು ಕೇಳಲಾರೆವು!" ಎಂಬದು ಪ್ರತಿಯೊಬ್ಬ ಭಾರತೀಯನ ಹೃದಯದ ಮಿಡಿತವೇ ಆಗಿದೆ.

## ೩. ಸಮಾಜ ಸುಧಾರಕ—ರಾ. ಮೋಹನರಾಯ

ಭಾರತೀಯ ಸಾಮಾಜಿಕ ರೀತಿನೀತಿಗಳಲ್ಲಿ ತುಂಬ ಗ್ಲಾನಿಯಾದಾಗ ಅವತರಿಸಿದ ಮಹಾನುಭಾವನಿವನು. ಅತ್ಯಂತ ಮೇಧಾವಿ ಪ್ರಬಲ ಪ್ರತಿಭಟನೆಯನ್ನೀಯಬಲ್ಲ ವ್ಯಕ್ತಿತ್ವವುಳ್ಳವ. ಅಂತೇ ಆ ಕಾಲದ ಸಾಮಾಜಿಕ ಜೀವನದಲ್ಲಿಯ ಅನೇಕ ಅರ್ಥರಹಿತ ರೂಢಿಗಳಿಗೆ ಕೊಡಲಿ ಏಟನ್ನಿತ್ತು ಸುಧಾರಿಸಿದನು. ತನ್ನ ವ್ಯಕ್ತಿತ್ವದ ಪ್ರಭಾವದಿಂದ "ಬ್ರಹ್ಮೋ-ಸಮಾಜ"ವನ್ನು ಸ್ಥಾಪಿಸಿದನು.

೧೭೭೨ರಲ್ಲಿ ಬಂಗಾಲಪ್ರಾಂತದ ರಾಧಾನಗರದಲ್ಲಿ ಜನ್ಮಿಸಿದರು. ಸಂಸ್ಕೃತ, ಫಾರ್ಸಿ, ಅರಬ್ಬಿ ಭಾಷೆಗಳನ್ನು ಕಲಿತುಕೊಂಡದ್ದಲ್ಲದೆ ಪ್ರತಿಯೊಂದು ಧರ್ಮದ ಉದಾತ್ತ ತತ್ವಗಳನ್ನು ಅಭ್ಯಸಿಸಿದರು. ಸ್ತ್ರೀಯರ ಸುಧಾರಣೆಗಾಗಿಯೂ ಅವರ ಹಕ್ಕು ಬಾಧ್ಯತೆಗಳಿಗಾಗಿಯೂ ಮರಣ ಪರಿಯಂತರ ಹೋರಾಡಿದರು. ದೇಶವಿದೇಶಗಳಲ್ಲಿ ಪ್ರಚಾರಕಾರ್ಯ ಕೈಕೊಂಡರು. ಇವರು ಜನಜೀವನದಲ್ಲಿ ಮಾಡಿದ ಜಾಗ್ರತಿಯಿಂದ ಲಾರ್ಡ ಬೆಂಟಿಂಗನು ಸಹಗಮನ ಪದ್ಧತಿ ನಿಲ್ಲಿಸುವದಕ್ಕಾಗಿ ಕಾಯದೆ

ಮಾಡಲು ತುಂಬಾ ಸಹಾಯಕವಾಯಿತು. ಅಂದಿನ ಭಾರತೀಯ ಜೀವನದಲ್ಲಿ ನೂತನತೆಯನ್ನು ತಂದ ಶ್ರೇಯಸ್ಸು ರಾಜಾ ರಾಮಮೋಹನ ರಾಯರಿಗಿದೆ !

## ೪. ಸಾಂಸ್ಕೃತಿಕಶಕ್ತಿ—ವಿವೇಕಾನಂದ

ಭಾರತೀಯ ಸಂಸ್ಕೃತಿಯ ನಿಜವರ್ಚಸ್ಸನ್ನು ಜಗತ್ತಿಗೇ ತೋರಿದ ಮಹಾಪುರುಷನೆಂದರೆ ಸ್ವಾಮಿ ವಿವೇಕಾನಂದ. ಚಿಕ್ಕ ವಯಸ್ಸಿನಲ್ಲಿ ಅತ್ಯಂತ ನಾಸ್ತಿಕರಾಗಿದ್ದರು. ಆದರೆ ಶ್ರೀರಾಮಕೃಷ್ಣ ಪರಮಹಂಸರ ಆಶೀರ್ವಾದದಿಂದ ದೈವಭಕ್ತರಾದರಷ್ಟೇ ಅಲ್ಲ ಸಂಸಾರಿ ಯಾಗದೆ ಸನ್ಯಾಸಿ ಗಳಾದರು. ವಿವೇಕಾನಂದರ ವಾಕ್ಶಕ್ತಿ ಅಪ್ರತಿಮವಾದುದು. ಅವರ ಬುದ್ಧಿಮತ್ತೆ ಅಮೇರಿಕೆಯಂಥ ಜಡವಾದೀ ಜನತೆಯಲ್ಲಿ ಸಹ ಆಸ್ತಿ ಕತೆಯನ್ನು ಹುಟ್ಟಿಸಿತು. ವಿವೇಕಾನಂದರ ವೀರವಾಣಿಯಿಂದ ಎಚ್ಚತ್ತ ಅಮೇರಿಕೆ ಭಾರತದೆಡೆಗೆ ಸಹಾನುಭೂತಿಯಿಂದ ನೋಡತೊಡಗಿತು. ಅಮೇರಿಕೆಯಲ್ಲಿ ವಿವೇಕಾನಂದರಿಂದ ಸ್ಥಾಪಿಸಲ್ಪಟ್ಟ ಭಾರತೀಯ ಮಿಶ ನರಿಗಳು ಇಂದಿಗೂ ತಮ್ಮ ಕಾರ್ಯವನ್ನು ಸಾಗಿಸುತ್ತಿವೆ.

## ೫. ಮಹಾತಪಸ್ವಿನಿ—ಆ್ಯನಿಬೆಸಂಟ್

ಶ್ರೀಮತಿ ಆ್ಯನಿಬೆಸಂಟರು ಇಂಗ್ಲಂಡದಲ್ಲಿ ಜನ್ಮಿಸಿದರೂ ಭಾರತ ಏಳ್ಗೆಗಾಗಿ ತಪಸ್ಸನ್ನಾಚರಿಸಿದ ಮಹಿಳೆಯರು. ಇವರು ೧೮೪೭ರಲ್ಲಿ ಲಂಡನದಲ್ಲಿ ಜನಿಸಿದರು. ಫ್ರೆಂಚ್, ಜರ್ಮನ್ ಭಾಷೆಗಳನ್ನು ಕಲಿತು ಕೊಂಡರು.

ಇವರು ಭಾರತಕ್ಕೆ ಬಂದುದು ದಿವ್ಯಜ್ಞಾನ ಸಮಾಜದ (ಥಿಯಾ ಸಫಿ) ಚಳವಳಿಗಾಗಿ. ಇವರು ಭಾರತದದಲ್ಲಿ ಹಿಂದೂಧರ್ಮ ಅಭ್ಯಾಸಿಸಿ, ಅನೇಕ ಗ್ರಂಥಗಳನ್ನು ಬರೆದರು. ಇವರು ಕಾಶಿಯಲ್ಲಿ ಸ್ಥಾಪಿಸಿದ ಸೆಂಟ್ರಲ್ ಸ್ಕೂಲು ಮುಂದೆ ಮಾಲವೀಯರಿಂದ ಹಿಂದೂ ವಿಶ್ವವಿದ್ಯಾ ಲಯವಾಗಿ ಪರಿಣಮಿಸಿತು. ಇವರು ಒಂದು ಸಾಪ್ತಾಹಿಕವನ್ನೂ "ನ್ಯೂ ಇಂಡಿಯಾ" ಎಂಬ ದೈನಿಕವನ್ನೂ ಹೊರಡಿಸಿ ಭಾರತದಲ್ಲಿ

ತಮ್ಮ ವಿಚಾರಗಳನ್ನು ಹರಡಿದರು. ಇವರ "ಹೋಂ ರೂಲ" ಚಳುವಳಿಗೆ (೧೯೧೬) ರಾಷ್ಟ್ರವೇ ಓಗೊಟ್ಟಿತು. ಟಿಕಳರೂ ಬೆಂಬಲವಿತ್ತರು. ಸರಕಾರವು ದಬ್ಬಾಳಿಕೆಯನ್ನು ಆರಂಭಿಸಿ ಅವರ ಪತ್ರಿಕೆಗಳಿಗೆ ೩೦ ಸಾವಿರ ರೂಪಾಯಿ ಜಾಮೀನು ಕೇಳಿತು. ೧೯೧೭ರಲ್ಲಿ ಅವರನ್ನು ಬಂಧಿಸಿತು. ಇವರ ಬಂಧನದಿಂದ ರಾಷ್ಟ್ರವೇ ರೊಚ್ಚಿಗೆದ್ದಿತು. ಹೋಂ ರೂಲ ಚಳುವಳಿ ಪ್ರಚಲಿಸಿತು. ಪರದೇಶಿ ವಸ್ತುಗಳಿಗೆ ಬಹಿಷ್ಕಾರ ಪ್ರಾರಂಭವಾಯಿತು. ಬಿಡುಗಡೆಯ ನಂತರ ಎಲ್ಲೆಲ್ಲಿಯೂ ಸಂಭ್ರಮದ ಸ್ವಾಗತ ದೊರೆಯಿತು. ಇವರು ೧೯೧೭ರಲ್ಲಿ ಕಲಕತ್ತೆಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ಆ್ಯಸಿಬೆಸೆಂಟರು ಮಾಂಟಫರ್ಡ ಸುಧಾರಣೆಗಳನ್ನು ಸ್ವೀಕರಿಸಲು ಕಾಂಗ್ರೆಸ್ಸನ್ನು ಒತ್ತಾಯಪಡಿಸಿದರು. ಇದರಿಂದ ಜನತೆಯಲ್ಲಿ ಇವರ ಬಗೆಗಿದ್ದ ಆಸಕ್ತಿ ಕಡಿಮೆಯಾಯಿತು. ಆದರೂ ೧೯೨೭ರಲ್ಲಿ ಮತ್ತೆ ಕಾಂಗ್ರೆಸ್ಸು ಸೇರಿದರು. ಆದರೆ ಮುಂದೆ ವೃದ್ಧಾಪ್ಯದ ಮೂಲಕ ರಾಜಕಾರಣ ಬಿಟ್ಟುಗೊಟ್ಟು ಕೇವಲ ತಮ್ಮ ಥಿಯಸಫಿ ಸಮಾಜದ ಏಳ್ಗೆಗಾಗಿಯೇ ವೇಳೆಯನ್ನೆಲ್ಲ ವ್ಯಯಿಸತೊಡಗಿದರು. ೧೯೩೩ ರಲ್ಲಿ ಕ್ರಿಸ್ತವಾಸಿಗಳಾದರು.

## ೬. ಭಾರತ ರಾಷ್ಟ್ರೀಯ ಸಭೆಯ ಜನಕ—ಹ್ಯೂಮರ

ಇವರು ಹುಟ್ಟಿದ್ದು ಸ್ಕಾಟಲಂಡಿನಲ್ಲಿ ಐ. ಸಿ. ಎಸ್. ಅಧಿಕಾರಿಗಾಗಿ ಭಾರತಕ್ಕೆ ಬಂದು ಉಚ್ಚ ಅಧಿಕಾರಿಗಳಾಗಿ ಕೆಲಸ ಮಾಡಿದರು. ಭಾರತೀಯರಿಗಾಗಿ ಇವರಲ್ಲಿ ತುಂಬಾ ಆತ್ಮೀಯತೆ. ಇವರು ಅತಿ ಉದಾರರೂ ಸ್ವತಂತ್ರವೃತ್ತಿಯುಳ್ಳವರೂ ಇದ್ದುದರಿಂದ ಎಲ್ಲರಲ್ಲಿಯೂ ಪ್ರೇಮವನ್ನು ಸಂಪಾದಿಸಿದರು. ಆದರೆ ಈ ಗುಣಗಳಿಗಾಗಿಯೇ ಕೊನೆಯ ಅವಧಿಯಲ್ಲಿ ಕೆಲಸದಿಂದ ಕಿತ್ತೊಗೆಯಲ್ಪಟ್ಟರು. ಅನೇಕ ಪತ್ರಿಕೆಗಳು ಇದನ್ನು ಖಂಡಿಸಿದವು. ಲೆಫ್ಟನಂಟ ಗವ್ಹರ್ನರರ ಪದವಿಯನ್ನು ಇವರು ನಿರಾಕರಿಸಿದರು. ೧೮೮೨ರಲ್ಲಿ ನಿವೃತ್ತರಾದ ಮೇಲೆ ೨೦ ಸಾವಿರ ಪೌಂಡುಗಳನ್ನು ವಸ್ತುಸಂಗ್ರಹಾಲಯಕ್ಕಾಗಿ ಮೀಸಲಿರಿಸಿದರು.

ಇವರು ಇಂಗ್ಲೆಂಡದಲ್ಲಿಯೂ ಭಾರತದಲ್ಲಿಯೂ ಭಾರತೀಯರ ಸಾಮಾಜಿಕ ವಿಷಯಗಳನ್ನು ಚರ್ಚಿಸಲು ವರುಷಕ್ಕೊಮ್ಮೆಯಾದರೂ

ಅವಕಾಶದೊರೆಯುವಂತೆ ಸಹಾಯವನ್ನೊದಗಿಸಿ ಕೊಡುತ್ತಿದ್ದರು. ಅಂತೇ ೧೮೮೫ರಲ್ಲಿ ಮುಂಬಯಿಯಲ್ಲಿ ಪ್ರಥಮ ಭಾರತೀಯ ರಾಷ್ಟ್ರೀಯ ಸಭೆ ನೆರವೇರಲು ಹ್ಯೂಮರು ಬಹು ಮಟ್ಟಿಗೆ ಕಾರಣರಾದರು! ಅಂದಿನ ಮೊಳಕೆ ಬೆಳೆದು ಇಂದು ಮಹಾವೃಕ್ಷವಾಗಿ ಪರಿಣಮಿಸಿದೆ.

## ೭. ವಜ್ರಮುಷ್ಟಿ—ವಲ್ಲಭಭಾಯಿ

ಸರದಾರ ಪಟೇಲರು ನಿಜವಾಗಿಯೂ ಸರದಾರರು. ಬಾಪೂಜಿಯ ಬಲಗೈಯೆಂದು ಇವರ ಖ್ಯಾತಿ ಅತುಲವಾದ ಸಂಘಟನಾಸಾಮರ್ಥ್ಯವಿದ್ದವರಲ್ಲದೆ ಹಿಡಿದ ಕೆಲಸಗಳನ್ನು ಹಟದಿಂದ ಸಾಧಿಸುವರು.

೧೮೫೭ನೇ ಸ್ವಾತಂತ್ರ್ಯಸಮರದಲ್ಲಿ ಭಾಗವಹಿಸಿದ ಒಂದು ರೈತ ಕುಟುಂಬದಲ್ಲಿ ಇವರು ೧೮೭೫ರಲ್ಲಿ ಜನಿಸಿದರು. ಬಾಲ್ಯದಲ್ಲಿ ಇವರು ತುಂಬಾ ತುಂಟರಾಗಿದ್ದರು.

ವಕೀಲಿ ಪರೀಕ್ಷೆ ಪಾಸಾದ ಬಳಿಕ ಆ ವೃತ್ತಿಯನ್ನು ಕೈಕೊಂಡು ಇವರು ಹೆಸರಾದ ಕ್ರಿಮಿನಲ್ ವಕೀಲರೆಂದು ಪ್ರಸಿದ್ಧಿಯನ್ನು ಪಡೆದರು. ಕೋರ್ಟಿನಲ್ಲಿ ವಾದಿಸುತ್ತಿರುವಾಗ ಪತ್ನಿಯ ಮರಣದ ತಂತಿ ಬಂದರೂ ಖಿನ್ನರಾಗದೆ ಹಾಗೆಯೇ ವಾದವನ್ನು ಮುಂದುವರಿಸಿದ ದೃಢಮನಸ್ಕರು. ಬ್ಯಾರಿಸ್ಟರರಾಗಿ ಅಹಮ್ಮದಾಬಾದದಲ್ಲಿ ವಾಸಿಸತೊಡಗಿದರು.

ಬಾಪೂಜಿಯವರ ಚಂಪಾರಣ್ಯ ವಿಜಯವೇ ಸರದಾರರ ಮನಸ್ಸನ್ನು ಬಾಪೂಜಿಯವರತ್ತ ಆಕರ್ಷಿಸಲ್ಪಟ್ಟಿತು. ೧೯೧೭-೧೮ರಲ್ಲಿ ಬಾಪೂಜಿಯವರು ಖೇಡಾ ಜಿಲ್ಲೆಯಲ್ಲಿ ಹೂಡಿದ ಅಸಹಕಾರ ಚಳುವಳಿಗೆ ಸರದಾರರು ತುಂಬಾ ನೆರವಿತ್ತರು. ಮುಂದೆ ಸರದಾರರು ಗುಜರಾಥದ ನಾಯಕತ್ವವನ್ನು ವಹಿಸಿದರು. ಇವರು ೧೯೨೩ರಲ್ಲಿ ನಡೆದ ಧ್ವಜ ಸತ್ಯಾಗ್ರಹದಲ್ಲಿ ಸರಕಾರದವರನ್ನು ಶರಣು ಬರುವಂತೆ ಮಾಡಿದರು. ೧೯೨೮ರಲ್ಲಿ ಬಾರ್ಡೋಲಿ ಕರನಿರಾಕರಣೆ ಚಳುವಳಿಯಲ್ಲಿ ರೈತರನ್ನು ಸಂಘಟಿಸಿ ಸತ್ಯಾಗ್ರಹವನ್ನು ಯಶಸ್ವಿಗೊಳಿಸಿ ಭಾರತಕ್ಕೇ ಸರದಾರರಾದರು. ೧೯೩೦-೩೧ರಲ್ಲಿ ಸೆರೆಮನೆವಾಸವನ್ನು ಅನುಭವಿಸಬೇಕಾಯಿತು. ಕಾಂಗ್ರೆಸ್ಸಿನ ಪಾರ್ಲಮೆಂಟರಿ ಬೋರ್ಡಿನ ಅಧ್ಯಕ್ಷರಾಗಿ ಕಾಂಗ್ರೆಸ ಮಂತ್ರಿಗಳಲ್ಲಿ ಮುಂದಾಳುಗಳಲ್ಲಿ ಭಯಗೌರವವನ್ನು ಕಾಯ್ದುಕೊಂಡರು.

೧೯೪೨ರ ಚಳುವಳಿಯಲ್ಲಿ ಕಾರಾವಾಸ ಕಂಡರೂ ಹೊರಬಂದೊಡನೆ "ಏಶಿಯಾ ಬಿಟ್ಟು ತೊಲಗಿರಿ!" ಎಂದು ಗರ್ಜಿಸಿದರು. ಅವರ ೭೫ನೇ ಜನ್ಮದಿನೋತ್ಸವವು ಮುಂಬಯಿಯಲ್ಲಿ ಬಹು ವಿಜೃಂಭಣೆಯಿಂದ ನೆರವೇರಿತು. ಇದೀಗ ಅವರು ಕೇಂದ್ರ ಸರಕಾರದ ಉಪಮುಖ್ಯ ಮಂತ್ರಿಗಳಿದ್ದು ಅವರ ಕಡೆಗೆ ಸಂಸ್ಥಾನ ಶಾಖೆಯಿದೆ. ಸ್ವಾತಂತ್ರ್ಯದ ಎರಡು ವರುಷಗಳಲ್ಲಿಯೇ ಸಂಸ್ಥಾನಗಳನ್ನೆಲ್ಲ ನಾಮಶೇಷಗೊಳಿಸಿದರು. ಭಾರತದ ಐಕ್ಯವನ್ನು ಏಕಮುಖತ್ವವನ್ನೂ ಸಾಧಿಸಿದರು! ಅಂತೇ ಇವರು ವಜ್ರಮುಷ್ಟಿಯುಳ್ಳವರೆಂದು ಹೆಸರಾಗಿದ್ದಾರೆ!!!

## ೮. ಜಗನ್ಮೋಹಕ— ಜವಾಹರಲಾಲರು

ಭಾರತ ಮತ್ತು ಇಡಿಯ ಭೂಖಂಡದಲ್ಲಿ ಇವರಷ್ಟು ಪ್ರಭಾವ ಬೀರಿದ ವ್ಯಕ್ತಿ ಮತ್ತೊಂದಿಲ್ಲ. ಮೊನ್ನೆಯ ಅಮೇರಿಕೆಯ ಸಂಚಾರದಲ್ಲಿ ಇವರಿಗೆ ದೊರೆತ ಗೌರವಾದರಗಳು ಜಗತ್ತಿನ ಯಾವದೇ ಮುಖಂಡನಿಗೆ ದೊರೆತಿಲ್ಲ. ಇವರ ಪ್ರಭಾವ ಪೂರ್ಣ ಭಾಷಣಗಳು ಭಾರತದ ಕೀರ್ತಿ ದಿಗ್ದೆಸೆಗೆ ಹರಡಲು ಪ್ರಚೋದನೆಯನ್ನಿತ್ತಿವೆ. ಅಂತೇ ಬಾಪೂಜಿಯವರ ಉತ್ತರಾಧಿಕಾರಿಯಸ್ಥಾನ ಇಂದು ಅವರಿಗೆ ದೊರೆತಿದೆ.

ಇವರು ೧೮೮೯ರಲ್ಲಿ ಜನ್ಮಿಸಿದರು. ಶ್ರೀಮಂತಿಕೆಯಲ್ಲಿಯೇ ಬೆಳೆದರು. ಇವರ ಶಿಕ್ಷಣವೆಲ್ಲ ವಿದೇಶದಲ್ಲಾಯಿತು. ಬ್ಯಾರಿಸ್ಟರ ಪದವಿ ಗಳಿಸಿದರು. ಆ್ಯನಿಬೆಸಂಟರ ಹೋಂ ರೂಲ ಚಳುವಳಿಯ ಕಾಲಕ್ಕೆ ಇವರು ರಾಜಕೀಯ ರಂಗದಲ್ಲಿ ಕಾಲಿಟ್ಟರು. ೧೯೨೧-೨೨ರ ಚಳುವಳಿಯಲ್ಲಿ ಕೈದು ಮಾಡಲ್ಪಟ್ಟರು. ಬಿಡುಗಡೆಯಾದ ಬಳಿಕ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಗಳಾಗಿ ಆ ಸಂಸ್ಥೆಯನ್ನು ವ್ಯವಸ್ಥಿತಗೊಳಿಸಿದರು. ೧೯೨೭ರಲ್ಲಿ ಹಿಂದುಸ್ತಾನೀ ಸೇವಾದಲದ ಅಧ್ಯಕ್ಷರಾದರು. ಅದೇ ವರ್ಷ "ಸಂಪೂರ್ಣ ಸ್ವಾತಂತ್ರ್ಯವೇ ಭಾರತದ ಗುರಿ!" ಎಂದು ಮಹಾಸಭೆಯಲ್ಲಿ ಗೊತ್ತುವಳಿ ಸ್ವೀಕರಿಸಲ್ಪಡಲು ಇವರೇ ಕಾರಣರು. ೧೯೩೮-೩೯ರಲ್ಲಿ ಫ್ರಾನ್ಸ, ಬೆಲ್ಜಿಯಂ, ಜರ್ಮನಿ, ಸ್ಪೇನ, ಚೀನಗಳಿಗೆ ಹೋಗಿ ಭೆಟ್ಟಿ ಕೊಟ್ಟು ಭಾರತದ ಬಗ್ಗೆ ಪ್ರಚಾರ ಕಾರ್ಯ ಸಾಗಿಸಿದರು. ೧೯೪೨ರ ಮುಂಬಯಿ-ಸಭೆಯಲ್ಲಿ "ಬ್ರಿಟಿಶರೇ, ಭಾರತದಿಂದ ತೊಲಗಿರಿ!" ಎಂದು

ರಣಕಹಳೆಯೂದಿ ಸಮಸ್ತ ಭಾರತವನ್ನು ಕ್ರಾಂತಿಗೆ ಹುರಿದುಂಬಿಸಿದರು. ಸರಕಾರ ಅವರನ್ನು ಬಂಧಿಸಿ ಅಹಮ್ಮದನಗರ ಸೆರೆಮನೆಯಲ್ಲಿಟ್ಟಿತು. ೧೯೪೫ ರಲ್ಲಿ ಬಿಡುಗಡೆಯಾಗಿ ೧೯೪೬ ರಲ್ಲಿ ನಡುಗಾಲ ಸರಕಾರದ ಮುಖ್ಯ ಮಂತ್ರಿಗಳಾದರು. ಈಗ ಸ್ವತಂತ್ರ ಭಾರತ ಪ್ರಜಾರಾಜ್ಯದ ಮುಖ್ಯ ಮಂತ್ರಿಗಳಾಗಿ ಪರದೇಶದ ಖಾತೆಯನ್ನು ನೋಡಿಕೊಳ್ಳುತ್ತಿರುವರು.

ಅವರ ಮಾರ್ಗದರ್ಶನ ಭಾರತಕ್ಕೆ ಎಷ್ಟಾದರೂ ಬೇಕು.

## ೯. ಬಾಪೂಜಿಯ ಪಟ್ಟಶಿಷ್ಯ—ರಾಜೇಂದ್ರಪ್ರಸಾದ

ತತ್ವತಃ ಬಾಪೂಜಿಯವರನ್ನು ಅನುಸರಿಸುವಲ್ಲಿ ಇವರನ್ನು ಬಿಟ್ಟರೆ ಭಾರತದಲ್ಲಿ ಇನ್ನೊಬ್ಬರಿಲ್ಲ. ರಾಜೇಂದ್ರರು ೧೮೮೪ ರಲ್ಲಿ ಬಿಹಾರದ ಜಿರಾಯಿದೇಯಿ ಎಂಬ ಊರಲ್ಲಿ ಹುಟ್ಟಿದರು. ತಮ್ಮ ಚುರುಕು ಬುದ್ಧಿ ಮತ್ತೆಯಿಂದ ಪ್ರತಿಯೊಂದು ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮ ರಾಗಿ ಉತ್ತೀರ್ಣರಾದರು. ಇವರು ವಕೀಲಿ ವೃತ್ತಿಯಿಂದ ಹಣಗಳಿಸಿದರೂ ಅದರಲ್ಲಿಯ ಬಹುಭಾಗ ಸಾರ್ವಜನಿಕರ ಸೇವೆಗಾಗಿ ತೆಗೆದಿಡುತ್ತಿದ್ದರು.

ನೀಲಿ ತೋಟಗಳ ಕೂಲಿಯಾಳುಗಳ ಕಷ್ಟನಿವಾರಣೆಗಾಗಿ ಬಾಪೂಜಿ ಯವರು ಚಂಪಾರಣ್ಯಕ್ಕೆ ಹೋದಾಗ, ರಾಜೇಂದ್ರರಿಗೆ ಅವರೊಡನೆ ಪರಿ ಚಯವಾಯಿತು. ಬಾಪೂಜಿಯವರನ್ನು ಬಂಧಿಸಿದ ಸರಕಾರ ದೇಶಕ್ಷೋಭೆ ಯನ್ನ ಸಂಲಕ್ಷಿಸಿ ಅವರನ್ನು ಬಿಟ್ಟುಗೊಟ್ಟಿತು. ಇಷ್ಟೇ ಅಲ್ಲ ವಿಚಾರಣಾ ಸಮಿತಿ ನೇಮಿಸಿ ಅದರಲ್ಲಿ ಬಾಪೂಜಿಯವರನ್ನು ಸದಸ್ಯರನ್ನಾಗಿ ಮಾಡಿತು. ಆಗ ರಾಜೇಂದ್ರರು ವಕೀಲಿ ವೃತ್ತಿಯನ್ನು ಅಲಕ್ಷಿಸಿಯಾದರೂ ೭೦೦ ಸಾಕ್ಷಿ ಗಳನ್ನು ಸಂಗ್ರಹಿಸಿಕೊಟ್ಟರು. ಬಡಕೂಲಿಗಳ ಸ್ಥಿತಿ ಸುಧಾರಿಸಿತು.

ಬಿಹಾರ ವಿದ್ಯಾಪೀಠವೆಂಬ ರಾಷ್ಟ್ರೀಯ ವಿಶ್ವವಿದ್ಯಾಲಯ ಸ್ಥಾಪಿಸಿ ದರು. ಪ್ರಮುಖ ಕಾರ್ಯಕರ್ತರೆಲ್ಲ ಇಲ್ಲಿಯೇ ಉದಯಿಸಿದರು ಕಲಕತ್ತೆಯ ಅಧಿವೇಶನಕ್ಕೆ ಸ್ವಯಂಸೇವಕರಾಗಿ ಹೋದರೂ ೨೮ ವರುಷಗಳಾದ ಬಳಿಕ ಆ ಮಹಾಸಂಸ್ಥೆಗೆ ಅಧ್ಯಕ್ಷರಾದರು. ಹತ್ತುವರುಷ ಎ.ಆಯ್.ಸಿ.ಸಿ. ಯ ಸದಸ್ಯರಾಗಿದ್ದರು.

ಬಿಹಾರದಲ್ಲಿ ಭೂಕಂಪವಾದಾಗ ರಾಜೇಂದ್ರರು ಸಲ್ಲಿಸಿದ ಸೇವೆ ಅವರ್ಣನೀಯವಾದುದು. ಅವರು ಆ ಕಾಲಕ್ಕೆ ಸೆರೆಮನೆಯಲ್ಲಿದ್ದರು.

ಗಳ ತಿಂಗಳ ಕಾರವಾಸದಿಂದ ಅವರ ಪ್ರಕೃತಿ ಕ್ಷೀಣವಾಗಿತ್ತು. ವೈದ್ಯರ ಸಲಹೆಯ ಮೇರೆಗೆ ಇವರನ್ನು ಹೊರಗೆ ಬಿಟ್ಟ ಕೂಡಲೇ ತಮ್ಮ ಪ್ರಕೃತಿ ಯತ್ತ ಮನಗೊಡದೆ ಸಂತ್ರಸ್ತರ ಸೇವೆಗಾಗಿ ಧಾವಿಸಿದರು. ೨೯ ಲಕ್ಷ ರೂ. ನಿಧಿ ಕೂಡಿಸಿ ಪರಿಹಾರ ಕಾರ್ಯವನ್ನು ವ್ಯವಸ್ಥಿತವಾಗಿ ಸಾಗಿಸಿದರು.

೧೯೪೬ರಲ್ಲಿ ಕಾಂಗ್ರೆಸ ಮಂತ್ರಿಮಂಡಳ ಪ್ರವೇಶಿಸಿ ಆಹಾರ ಖಾತೆ ಯನ್ನು ಸ್ವೀಕರಿಸಿದರು. ಇವರು ಎಳು ಭಾಷೆಗಳನ್ನು ಬಲ್ಲರು.

## ೧೦. ಅಪ್ರತಿಮ ಯೋಧ—ಸುಭಾಸಚಂದ್ರ

ಅಪ್ರತಿಮ ಸಾಹಸ, ತ್ಯಾಗ, ಪರಾಕ್ರಮ, ದಕ್ಷತೆಗಳಿಂದ ತುಂಬಿ ತುಳುಕುವ ಸುಭಾಸಚಂದ್ರರ ಜೀವನವು ತುಂಬಾ ಕ್ರಾಂತಿಕಾರಕ ವಾದುದು. ದೇಶವಿಗಳಲ್ಲಿ .ಸ್ವತಂತ್ರ ಭಾರತ ಸರಕಾರದ ಜನಕರು ! ಆಜಾದ ಪಡೆಯ ನಿರ್ಮಾಪಕರು !!!

೧೮೯೭ರಲ್ಲಿ ಕೊಡಾಲಿಯಾ ಎಂಬಲ್ಲಿ ಜನಿಸಿದರು. ಎಂಟೂ ಜನ ಸುಭಾಸ ಬಂಧುಗಳು ಹೆಸರುವಾಸಿಯಾಗಿದ್ದಾರೆ. ಸ್ವಾಮಿ ವಿವೇಕಾನಂದ ಮೊದಲಾದ ಸತ್ಪುರುಷರ ಸಾಹಿತ್ಯವನ್ನೋದಿ ೧೯೧೪ರಲ್ಲಿ ಬುದ್ಧಸಂತಿ ಮನೆ ಬಿಟ್ಟು ಹಿಮಾಲಯಕ್ಕೆ ಓಡಿದರು. ಆದರೆ ಅಲ್ಲಿ ಬೆಳಕು ದೊರೆಯ ದಂತಾಗಲು ಮತ್ತೆ ಮನೆಗೆ ಮರಳಿದರು. ಬಿ. ಎ. ಪಾಸಾಗಿ ಇಂಗ್ಲೆಂಡಕ್ಕೆ ತೆರಳಿ ೧೯೧೯ರಲ್ಲಿ ಐ. ಸಿ. ಎಸ್ ಪರೀಕ್ಷೆ ಪಾಸಾಗಿ ಭಾರತಕ್ಕೆ ಮರಳಿ ದರು. ಭಾರತದಲ್ಲಿಯ ನವಚೈತನ್ಯ ಕಂಡು ಚಳುವಳಿಯಲ್ಲಿ ಧುಮುಕಿ ದರು.

ಬಂಗಾಲದಲ್ಲಿ ಚಿತ್ತರಂಜನದಾಸರ ಜೊತೆಯಾಗಿ ಕೆಲಸ ಮಾಡಿ ದರು. ಕಲಕತ್ತೆಯ ರಾಷ್ಟ್ರೀಯ ಮಹಾವಿದ್ಯಾಲಯದ ಆಚಾರ್ಯ ರಾದರು ! "ಫಾರ್ವರ್ಡ" ಎಂಬ ದಿನಪತ್ರಿಕೆಯನ್ನು ಹೊರಡಿಸುತ್ತಿದರು. ೧೯೨೫ರಲ್ಲಿ ದಾಸರು ನಿಧನವಾದ ಬಳಿಕ ಆ ಸ್ಥಳವು ಸುಭಾಸರಿಗೆ ದೊರೆ ಯಿತು. ಆ ಮುಂದೆ ತಮ್ಮದೇ ಆದ ರೀತಿಯಲ್ಲಿ ಮುನ್ನಡೆದರು. ೧೯೩೮ ರಲ್ಲಿ ಕಾಂಗ್ರೆಸ ಅಧ್ಯಕ್ಷರಾದುದಲ್ಲದೆ ಮರುವರುಷವೂ ಸಹ ಬಾಪೂಜಿ ಯವರ ವಿರೋಧವನ್ನು ಸಹ ಲೆಕ್ಕಿಸದೆ ವಿಜಯಿಗಳಾದರು, ಆದರೆ ಕೆಲ ದಿನಗಳಲ್ಲಿ ಮತಭೇದದ ಮೂಲಕ ತಮ್ಮ ಸ್ಥಳಕ್ಕೆ ರಾಜೀನಾಮೆಯನ್ನೀ

ಯಬೇಕಾಯಿತು. ಆನಂತರ "ಫಾರ್ವರ್ಡ ಬ್ಲಾಕ್" ಎಂಬ ನವೀನ ಸಂಸ್ಥೆಯನ್ನು ಸ್ಥಾಪಿಸಿದರು.

ಮುಂದೆ ಕಾಂಗ್ರೆಸ್ಸು ವೈಯಕ್ತಿಕ ಸತ್ಯಾಗ್ರಹ ಹೂಡಿದಾಗ, ಮನೆಯಲ್ಲಿಯೇ ಸ್ಥಾನಬದ್ಧರಾಗಿದ್ದ ಸುಭಾಸರು ಒಮ್ಮಿಂದೊಮ್ಮೆ ಮಾಯವಾದರು. ಸರಕಾರದ ಕಣ್ಣಿಗೆ ಮಣ್ಣೆರಚಿದರು. ಸುಭಾಸರು ಮುಸಲ್ಮಾನರ ವೇಷದಿಂದ ಪೇಶಾವರಕ್ಕೆ ಹೋಗಿ ಅಲ್ಲಿಂದ ಗಡಿದಾಟಿ ಆಫಗಾಣಿಸ್ತಾನಕ್ಕೆ ತಲುಪಿ ಮುಂದೆ ವಿಮಾನದಿಂದ ಜರ್ಮನಿಗೆ ಮುಟ್ಟಿದರು. ಅಲ್ಲಿಯ ಆಕಾಶವಾಣಿಯಲ್ಲಿ ಮೇಲಿಂದ ಮೇಲೆ ಇವರ ಕಾರ್ಯಕ್ರಮಗಳಿರುತ್ತಿದ್ದವು. ಅಲ್ಲಿಂದ ಜಪಾನಕ್ಕೆ ಹೋಗಿ ಜಪಾನ ಸರಕಾರದ ಸಹಾಯದಿಂದ ಅಲ್ಲಿದ್ದ ಹಿಂದೀಯರನ್ನು ಸಂಘಟಿಸಿ ೧೯೪೩ರಲ್ಲಿ ಆಜಾದ ಹಿಂದ ಸರಕಾರ ಸ್ಥಾಪಿಸಿದರು. "ಸುಭಾಸ ಸೇನೆ" ಎಂಬ ಯೋಧಪಟುಗಳ ಪಡೆಯೊಂದನ್ನು ನಿರ್ಮಿಸಿದರು. ಆ ಪಡೆ ಭಾರತದ ಗಡಿಯಲ್ಲಿರುವ ಮಣಿಪುರದ ವರೆಗೂ ಬಂದಿತ್ತು.

ಆದರೆ ೧೯೪೫ರಲ್ಲಿ ವಿಮಾನ ಅಪಘಾತದಿಂದ ಅವರು ದಿವಂಗತರಾದರೆಂದು ಸುದ್ದಿಯೊಂದು ಹರಡಿತು. ಇದೇ ರೀತಿ ಹಿಂದೊಮ್ಮೆ ಇಂಥ ವಿಷ ಸುದ್ದಿ ಹರಡಿ ಸುಳ್ಳಾಗಿತ್ತು. ಆದ್ದರಿಂದ ಈ ಸಲವೂ ಹಾಗಾಗಬಹುದೆ?



# ೭. ಅನುಬಂಧಗಳು



## [ಅ] ಮಹತ್ವದ ಸಂಗತಿಗಳ ಕಾಲಕ್ರಮವು

**ಕ್ರಿಸ್ತಶಕಕ್ಕಿಂತ ಮೊದಲು**

ಅಜ್ಞಾತಕಾಲ:— ಆರ್ಯರ ಆಗಮನ

,, ದ್ರಾವಿಡರ ದಕ್ಷಿಣ ದೇಶದ ಪ್ರವೇಶ

,, ವರ್ಣಾಶ್ರಮಗಳ ವ್ಯವಸ್ಥೆ

,, ಪುರಾಣಗಳ ರಚನೆ

ಕ್ರಿ. ಶ. ದ ಮೊದಲು:—

೫೬೭ನೇ ವರ್ಷ ಗೌತಮನ ಜನನ

೪೪೭ ,, ಬುದ್ಧನ ಮರಣ

೫೪೯ ,, ಮಹಾವೀರನ ಜನನ

೪೭೬ ,, ಮಹಾವೀರನ ಮರಣ

೩೫೫ ,, ಶಿಕಂದರನ ಜನನ

೩೨೨ ,, ಶಿಕಂದರನ ಮರಣ

೨೮೦ ,, ಚಂದ್ರಗುಪ್ತನ ಮರಣ

೨೭೨ನೇ ವರ್ಷ ಬಿಂಬಿಸಾರನ ಮರಣ

೨೩೨ ,, ಅಶೋಕನ ಮರಣ

**ಕ್ರಿ. ಶಕದ ನಂತರ**

೧ನೇ ಶತಮಾನ ಕನಿಷ್ಕನ ಆಳಿಕೆ

ಇ. ಸ. ೩೨೦ ಗುಪ್ತರ ಆಳಿಕೆ ಆರಂಭ

,, ೪೮೮ ಗುಪ್ತರ ಆಳಿಕೆ ಮುಕ್ತಾಯ

,, ೩೭೫ ಸಮುದ್ರಗುಪ್ತನ ಮರಣ

,, ೫೩೩ }<br>೫೮೩ } ವಿಕ್ರಮಾದಿತ್ಯನ ಆಳಿಕೆ

,, ೬೦೬ }<br>,, ೬೪೭ } ಹರ್ಷನ ಆಳಿಕೆ

,, ೭೮ ಶಾಲಿವಾಹನ ಶಕಾರಂಭ

,, ೧೧೬೦ ಬಸವೇಶ್ವರನಕಾಲ

,, ೭ನೇ ಶತಕ ಕುಮಾರಿಲ ಭಟ್ಟನ ಕಾಲ

,, ೭೮೮ ಶಂಕರಾಚಾರ್ಯರ ಜನ್ಮ

ಇ. ಸ. ೫೭೦ ಪೈಗಂಬರನ ಜನನ
,, ೬೨೨ ಹಿಜರಿ ಆರಂಭ
,, ೧೦೨೪ ಗ. ಮಹಮ್ಮದನ ದಾಳಿ
,, ೧೧೯೩ ಪೃಥ್ವಿರಾಜನ ಮರಣ
,, ೧೨೯೪ ಅಲ್ಲಾವುದ್ದೀನನ ದೇವಗಿರಿ ಮುತ್ತಿಗೆ
,, ೧೩೩೬ ವಿಜಯನಗರ ರಾಜ್ಯ ಉದಯ
,, ೧೩೪೭ ಬಾಹಮನಿ ,,
,, ೧೩೯೮ ತಿಮೂರನದಾಳಿ
,, ೧೫೨೬ }
,, ೧೫೫೬ } ಪಾಣಿಪತ್ತ ಕಾಳಗಗಳು
,, ೧೭೬೧ }
,, ೧೬೦೦ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ
,, ೧೬೦೫ ಅಕಬರನ ಮರಣ
,, ೧೬೨೦ ಅಂಬೋಯನಾ ಕೊಲೆ
,, ೧೬೨೭ ಶಿವಾಜಿಯ ಜನನ
,, ೧೬೮೬ ವಿಜಾಪುರ ರಾಜ್ಯದ ಕೊನೆ
,, ೧೬೮೭ ಗೋವಳ-ಕೊಂಡ ,,
,, ೧೬೮೯ ಸಂಭಾಜಿಯ ವಧೆ

ಇ. ಸ. ೧೭೦೦ ರಾಜಾರಾಮನ ಮರಣ
,, ೧೭೧೪ ಬಾಳಾಜಿ ವಿಶ್ವ-ನಾಥ ಪೇಶವೆ ಪದಪ್ರಾಪ್ತಿ
,, ೧೭೦೭ ಔರಂಗಜೇಬನ ಮರಣ
,, ೧೭೩೮ ಭೋಪಾಳದ ಯುದ್ಧ
,, ೧೭೩೯ ನಾದಿರಶಹನ ದಾಳಿ
,, ೧೭೪೦ ೧ನೇ ಬಾಜೀ-ರಾಯನ ಮರಣ
,, ೧೭೪೮ ಶಾಹು, ನಿಜಾ-ಮರ ಮರಣ
,, ೧೭೪೯ ಅಂಬೂರ ಯುದ್ಧ
,, ೧೭೫೧ ಅರ್ಕಾಟ ಮುತ್ತಿಗೆ
,, ೧೭೫೬ ಕಲಕತ್ತೆಯ ಕತ್ತಲೆ ಕೋಣೆ
,, ೧೭೫೭ ಪ್ಲಾಸಿ ಕಾಳಗ
,, ೧೭೬೦ ಉದಗಿರಿ ,,
,, ೧೭೭೩ ನಾರಾಯಣ ರಾಯನ ಕೊಲೆ
,, ೧೭೭೩ ರೆಗ್ಯುಲೇಟಿಂಗ ಆಕ್ಟ್
,, ೧೭೮೪ ಪಿಟ್ಟನ ಕಾಯ್ದೆ
,, ೧೭೯೪ ಮಹದಾಜಿ ಸಿಂಧೆನ ಮರಣ

ಕ್ರಿ. ಶ. ೧೭೯೫ ಖರ್ಡೆಯ ಕಾಳಗ
,, ೧೮೦೨ ವಸಯಿಯ ಒಪ್ಪಂದ
,, ೧೮೦೬ ವೆಲ್ಲೂರ ದಂಗೆ
,, ೧೮೧೮ ಪೇಶವಾಯಿ ಮುಕ್ತಾಯ
,, ೧೮೩೯ ರಣಜಿತಸಿಂಗನ ಮರಣ
,, ೧೮೪೮ ಸಾತಾರೆಯ ರಾಜ್ಯ ಮುಕ್ತಾಯ
,, ೧೮೫೭ ಸ್ವಾತಂತ್ರ್ಯದ ಯುದ್ಧ
,, ೧೮೮೫ ರಾಷ್ಟ್ರೀಯ ಸಭೆ ಸ್ಥಾಪನೆ
,, ೧೯೦೧ ವಿಕ್ಟೋರಿಯಾಳ ಮರಣ
,, ೧೯೦೯ ಮೋರ್ಲೆ–ಮಿಂಟೋ ಸುಧಾರಣೆ
,, ೧೯೧೦ ೭ನೇ ಎಡ್ವರ್ಡರ ಮರಣ
,, ೧೯೧೧ ೫ನೇ ಜಾರ್ಜನ ರಾಜ್ಯಾರೋಹಣ
,, ೧೯೧೪ ಯುರೋಪದ ಮೊದಲನೆ ಮಹಾಯುದ್ಧ
,, ೧೯೧೯ ಮಾಂಟ–ಫರ್ಡ ಸುಧಾರಣೆ
,, ೧೯೨೧ ಯುವರಾಜ ವಿ. ಆ. ನ ಆಗಮನ

ಕ್ರಿ. ಶ. ೧೯೨೬ ಪ್ರಥಮ ಒಕ್ಕಲತನ ಪ್ರದರ್ಶನ
,, ೧೯೩೪ ಬಿಹಾರ ಭೂಕಂಪ
,, ೧೯೩೫ ಕ್ವೆಟ್ಟಾದ ಭೂಕಂಪ
,, ೧೯೩೬ ೫ನೇ ಜಾರ್ಜನ ಮರಣ
,, ೧೯೩೭ ಹೊಸ ಕೌನ್ಸಿಲುಗಳ ಉತ್ಪತ್ತಿ
,, ೧೯೩೯ ಯುರೋಪದ ೨ನೇ ಮಹಾಯುದ್ಧ ಆರಂಭ
,, ೧೯೪೦ }
,, ೧೯೪೧ } ವೈಯಕ್ತಿಕ ಸತ್ಯಾಗ್ರಹ
,, ೧೯೪೨ ಭಾರತೀಯರ ಸ್ವಾತಂತ್ರ್ಯ ಸಂಗ್ರಾಮ
,, ೧೯೪೫ ೨ನೆಯ ಮಹಾಯುದ್ಧದ ಮುಕ್ತಾಯ
,, ೧೯೪೭ ಹಿಂದುಸ್ಥಾನದ ವಿಚ್ಛೇದ
,, ೧೯೪೭ ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತಿ
,, ೧೯೪೭ ಮಹಾತ್ಮಾಜಿಯವರ ಉಪವಾಸ

ಇ.ಸ. ೧೯೪೮ ಮಹಾತ್ಮಾಜಿಯ ಮರಣ
,, ೧೯೪೮ ಸಂಸ್ಥಾನಗಳ ವಿಲೀನೀಕರಣ

ಇ.ಸ. ೧೯೪೯ ನೆಹರೂರವರ ಅಮೇರಿಕೆ ಸಂಚಾರ

# [ಬ] ಪಾರತಂತ್ರ್ಯದಿಂದ ಸ್ವಾತಂತ್ರ್ಯದ ವರೆಗೆ....

೧೪೯೮ ಕಾಲಿಕತ್ತಿಗೆ ವಾಸ್ಕೋಡಿ ಗಾಮಾನ ಆಗಮನ.
೧೫೧೦ ಗೋವೆಯು ಪೋರ್ತುಗೀಜರ ಆಧೀನವಾಯಿತು.
೧೬೦೦ ಆಂಗ್ಲರ ಈಸ್ಟ ಇಂಡಿಯ ಕಂಪನಿ ಸ್ಥಾಪನೆ.
೧೬೦೨ ಡಚ್ಚರ ಈಸ್ಟ ಇಂಡಿಯ ಕಂಪನಿ ಸ್ಥಾಪನೆ.
೧೬೦೪ ಫ್ರೆಂಚ ಈಸ್ಟ ಇಂಡಿಯ ಕಂಪನಿ ಸ್ಥಾಪನೆ.
೧೬೬೧ ಮುಂಬಯಿ ಬಂದರ ಆಂಗ್ಲರಿಗೆ ಪೋರ್ತುಗೀಜರಿಂದ ದೊರಕಿಯಿತು.
೧೬೯೦ ಆಂಗ್ಲರಿಂದ ಕಲಕತ್ತೆಯ ಸ್ಥಾಪನೆ.
೧೭೫೭ ಪ್ಲಾಸಿಯ ಯುದ್ಧವಾಗಿ ಆಂಗ್ಲ ಆಧಿಪತ್ಯ ಸ್ಥಾಪಿತ.
೧೭೬೦ ವಾಂಡಿವಾಸ ಯುದ್ಧದಲ್ಲಿ ಫ್ರೆಂಚರಿಗೆ ಸೋಲು.
೧೭೬೧ ಪಾಣಿಪತ್ತದ ಯುದ್ಧ, ಮರಾಠರ ಆಳಿಕೆಗೆ ಇಳಿಗಾಲ.
೧೭೬೫ ಈ. ಇಂ. ಕಂಪನಿಗೆ ಬಂಗಾಲದ ದಿವಾಣಗಿರಿ ದೊರೆಯಿತು.
೧೭೭೩ ರೆಗ್ಯೂಲೇಟಿಂಗ ಆ್ಯಕ್ಟ.
೧೭೭೪ ವಾ. ಹೆಸ್ಟಿಂಗ್ಸ ಮೊದಲನೆಯ ಗವ್ಹರ್ನರ್ ಜನರಲ್ ಆದನು.
೧೭೮೦ “ ಹಿಕೀಸ ಗೆಜೆಟ್ ” ಆಂಗ್ಲ ಪತ್ರ ಹಾಗೂ ಫೋರ್ಟ ವಿಲಿಯಂ ಕಾಲೇಜ ಪ್ರಾರಂಭವಾದವು.
೧೭೮೪ ಪಿಟ್ಟನ ಇಂಡಿಯಾ ಬಿಲ್ಲು.
೧೭೯೪ ಕಾಯಂ ಕುಳದ ಪದ್ಧತಿ ಬಂಗಾಲದಲ್ಲಿ ಪ್ರಾರಂಭ.
೧೭೯೯ ಟೀಪುವಿನ ಸೋಲು, ಮರಣ.
೧೮೦೯ ರಣಜಿತಸಿಂಗ ಹಾಗೂ ಆಂಗ್ಲರಲ್ಲಿ ಅಮೃತಸರದ ಒಪ್ಪಂದ.
೧೮೧೩ ಆಂಗ್ಲ ವ್ಯಾಪಾರಿಗಳಿಗೆ ಭಾರತದಲ್ಲಿ ವ್ಯಾಪಾರ ಮಾಡಲು ಅಧಿಕಾರ ದೊರೆಯಿತು.

೧೮೧೪-೧೬ ನೇಪಾಳದಗೂಡ ಕಾಳಗ.

೧೮೨೪-೨೬ ಬ್ರಹ್ಮದೇಶದೊಡನೆ ಮೊದಲನೆಯ ಕಾಳಗ.

೧೮೨೭ ಭಾರತೀಯರು ಪಂಚರಾಗಲು ಅರ್ಹತೆ ದೊರೆಯಿತು.

೧೮೨೮ ಬ್ರಹ್ಮೋ ಸಮಾಜದ ಸ್ಥಾಪನೆ.

೧೮೨೯ ಸಹಗಮನ ಪದ್ಧತಿ ನಿಲ್ಲಿಸಲ್ಪಟ್ಟಿತು..

೧೮೩೨ ಮೆಕಾಲೆ ವರದಿಯ ಪ್ರಕಾರ ಭಾರತೀಯರಿಗೆ ಆಂಗ್ಲ ಶಿಕ್ಷಣ ಪ್ರಾರಂಭ.

೧೮೩೩ ಈ. ಇಂ. ಕಂಪನಿ ವ್ಯಾಪಾರವನ್ನು ಬಿಟ್ಟುಗೊಟ್ಟು ರಾಜ್ಯವಾಡಳಿತೆಯನ್ನು ಗುರಿಯಾಗಿಟ್ಟು ಕೊಂಡಿತು;

೧೮೩೯ ರಣಜಿತಸಿಂಗನ ಮರಣ.

೧೮೪೫-೪೬ ಸೀಖರ ಮೊದಲನೆಯ ಕಾಳಗ.

೧೮೪೯ ಪಂಜಾಬವು ಆಂಗ್ಲರ ಆಧೀನವಾಯಿತು

೧೮೫೨ ಬ್ರಹ್ಮದೇಶದ ಎರಡನೆಯ ಕಾಳಗ.

೧೮೫೩ ಭಾರತದಲ್ಲಿ ಉಗಿಬಂಡಿಗಳು ಪ್ರಾರಂಭವಾದವು.

೧೮೫೪ ಭಾರತದಲ್ಲಿ ತಂತಿ ಕಚೇರಿ ಪ್ರಾರಂಭ.

೧೮೫೭-೫೮ ಭಾರತೀಯರ ಪ್ರಥಮ ಸ್ವಾತಂತ್ರ್ಯ ಸಮರ.

೧೮೫೮ ಕಂಪನಿ ಸರಕಾರದ ಕೊನೆ. ವಿಕ್ಟೋರಿಯಳ ಜಾಹೀರನಾಮೆ

೧೮೬೨ ಆಂಗ್ಲ ಪಾರ್ಲಿಮೆಂಟಿನಲ್ಲಿ ಇಂಡಿಯನ್ ಸಿವ್ಹಿಲ್ ಸರ್ವೀಸ, ಇಂಡಿಯನ್ ಹೈಕೋರ್ಟ, ಇಂಡಿಯನ್ ಕೌನ್ಸಿಲುಗಳ ಬಗ್ಗೆ ಕಾಯದೆಗಳ ಸ್ವೀಕಾರ.

೧೮೭೭ ವಿಕ್ಟೋರಿಯಾಳು ಭಾರತದ ಚಕ್ರವರ್ತಿನಿ ಎಂದು ಬಿರುದು ಸ್ವೀಕರಿಸಿದುದು.

೧೮೮೫ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆ.

೧೯೦೧ ಸರಹದ್ದ ಪ್ರಾಂತ ನಿರ್ಮಾಣವಾಯಿತು.

೧೯೦೫ ಬಂಗಾಲವನ್ನು ವಿಭಾಗಿಸಲಾಯಿತು.

೧೯೦೬ ಕಲಕತ್ತೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಸಭೆಯಲ್ಲಿ ಸ್ವರಾಜ್ಯವೇ ಕಾಂಗ್ರೆಸ್ಸಿನ ಧ್ಯೇಯವೆಂದು ಘೋಷಿಸಲಾಯಿತು.

೧೯೦೬ ಆಗಾಖಾನ ಸಾಹೇಬರು ಪ್ರತ್ಯೇಕ ಮತದಾರರ ಸಂಘದ ಬೇಡಿಕೆಯನ್ನು ಸಾಧಿಸಿಕೊಂಡರು.

೧೯೦೭ ಸುರತ ಸಭೆ ಕಾಂಗ್ರೆಸ್ಸಿನಲ್ಲಿ ಒಡಕು.

೧೯೦೮ ಕ್ರಾಂತಿಕಾರನಾದ ಖುದಿರಾಮನಿಗೆ ಗಲ್ಲು ಶಿಕ್ಷೆ.

೧೯೦೯ ಮೋರ್ಲೆ-ಮಿಂಟೋ ಸುಧಾರಣೆಗಳು.

೧೯೧೧ ಕಲಕತ್ತೆಯಿಂದ ದಿಲ್ಲಿಗೆ ಭಾರತದ ರಾಜಧಾನಿಯ ಸ್ಥಳಾಂತರ. ಬಂಗಾಲ ವಿಭಜನೆ ರದ್ದುಗೊಳಿಸಲ್ಪಟ್ಟಿತು.

೧೯೧೪-೧೯ ಮೊದಲನೆಯ ಜಾಗತಿಕ ಯುದ್ಧ.

೧೯೧೬ ಲಖನೌ ಒಪ್ಪಂದ. ಹೋಂ ರೂಲ ಸಂಘದ ಸ್ಥಾಪನೆ.

೧೯೧೭ ಭಾರತಕ್ಕೆ ಹೊಣೆಗಾರ ಸರಕಾರ ಕೊಡಲಾಗುವದೆಂದು ಭಾರತ ಮಂತ್ರಿಯ ಹೇಳಿಕೆ.

೧೯೧೮ ಮಾಂಟ-ಫರ್ಡ ಸುಧಾರಣೆ.

೧೯೧೯ ರೌಲಟ್ ಕಾಯದೆ, ಜಾಲಿಯನವಾಲಾಬಾಗ ಹತ್ಯಾಕಾಂಡ.

೧೯೨೦ ಬಾಪೂಜಿಯವರಿಂದ ಅಸಹಕಾರ ಚಳುವಳಿ ಪ್ರಾರಂಭ, ಟಿಳಕರ ನಿಧನ.

೧೯೨೧ ಮಲಬಾರದ ಮಾಪಳೆಯರ ಬಂಡು, ಕಾಂಗ್ರೆಸ್ಸಿನಲ್ಲಿ ೪ ಆಣೆ ಸದಸ್ಯತ್ವದ ಆರಂಭ.

೧೯೨೨ ಚೌರಿಚೌರಾ ದುರಂತ, ಬಾಪೂಜಿಯವರ ಕೈಸೆರೆ, ೬ ವರುಷ ಶಿಕ್ಷೆ, ಚಳುವಳಿಯು ಸ್ಥಗಿತವಾಯಿತು.

೧೯೨೩ ಉಪ್ಪಿನ ಕರಾಕರಣೆ, ಬ್ರಹ್ಮದೇಶ ಪ್ರತ್ಯೇಕ ಪ್ರಾಂತವಾಯಿತು.

೧೯೨೪ ಸ್ವರಾಜ್ಯ ಪಕ್ಷದವರು ವಿಧಿಮಂಡಲವನ್ನು ಪ್ರವೇಶಿಸಿದರು.

೧೯೨೮ ಸಾಯಮನ ಕಮೀಶನ್ನಿನ ಆಗಮನ, ಬಹಿಷ್ಕಾರ. ಬಾರ್ಡೋಡಿಯಲ್ಲಿ ಕರನಿರಾಕರಣೆ ಯಶಸ್ವಿಯಾದುದು.

೧೯೨೯ ಲಾಹೋರ ಕಾಂಗ್ರೆಸ ಸಭೆ, ಸಂಪೂರ್ಣ ಸ್ವಾತಂತ್ರ್ಯವೇ ಗುರಿ ಎಂದು ನಿರ್ಣಯಿಸಲಾಯಿತು. ಜನವರಿ ೨೬ನೇ ದಿನಾಂಕನ್ನು ಸ್ವಾತಂತ್ರ್ಯದಿನವೆಂದು ಗೊತ್ತುಪಡಿಸಿತು.

೧೯೩೦ ಸವಿನಯ ಕಾಯದೆ ಭಂಗ, ಬಾಪೂಜಿಯವರ ದಂಡಯಾತ್ರೆ, ಬಂಧನ, ನವಂಬರದಲ್ಲಿ ದುಂಡುಮೇಜು ಪರಿಷತ್ತಿನ ಪ್ರಾರಂಭ.

೧೯೩೧ ಭಗತಸಿಂಗ ಮತ್ತು ಸಂಗಡಿಗರಿಗೆ ಗಲ್ಲು, ಬಾಪೂಜಿ-ಇರ್ವಿನ್ ಒಪ್ಪಂದ, ಬಾಪೂಜಿಯವರ ಭಾರತದ ಏಕಮೇವ ಪ್ರತಿನಿಧಿಯಾಗಿ ೨ನೆಯ ದುಂಡುಮೇಜು ಪರಿಷತ್ತಿಗೆ ಹೋದುದು.

೧೯೩೨ ಪುನಃ ಚಳುವಳಿ ಪ್ರಾರಂಭ, ಬಾಪೂಜಿಯು ಕೈದು, ಜಾತೀಯ ನಿರ್ಣಯಕ್ಕಾಗಿ ಉಪವಾಸ, ಪರಿಣಾಮ: ಯರವಡಾ ಒಪ್ಪಂದ.

೧೯೩೫ ಭಾರತ ಸರಕಾರದ ಕಾಯದೆ, ಘೋಷಣೆ, ಸಿಂಧ-ಓರಿಸಾ ಪ್ರತ್ಯೇಕ ಪ್ರಾಂತವಾದುದು.

೧೯೩೭ ಪ್ರಾಂತಿಕ ಚುನಾವಣೆಗಳಲ್ಲಿ ಕಾಂಗ್ರೆಸ್ಸು ಭಾಗವಹಿಸಿ ೭ಳು ಪ್ರಾಂತಗಳಲ್ಲಿ ರಾಜ್ಯಭಾರ ಸಾಗಿಸಿತು.

೧೯೩೯ ದ್ವಿತೀಯ ಜಾಗತಿಕ ಯುದ್ಧ ಪ್ರಾರಂಭ. ಅದರಲ್ಲಿ ಭಾರತದ ಸೇರ್ಪಡೆಗಾಗಿ ಕಾಂಗ್ರೆಸ್ಸು ಅಧಿಕಾರ ತ್ಯಾಗ ಮಾಡಿತು.

೧೯೪೦ ಸಂಪೂರ್ಣ ಸ್ವಾತಂತ್ರ್ಯ ಹಾಗೂ ರಾಷ್ಟ್ರೀಯ ಸರಕಾರಗಳ ಬೇಡಿಕೆಯನ್ನು ಕಾಂಗ್ರೆಸ್ಸು ಮಂಡಿಸಿತು. ಪಾಕಿಸ್ತಾನ ಬೇಕೆಂದು ಮುಸ್ಲಿಂಲೀಗು ನಿರ್ಣಯಿಸಿತು.

೧೯೪೦-೪೧ ವೈಯಕ್ತಿ ಸತ್ಯಾಗ್ರಹ.

೧೯೪೨ ಕ್ರಿಪ್ಸ ಕೊಡುಗೆ ಕಾಂಗ್ರೆಸ್ಸು ಹಾಗೂ ಲೀಗುಗಳಿಂದ ತಿರಸ್ಕರಿಸಲ್ಪಟ್ಟಿತು. ಮುಂಬಯಿ ಕಾಂ. ಸಭೆಯಲ್ಲಿ ಚಲೇಜಾವ ಗೊತ್ತುವಳಿ ಸ್ವೀಕಾರ, ಮುಂದಾಳುಗಳ ಬಂಧನ. ಭಾರತಾದ್ಯಂತ ಕ್ರಾಂತಿ ಪ್ರಾರಂಭ.

೧೯೪೩ ಸುಭಾಸ ಸೈನ್ಯದ ಪ್ರಾರಂಭ.

೧೯೪೪ ಬಾಪೂಜಿ-ಜಿನ್ನಾರ ಮಾತುಕತೆ ಮುಗಿದುವು.

೧೯೪೫ ವಾವೆಲ್ ಯೋಜನೆ ವಿಫಲವಾಯಿತು.

೧೯೪೬ ನಡುಗಾಲ ಸರಕಾರ ಸ್ಥಾಪನೆ. ನವಖಾಲಿ, ತಿಪ್ಪೇರಾಗಳಲ್ಲಿ ದುರಂತ.

೧೯೪೭ ಸ್ವತಂತ್ರ ಭಾರತ-ಪಾಕಿಸ್ತಾನಗಳ ಸ್ಥಾಪನೆ.

## [ಕ] ಇತಿಹಾಸದ ಹೊಸ ಪದ್ಧತಿಯ ಪ್ರಶ್ನೆಗಳು

**ಪ್ರಶ್ನೆ:—ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಜಾಗೆಯಲ್ಲಿ ಯೋಗ್ಯ ಪುರುಷರ ಹೆಸರುಗಳನ್ನು ಬರೆಯಿರಿ.**

೧. ಬ್ರಿಟಿಶ ಭಾರತದ ನಿಜವಾದ ವಿಸ್ತಾರವು........ನಿಂದ ಆಯಿತು.

೨. ಸೀಖ ಸಂಸ್ಥಾನಗಳ ಏಕೀಕರಣವನ್ನು........ನು ಮಾಡಿದನು.

೩. ಭಾರತವಲ್ಲಿ ಇಂಗ್ಲಿಷ ಶಾಲೆಗಳು............ಎಂಬ ವಿದ್ವಾಂಸನ ಪ್ರಯತ್ನದಿಂದ ಸ್ಥಾಪಿತವಾದವು.

೪. ........ಇವನು ಭಾರತದ ಮೊದಲನೆಯ ವ್ಹಾಯಿಸರಾಯನು.

೫. ಲಾರ್ಡ............ಕಾಲದಲ್ಲಿ ಭಾರತದಲ್ಲಿ ರಾಷ್ಟ್ರೀಯ ಸಭೆಯು ಸ್ಥಾಪಿತವಾಯಿತು.

೬. ವಂಗಭಂಗವು............ನಿಂದ ಆಯಿತು.

೭. ಸ್ಥಾನಿಕ ಸ್ವರಾಜ್ಯದ ಕಾಯುದೆಯು................ನಿಂದ ಪಾಸು ಮಾಡಲ್ಪಟ್ಟಿತು.

೮. ............ನ ಕಾಲದಲ್ಲಿ ಭಾರತಕ್ಕೆ ಸುಧಾರಣೆಯ ೧ನೇ ಕಂತು ದೊರೆಯಿತು.

೯. ಕಲಕತ್ತೆಯನ್ನು ಬಿಟ್ಟು ದಿಲ್ಲಿಯು ರಾಜಧಾನಿಯಾದುದೆಂದು ............ನು ಸಾರಿದನು.

೧೦. ............ಈಗ ಜ. ನ ಕಾಲದಲ್ಲಿ ೧೮೫೭ ರ ಸ್ವಾತಂತ್ರ್ಯದ ಯುದ್ಧದ ಹಲವು ಕಾರಣಗಳುಂಟಾದವು.

**ಉತ್ತರ:**— ತುಂಬತಕ್ಕ ಹೆಸರುಗಳು ಕ್ರಮವಾಗಿ—

೧. ಲಾರ್ಡ ಡಾಲಹೌಸಿ. ೨. ರಣಜಿತಸಿಂಗ. ೩. ಮೆಕಾಲೇ.
೪. ಲಾರ್ಡ ಕ್ಯಾನಿಂಗ. ೫. ಡಫರಿನ. ೬. ಲಾರ್ಡ ಕರ್ಝನ್.
೭. ರಿಪನ. ೮. ಲಾರ್ಡ ಚೇಮ್ಸಫರ್ಡ. ೯. ಲಾರ್ಡ ಹಾರ್ಡಿಂಜ.
೧೦. ಡಾಲಹೌಸಿ.

**ಪ್ರಶ್ನೆ:— ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಾನದಲ್ಲಿ ಯೋಗ್ಯ ಶಬ್ದ ಬರೆಯಿರಿ.**

೧. ............ಇವನು ಭಾರತದ ೧ನೇ ಗ. ಜನರಲ್ಲನು.
............ಇವನು ಭಾರತದ ೧ನೇ ವ್ಹಾಯಿಸರಾಯನು.

೨. ಸಿಪಾಯಿಯರ ಬಂಡು............ಯುದ್ಧವಾದ ಒಂದು ವರ್ಷ ಕ್ಕೊದಗಿತು.

೩. ........ಈ ಇಬ್ಬರು ರಾಜರು ಬೌದ್ಧ ಧರ್ಮದ ಪ್ರವರ್ತಕರು.

೪. ಬಂಗಾಲದಲ್ಲಿ ದುಹೇರಿ ಕಾರಭಾರವು....................ನಿಂದ ಸುರುವಾಯಿತು.

೫. ಮಹದಾಜಿ ಸಿಂಧೆನು ಶೂರನಿದ್ದಂತೆ........ಆಗಿದ್ದನು.
೬. ಅಕಬರನು........ಎಂಬ ಹೊಸ ಧರ್ಮ ಸ್ಥಾಪಿಸಿದನು.
೭. ಮೊಗಲ ಬಾದಶಹರಲ್ಲಿಯ........ನಿಂದ ವೈಭವವು ಶಿಖರವನ್ನು ಕಂಡಿತು.

ಉತ್ತರ:— ೧. ವಾರನ್ ಹೇಸ್ಟಿಂಗ್ಸ, ಲಾರ್ಡ ಕ್ಯಾನಿಂಗ.
೨. ಪಲಾಸಿ (ಪ್ಲಾಸಿ) ೫. ಮುತ್ಸದ್ದಿಯೂ
೩. ಅಶೋಕ ಮತ್ತು ಕನಿಷ್ಕ ೬. ದೀನೇಇಲಾಹಿ
೪. ಲಾರ್ಡ್ ಕ್ಲೈವ್ಹನಿಂದ ೭. ಶಹಾಜಹಾನ

ಪ್ರಶ್ನೆ:— ಕೆಳಗಿನ ಮಾತುಗಳು ಒಪ್ಪೋ-ತಪ್ಪೋ ಬರೆಯಿರಿ.

೧. ಶಹಾಜಹಾನನು ಸತ್ತಕೂಡಲೇ ಔರಂಗಜೇಬನು ಪಟ್ಟಕ್ಕೆ ಕುಳಿತನು.
೨. ವಾರನ್ ಹೇಸ್ಟಿಂಗ್ಸನು ಬಂಗಾಲದಲ್ಲಿ ಕಾಯಂ ಧಾರಾ ಪದ್ಧತಿಯನ್ನು ಬಳಕೆಯಲ್ಲಿ ತಂದನು.
೩. ದಕ್ಷಿಣ ಭಾರತಕ್ಕೆ ದಂಡೆತ್ತಿ ಬಂದ ಮುಸಲ್ಮಾನ ರಾಜನು ಅಲ್ಲಾವುದ್ದೀನ ಖಿಲಜಿಯು.
೪. ಬಾಜೀರಾಯನು ನಾನಾ ಫಡನೀಸನ ಇಚ್ಛೆಯ ವಿರುದ್ಧ ಇಂಗ್ರೆಜರೊಡನೆ ವಸಯಿ ಒಪ್ಪಂದ ಮಾಡಿಕೊಂಡನು.
೫. ಅಶೋಕನು ಚಂದ್ರಗುಪ್ತನ ಮೊಮ್ಮಗನು.
೬. ಪ್ಲಾಸಿಯಲ್ಲಿ ಬಂಗಾಲ ನವಾಬನನ್ನು ಸೋಲಿಸಿದನು.
೭. ಶಾಹುರಾಜನು ಸಾಯುವ ಮೊದಲು ಕಾರಭಾರವನ್ನು ೧ನೇ ಬಾಜೀರಾಯನಿಗೊಪ್ಪಿಸಿದನು-

ತಪ್ಪು:— ೧, ೨, ೪. ಒಪ್ಪು:— ಉಳಿದವು.

ಪ್ರಶ್ನೆ:— (ಅ) ಗಿಜನಿಯ ಮಹಮ್ಮದನು ಉದಾರನಾಗಿದ್ದನು.
(ಬ) ನಾನಾ ಫಡನೀಸನು ಬಹು ಶೂರನೂ, ಧೋರಣವುಳ್ಳವನೂ ಆಗಿದ್ದನು.
(ಕ) ಲಾರ್ಡ ಡಾಲಹೌಸಿಯ ಆಳಿಕೆಯು ಬಹು ಮಹತ್ವದ್ದಾಗಿತ್ತು. ಟಿಪ್ಪಣಿ ಬರೆ.

**ಉತ್ತರ:—**

೧. ಈ ಮಾತು ಅಸತ್ಯವು. ಯಾಕಂದರೆ ಇವನು ಬಹು ಧನ ಲೋಭಿಯಾಗಿದ್ದನೆಂಬದು ಅವನು ಭಾರತದ ಮೇಲೆ ದ್ರವ್ಯ ದಾಶೆಯಿಂದ ಮಾಡಿದ ದಾಳಿಗಳೇ ಅವನ ಜೀನತನವನ್ನು ಪ್ರಕಟಿಸುತ್ತದೆ. ಅಲ್ಲದೆ ಅವನು ದಾಳಿಗಳಿಂದ ಅಗಣಿತ ಸಂಪತ್ತನ್ನು ಕೂಡು ಹಾಕಿ ಪ್ರಾಣಬಿಡುವ ಸಮಯದಲ್ಲಿ ಈ ಸಂಪತ್ತಿನ ವಿಯೋಗವಾಗುವದೆಂದು ಅಳಹತ್ತಿದನಂತೆ. ಇದರಿಂದಲೂ ಫಿರ್ದೂಸಿಯೆಂಬ ಅವನ ಆಸ್ಥಾನದ ಕವಿಗೆ ಅವನು ಮಾಡಿದ ಕಾವ್ಯವನ್ನು ತಾನು ಹೊಗಳಿದರೂ ಅವನಿಗೆ ಏನೊಂದು ದ್ರವ್ಯವನ್ನು ಕೊಡಲಿಲ್ಲವೆಂಬದರದಿಂದಲೂ ಇವನ ಕೃಪಣತನವು ಕಂಡು ಬರುವದಲ್ಲದೆ ಉದಾರತ್ವವನ್ನು ಪ್ರಕಟಿಸುವದಿಲ್ಲ.

೨. ಈ ಮಾತಿನಂತೆ ನಾನಾ ಫಡನೀಸನಲ್ಲಿ ಧೋರಣಮಾತ್ರವಿತ್ತು. ಆದರೆ ಶೌರ್ಯವು ಅವನಲ್ಲಿರಲಿಲ್ಲ. ಸವಾಯಿ ಮಾಧವರಾಯನ ಪೇಶವೆಗಿರಿಯನ್ನು ತನ್ನ ಧೋರಣದಿಂದ ಬಹಳ ಉತ್ತಮವಾಗಿ ಸಾಗಿಸಿದನು. ಆದರೆ ಅವನು ಯಾವದೊಂದು ಯುದ್ಧವನ್ನು ಮಾಡಿ ಜಯಾಪಜಯಗಳನ್ನು ಹೊಂದಿದ ಉಲ್ಲೇಖನವು ಇತಿಹಾಸದಲ್ಲಿ ಕಂಡು ಬರುವದಿಲ್ಲ. ಇದರಿಂದ ಅವನು ಶೂರನಿದ್ದಿಲ್ಲ.

೩. ಈ ಮಾತು ಸತ್ಯವಿದೆ. ಇವನು ಅನೇಕ ಸಂಸ್ಥಾನಗಳನ್ನು ಮುರಿದು ಇಂಗ್ಲಿಷರ ರಾಜ್ಯಕ್ಕೆ ಕೂಡಿಸಿದನು. ಇವನ ಆಳಿಕೆಯಲ್ಲಿ ಉಗಿಬಂಡಿ ತಾರಾಯಂತ್ರ ಮೊದಲಾದ ಸುಧಾರಣೆಗಳಾದವು. ಮತ್ತು ಕಾರಭಾರದ ಹಲವು ಖಾತೆಗಳನ್ನು ಸುಧಾರಿಸಿದನು.

**ಪ್ರಶ್ನೆ:— ಮುಂದೆ ಹೇಳಿದ ಪ್ರಸಿದ್ಧ ವ್ಯಕ್ತಿಗಳು ಜೀವಿಸಿದ ಕಾಲ ಆ ವ್ಯಕ್ತಿಗಳ ಹೆಸರನ್ನು ಹೊಂದಿಸಿ ಬರೆಯಿರಿ.**

| ಅಶೋಕ, | ನಾನಕ, | ಬುದ್ಧ, | ಶಂಕರಾಚಾರ್ಯ, | ರಾಮದಾಸ |
|---|---|---|---|---|
| ೨ | ೫ | ೧ | ೪ | ೬ |

ರಣಜಿತಸಿಂಗ, ಮಹಮ್ಮದ ಪೈಗಂಬರ, ಅಕಬರ, ಕ್ರಿಸ್ತ,
೯ ೩ ೬ ೮

ಲಕ್ಷ್ಮೀಬಾಯಿ ಝಾಂಸಿ.
೧೦

**ಉತ್ತರ:—** ಅಂಕಾನುಕ್ರಮದಿಂದ ತೋರಿಸಿದೆ.

**ಪ್ರಶ್ನೆ:— ಮುಂದೆ ಹೇಳಿದ ಐತಿಹಾಸಿಕ ಪ್ರಸಂಗಗಳನ್ನು ಕಾಲ ಮಾನದಿಂದ ಕ್ರಮಗೊಳಿಸಿರಿ.**

ತಿಮೂರನ ದಾಳಿ, ಸ್ಥಾನೇಶ್ವರದ ಯುದ್ಧ, ಸಿಕಂದರನ ಸ್ವಾರಿ,
೩ ೨ ೧

ಡಾಗಾಮನ ಆಗಮನ, ಈ. ಇ. ಕಂಪನಿ ಸ್ಥಾಪನೆ,
೪ ೫

ಶಿವರಾಯನ ರಾಜ್ಯಾಭಿಷೇಕ, ಪಲಾಸಿಕಾಳಗ, ಸಿಂಧದ ಖಾಲಸಾತು
೬ ೭ ೮

ರಾಣಿಯ ಜಾಹೀರನಾಮೆ ವಂಗಭಂಗ.
೯ ೧೦

**ಉತ್ತರ:—** ಅಂಕಾನುಕ್ರಮದಿಂದ.

**ಪ್ರಶ್ನೆ:— ಕೆಳಗೆ ಕೆಲವು ಇಸವಿಗಳನ್ನೂ ಆ ವರ್ಷದಲ್ಲಿ ನಡೆದ ಸಂಗತಿಯನ್ನೂ ಚಲ್ಲಾಪಿಲ್ಲಿಯಾಗಿ ಬರೆದದೆ. ಅವುಗಳನ್ನು ಕ್ರಮಗೊಳಿಸಿ ಬರೆಯಿರಿ.**

೧೭೭೩, ೧೭೫೧, ೧೯೦೧, ೧೮೪೯, ೧೬೧೨, ೧೭೩೯, ೧೨೦೬, ೧೬೮೯, ೧೮೨೯, ೧೭೯೯.

**ಉತ್ತರ:—** ಸಂಗತಿಗಳ ಕೆಳಗೆ—

ಸಹಗಮನ ನಿಲ್ಲಿಸಿದ್ದು, ನಾದಿರನ ದಾಳಿ, ಅರ್ಕಾಟ ಮುತ್ತಿಗೆ, ಟಿ
೧೮೨೯ ೧೭೩೯ ೧೭೫೧

ಟೀಪೂನ ಮರಣ, ನಾರಾಯಣರಾವ ಖೂನ,
೧೭೯೯ ೧೭೭೩

ಪಂಜಾಬದ ಖಾಲಸಾತು, ವ್ಹಿಕ್ಟೋರಿಯಾಳ ಮರಣ,
೧೮೪೯ ೧೯೦೧

ಈ. ಇ. ಕಂಪನಿ ಸುರತಕ್ಕೆ ಬಂದದ್ದು, ಕುತುಬನ ಪಟ್ಟ.
೧೬೧೨ ೧೨೦೬

**ಪ್ರಶ್ನೆ:— ಕೆಳಗೆ ಬರೆದ ಗ್ರಂಥಗಳು ಯಾರಿಂದ ರಚಿತವಾದವು?**

೧. ರಾಮಾಯಣ, ೨. ಶಹನಾಮಾ, ೩. ಶಾಕುಂತಲ, ೪. ಐನೇ ಅಕಬರಿ, ೫. ವೇದಗಳು.

ಉತ್ತರ:— ೧. ರಾಮಾಯಣ ಕರ್ತನು ವಾಲ್ಮೀಕಿ.
೨. ಶಹನಾಮಾ ,, ಫಿರ್ದೂಸಿ.
೩. ಶಾಕುಂತಲ ,, ಕಾಲಿದಾಸ.
೪. ಐನೇ ಅಕಬರಿ ,, ಅಬುಲ್‌ಫಜಲ.
೫. ವೇದಗಳು ,, ಪ್ರಾಚೀನ ಋಷಿಗಳು.

**ಪ್ರಶ್ನೆ:— ಕೆಳಗಿನ ಪ್ರತಿಯೊಂದು ವಾಕ್ಯದಲ್ಲಿ ಅದರ ಮುಂದೆ ಕಂಸಿನಲ್ಲಿ ಕೊಟ್ಟ ಶಬ್ದಗಳಲ್ಲಿ ಅವಶ್ಯವಿರುವ ಶಬ್ದವನ್ನು ಸೇರಿಸಿ ಅರ್ಥವನ್ನು ಪೂರ್ಣಗೊಳಿಸಿರಿ.**

೧. ಔರಂಗಜೇಬನು ಶಿವಾಜಿಯ ಮೇಲೆ............ (ಅಫಝುಲಖಾನ, ಶಾಹಿಸ್ತೆಖಾನ, ಸಿದ್ಧಿಬೋಹಾರ) ಎಂಬ ಸರದಾರರನ್ನು ಕಳಿಸಿದನು.

೨. ಯುರೋಪದ (ಡಚ್ಚ, ಪೋರ್ತುಗೀಜ, ಇಂಗ್ಲಿಷ, ಫ್ರೆಂಚ) ............ರು ಮೊದಲು ಹಿಂದುಸ್ತಾನದಲ್ಲಿ ವ್ಯಾಪಾರಕ್ಕೆಂದು ಬಂದರು,

೩. ಸಿರಾಜಉದ್ದೌಲನ ತರುವಾಯ............ (ಮೀರಜಾಫರ, ಮೀರಕಾಸೀಮ) ನು ಬಂಗಾಲದ ನವಾಬನಾದನು.

೪. ಪೇಶ್ವಾಯಿಯು ಮುಳುಗಿದ ಕಾಲಕ್ಕೆ (ವಾರೆನ್ ಹೇಸ್ಟಿಂಗ್ಸ, ಲಾರ್ಡ ಹೇಸ್ಟಿಂಗ್ಸ, ವೆಲ್ಲಸ್ಲಿ) ಇವನು ಗವ್ಹರ್ನರ ಜನಲರನನಾಗಿದ್ದನು.

೫. ಅಕಬರನು ಔರಂಗಜೇಬನಗೆ (ಅಜ್ಜ, ಮುತ್ತಜ್ಜ) ನಾಗಬೇಕು.

೬. ಪಾಣಿಪತ್ತದ ಕೊನೆಯ ಯುದ್ಧದಲ್ಲಿ (ಮಲ್ಹಾರರಾವ ಹೋಳಕರ, ಜನಕೋಜಿ ಸಿಂಧೆ) ನು ಮರಣ ಹೊಂದಿದನು.

೭. ನಿಜಾಮಶಾಹೀ ರಾಜ್ಯವನ್ನು (ಅಕಬರ, ಶಹಾಜಹಾನ) ನು ಸಂಪೂರ್ಣ ಮುಳುಗಿದನು.

**ಉತ್ತರ:—** ಪ್ರಶ್ನೆದಲ್ಲಿ ಅವಶ್ಯವಿರುವ ಶಬ್ದಗಳ ಕೆಳಗೇ '————' ಹೀಗೆ ಗೆರೆ ಹೊಡೆದಿದೆ. ಆ ಶಬ್ದಗಳನ್ನು ಸೇರಿಸಿ ವಾಕ್ಯದ ಅರ್ಥ ಪೂರ್ಣ ಮಾಡಿಕೊಳ್ಳತಕ್ಕದ್ದು.

**ಪ್ರಶ್ನೆ:— ಕೆಳಗಿನ ಉದ್ಗಾರಗಳು ಯಾವ ಯಾವ ವ್ಯಕ್ತಿಗಳಿಂದ ಹೊರಟಿರುವವು ?**

ಅ. ನಾನು ಇಂಥ ಅಪಮಾನ ಸಹಿಸಲು ಇಲ್ಲಿ ಬಂದಿಲ್ಲ.

ಬ. ಬೊಡ್ಡೆಯನ್ನು ಕೆಡುವಿದರೆ ಟೊಂಗೆಗಳು ಕೆಳಗೆ ಬೀಳಲಿಕ್ಕೇ ಬೇಕು.

ಕ. ನೀವಿಬ್ಬರೂ ನನ್ನ ಎರಡೂ ಕೈಗಳಿದ್ದಂತೆ. ಕಾರಣ ನೀವಿ-ಬ್ಬರೂ ನನಗೆ ಅವಶ್ಯವು ಸರಿ.

ಡ. ಬಚೇಂಗೇ ತೋ ಔರ ಬೀ ಲಢೇಂಗೇ;

ಇ. ನಾನು ನಿನ್ನನ್ನು ಹೇಗೆ ನಡೆಯಿಸಿಕೊಳ್ಳಬೇಕು ?

ಫ. ಆಯುಷ್ಯದ ಇಳುಕಲಸಿಂದ ಜಾರುವ ಬಾದಶಹನು ಕೊನೆಗೆ ಜಾರಿಯೇ ಬಿದ್ದು ಮರಣ ಹೊಂದಿದನು.

**ಉತ್ತರ:—**

ಅ. ಶಿವಾಜಿಯಿಂದ. (ಔರಂಗಜೇಬನ ದರ್ಬಾರಿನಲ್ಲಿ)

ಬ. ಹಿರಿಯ ಬಾಜೀರಾಯನಿಂದ (ದಿಲ್ಲಿಯ ಮೇಲೆ ಸ್ವಾರೀ ಮಾಡುವ ವಿಚಾರದಿಂದ)

ಕ. ಸವಾಯಿ ಮಾಧವರಾಯನಿಂದ (ನಾನಾನನ್ನು ದೂರಮಾಡಿ ಕಾರಭಾರ ಮಾಡಬೇಕೆನ್ನುವ ಮಹಾದಾಜಿ ಸಿಂಧೆನ ಕೂಡ ನಡೆದ ಮಾತಿನ ಪ್ರಸಂಗದಲ್ಲಿ)

ಡ. ದತ್ತಾಜಿ ಸಿಂಧೆನಿಂದ(ಅಬದಾಲಿಯ ಸರದಾರನಿಗೆ ಹೇಳಿದ್ದು.) ದತ್ತಾಜಿಯು ಘಾಯ ಹೊಂದಿ ಬಿದ್ದಾಗ ಸರದಾರನು ಬಂದು ಪ್ರಶ್ನಿಸಿದಾಗ)

ಇ. ಸಿಕಂದರ (ಅಲೇಕ್ಝಾಂಡ್ರ) ರಿಂದ: (ಪೋರಸನೊಡನೆ ಯುದ್ಧಮಾಡಿ ಆತನನ್ನು ಸೆರೆಹಿಡಿದು ತಂದಾಗ ಅವನಿಗೆ ಕೇಳಿದನು)

ಫ. ಇತಿಹಾಸಕಾರನು ಬರಹದಿಂದ:— (ಹುಮಾಯೂನನು ಪಾವಟಿಗೆಯಿಳಿಯುವಾಗ ಜಾರಿಬಿದ್ದು ಸತ್ತನು. ಅದರವರ್ಣನೆ ಬರೆ

ಯುವಾಗ ಇತಿಹಾಸಕಾರನು ತನ್ನ ಬರೆಹದಲ್ಲಿ ತೆಗೆದ ಉಲ್ಲೇಖಿಸಿದ ಉದ್ಗಾರವು.

**ಪ್ರಶ್ನೆ:— ಕೆಳಗಿನ ವರ್ಣನೆಗಳು ಯಾರಬಗ್ಗೆ ಇರುವವು. ಅವರ ಹೆಸರು ಬರೆಯಿರಿ.**

ಆರ್ಯಪಂಡಿತ, ಮೈಸೂರಹುಲಿ, ಪಂಜಾಬದ ಸಿಂಹ, ರಾಘೋಭರಾರಿ, ಬಾರಾಭಾಯಿ.

**ಉತ್ತರ:**— ನಾನಾಫಡನವೀಸನು — ಆರ್ಯಪಂಡಿತನು.

ಟೀಪೂಸುಲ್ತಾನನು — ಮೈಸೂರಿನ ಹುಲಿಯು

ರಣಜಿತ ಸಿಂಹನು — ಪಂಜಾಬದ ಸಿಂಹನು

ನಾಫಡಣವೀಸ ಹರಿಪಂತ ಫಡಕೆ ಮೊದಲಾದವರು } ಬಾರಾಭಾಯಿ

ರಘುನಾಥ ಪೇಶವೆ — ರಾಘೋಭರಾರಿ.

**ಪ್ರಶ್ನೆ:— ಕೆಳಗಿನ ಕಟ್ಟಡ, ಗ್ರಂಥಗಳ ವಯಸ್ಸನ್ನು ಅಂದಾಜಿನಿಂದ ಬರೆಯಿರಿ.**

**ಉತ್ತರ:**— ಕೆಳಗೆ ಅಂಕಿ.

| ಕುತುಬ ಮಿನಾರ, | ತಾಜಮಹಾಲ, | ಅಶೋಕಸ್ತಂಭ, |
|---|---|---|
| ೭೩೫ ವ. | ೩೦೦ ವ. | ೨೧೭೦ ವ. |
| ವೇರೊಳಗವಿ, | ಗೋಲಗುಮುಟ | ಪಾಣಿನಿ ವ್ಯಾಕರಣ |
| ಇ. ಸ. ೧೦ ನೇಶ. | ೭೯೦ ವ. | ೨೨೦೦ ವ. |
| ಜ್ಞಾನೇಶ್ವರಿ ಗ್ರಂಥ, | | |
| ೬೫೬ ವ. | | |

**ಪ್ರಶ್ನೆ:— ಸರಂಜಾಮಿ ಪದ್ಧತಿಯೆಂದರೇನು ?**

**ಉತ್ತರ:**— ರಾಜ್ಯದ ಉತ್ಪನ್ನದಲ್ಲಿ ೧೦೦ಕ್ಕೆ ೩೪ರಂತೆ ಗಾದಿಯ ಮಾಲಕನಿಗೆ ಕೊಡತಕ್ಕದ್ದು ಉಳಿದದ್ದನ್ನು ಬೇರೆ ಬೇರೆ ಸರದಾರಜಹಾಗೀರರೆಗೆ ಕೊಡತಕ್ಕದ್ದು. ರಾಜನಿಗೆ ಬರತಕ್ಕ ಹಕ್ಕು ಬಾಬುಗಳನ್ನು ಪೇಶವೆ, ಪಂತಪ್ರತಿನಿಧಿ, ಪಂತಸಚಿವ, ಇವರು ವಸೂಲು ಮಾಡತಕ್ಕದ್ದು ಉಳಿದ ವಸೂಲು ಯಾರದಿರುವದೋ ಅವರೇ ವಸೂಲುಮಾಡಬೇಕು. ಇವರ ಹೊರತು ಪವಾರ, ದಾಭಾಡೇ, ಬೋಸಲೇ ಇವರಕಡೆಗೆ ಬೇರೆ ಬೇರೆ

ಜಹಾಗೀರುಗಳನ್ನೊಪ್ಪಿಸಿ ಅವರಿಂದ ಸ್ವರಾಜಕ್ಕೆ ಸಹಾಯ ಕೊಳ್ಳ ಬೇಕು. ಈ ಪದ್ಧತಿಗೆ ಸರಂಜಾಮಿ ಪದ್ಧತಿ, ಎಂಬ ಹೆಸರು.

**ಪ್ರಶ್ನೆ:— ರಾಷ್ಟ್ರೀಯ-ಕಾಂಗ್ರೆಸ್ಸಿನ ಇತಿಹಾಸವನ್ನು ಸಂಕ್ಷಿಪ್ತ ಬರೆಯಿರಿ.**

**ಉತ್ತರ:—** ಇತಿಹಾಸ:— ಈ ಸಂಸ್ಥೆಯ ಮೂಲ ಉತ್ಪಾದಕನು ಆಲನ ಆಕ್ಟೇವ್ಹಿಯಮ್ ಹ್ಯೂಮನೆಂಬವನು. ಅವನಿಂದ ಈ ಸಂಸ್ಥೆಯು ಮುಂಬೈಯಲ್ಲಿ ತಾರೀಖು ೨೮-೧೨-೧೮೮೫ನೇ ದಿವಸ ಸ್ಥಾಪಿತ ವಾಯಿತು. ಈ ಸಂಸ್ಥೆಯ-ಮೊದಲನೇ ಅಧ್ಯಕ್ಷನು ಉಮೇಶ ಚಂದ್ರ ಬ್ಯಾನರ್ಜಿ ಎಂಬ ಬಂಗಾಲಿಯು ಸನ್ ೧೮೮೫ ರಿಂದ ೧೮೮೮ ರ ವರೆಗಿನ ಈ ಕಾಂಗ್ರೆಸದ ಠರಾವುಗಳು ಉಪಯೋಗ ವಾಗಲಿಲ್ಲ. ಮುಂದೆ ರಾಷ್ಟ್ರೀಯಸಭೆಗೆ ಸರಕಾರದ ಪ್ರತ್ಯಕ್ಷ ವಿರೋಧ ತೋರಹತ್ತಿತು. ಇ. ಸ. ೧೯೦೬ ರಲ್ಲಿ ದಾದಾಭಾಯಿ ನವರೋಜಿ, ಇವರ ಅಧ್ಯಕ್ಷತೆಯಲ್ಲಿ ಈಸಭೆಯು ಕಲಕತ್ತೆಯಲ್ಲಿ ನೆರೆಯಿತು. ೧೯೦೭ರಲ್ಲಿ ಕಾಂಗ್ರೆಸ ಪುಢಾರಿಗಳಲ್ಲಿ ಇಬ್ಬಣಗಳಾದವು. ಅವುಗಳಲ್ಲಿ ಒಂದು ಟಿಳಕ ಪಕ್ಷ ಎರಡು ಫಿರೋಜಶಹಾ ಮೇಹತಾನ ಪಕ್ಷ ಎಂಬ ಹೆಸರು. ಆ ಕಾಲಕ್ಕೆ ಕ್ರಾಂತಿಕಾರರ ಉದಯವಾಯಿತು. ೧೯೦೮ರಲ್ಲಿ ಲೋ. ಟಿಳಕರಿಗೆ ೬ ತಿಂಗಳ ಶಿಕ್ಷೆ ಯಾಯಿತು. ೧೮೦೯ರಲ್ಲಿ ಮೋರ್ಲೆ-ಮಿಂಟೋ ಸುಧಾರಣೆಯಿಂದ ಹೆಚ್ಚಿನ ಅಧಿಕಾರ (ಹಕ್ಕು)ಗಳು ದೊರೆತವು. ೧೯೧೪ ರಿಂದ ೧೯೧೮ರ ವರೆಗೆ ಯುರೋಪದ ೧ನೇ ಮಹಾಯುದ್ಧವಾಗಿ ಹಿಂದೀ ಜನರಿಂದ ಇಂಗ್ಲಿಷರಿಗೆ ಸಹಾಯವಾಯಿತು. ಅದಕ್ಕಾಗಿ ೧೯೧೯ ರಲ್ಲಿ ಮೌಂಟ-ಫರ್ಡ ಸುಧಾರಣೆ ದೊರಕಿತು. ಮತ್ತು ಮತದಾನದ ಹಕ್ಕು ಹೆಚ್ಚಾಗಿ ದೊರಕಿತು. ೧೯೨೭ರಲ್ಲಿ ಸಾಯಮನ್ ಕಮೀಶನ ಬಂದು ಹಿಂದುಗಳಿಗೆ ಸ್ವರಾಜ್ಯದ ಹಕ್ಕು ಎಂಥದು ಕೊಡತಕ್ಕದ್ದು? ಎಂಬ ಬಗ್ಗೆ ರಿಪೋರ್ಟ್ ಪಾರ್ಲಮೆಂಟಗೆ ಕಳಿಸಿತು. ಲಂಡನವಲ್ಲಿ ಮೂರು ಸಾರೆ ದುಂಡುಮೇಜಿನ ಪರಿಷತ್ತು ಕೂಡಿತು. ಹಿಂದು ಸ್ತಾನದ ಪುಢಾರಿಗಳು ಹಾಜರಿದ್ದರು. ೧೯೩೫ ರಲ್ಲಿ ಇಂಡಿಯಾ ಬಿಲ್ಲು ಪಾಸಾಗಿ ಹೊಸ ಕೌನ್ಸಿಲುಗಳು ಅಸ್ತಿತ್ವದಲ್ಲಿ ಬಂದವು.

# ಕೃತಜ್ಞತೆ

ಶ್ರೀಮಾನ್ '' ಗಲಗಲಿ '' ಯವರು ತಮ್ಮ ಅನೇಕ ಕೆಲಸಗಳಲ್ಲಿಯೂ ಬಿಡುವು ಮಾಡಿಕೊಂಡು, ವಿನಾಮೂಲ್ಯವಾಗಿ ಈ ಹೊತ್ತಿಗೆಯನ್ನು ಬರೆದುಕೊಟ್ಟಿದಕ್ಕಾಗಿ, ಎಲ್ಲ ಹಕ್ಕುಗಳನ್ನೂ ನೀಡಿದ್ದಕ್ಕಾಗಿ ಅವರಿಗೆ ನಾನು ತುಂಬಾ ಋಣಿಯಾಗಿರುವೆ. ಅವರ ಈ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೆ. ಅವರಿಗೆ ನನ್ನ ವಂದನೆಗಳು

— ಆಕಳವಾಡಿ ರಾಮಣ್ಣಾ







ಮುದ್ರಕರು:
**ಎಚ್. ಬಿ. ನವಲೂರ,**
ಉದಯ ಮುದ್ರಣಾಲಯ, ಧಾರವಾಡ.

ಪ್ರಕಾಶಕರು:
**ಕೆ. ಕೆ. ಗಲಗಲಿ,**
ಸವದತ್ತಿ.